# ಐಂದ್ರ ಕೀರ್ತಿ ಕೇತನಂ

## ಮಲ್ಲಿಕಾ

ಶ್ರೇಯೋ ಹಿ
ಮರಣಂ ಯುದ್ಧೇ ।
ಕ್ಷತ್ರಿಯಸ್ಯ
ಪಲಾಯನಾತ್ ॥

॥ ಶ್ರೀಕೃಷ್ಣ ಪಾದಾರ್ಪಣಮಸ್ತು ॥

# ಐಂದ್ರ ಕೀರ್ತಿ ಕೇತನಂ

## ಮಲ್ಲಿಕಾ

ಲಕ್ಷ್ಮೀ ಪ್ರಕಾಶನ
170, ಲ್ಯಾಂಗ್ ಫೋರ್ಡ್ ರೋಡ್
ಬೆಂಗಳೂರು–560 025

# ಮುನ್ನುಡಿ

ಬಹುದಿನಗಳಿಂದೆನ್ನೆರ್ದೆಯೊಳ್ ಪುದುಗಿರ್ದು ತಾನೇತಾನ್ನೈಸಿ ಅಂತರ್ವಾಹಿನಿಯೊಲ್ ಉಕ್ಕಿ ಜಳಜಳಿಸುತ ಮುಂಬರಿದು ಚಿತ್ತಭಿತ್ತಿಯಂ ತೊಳಗಿ ಬೆಳಗಿ, ಚಿತ್ಕಾಂತಿಯು ರಸಕೋಶವಂ ಬೊಕ್ಕಮೈಯೊಡೆದೀ ಹಳಗನ್ನಡಕಸ್ತೂರಿಯ ಚಿಂಕೃತಿ "ಐಂದ್ರ ಕೀರ್ತಿ ಕೇತನಂ" ಮಹಾಭಾರತ ಕಥಾವಳಿಯ ಸಿಂಧುವಿನಲೊಂದು ಬಿಂದು ಮಾತ್ರಂ. ಇಂದು ತೃತೀಯ ಮುದ್ರಣದೊಳ್ ಮೈಗೊಂಡು ನಡೆಮಾಡನೇರುತಿರೆ ಭಾವುಕ ಓದುಗರ ಕರಕಮಲಗಳಿಗಿತ್ತು ವಿರಮಿಸುವೆಂ. ಗ್ರಹಿಪುದು ಬಿಡುವುದು ಮೇಣ್ ಪರಕೆಯೀವುದು ಭಾವುಕ ಜಾಣರಿಂಗಕ್ಕು.

ಪರಬ್ರಹ್ಮನ ರಾಣಿಯ ಪಾದಸೇವೆಯುಂ ಸಡ್ಡೆಯಿಂ ನೇಮದಿಂ ವಿನಮ್ರತೆಯಿಂ ಗೆಯ್ಯುತೆ ಮನತುಂಬಿ ಎರ್ದೆತುಂಬಿ ಪೊದಳ್ದ ತಪ್ಪೊಪ್ಪುಗಳಂ ದೇವಿಯ ಪದತಲದೊಳೊತ್ತೆಯಿತ್ತು ಕಣ್ಮುಗಿದು ಕೈಮುಗಿದು ತಲೆ ಮಣಿವೆಂ.

ಮಾತುಮಾತಿಂಗೆ ಪೆಂಗಳೆಯರ ಕೃತಿರಚನೆ ವ್ಯರ್ಥಗಿರ್ಥವೆಂದು ಅಣಕವಾಡುವ ಗಂಡೆರ್ದೆಗಳ್ ಪಿಂತಿಕುರ್ವ ಸವಿದಿನೆನ್ನ ಪಳಿಯೆ ಕುಗ್ಗಿ ಸೋಲ್ತು ತತ್ತರಿಪನಿತು ಜಡಮೇಂ ಕೂರ್ಮೆಳ್ಳಿನ ಲೆಕ್ಕಣಿಕೆಯೆನ್ನ ? ತಪ್ಪೊಪ್ಪುಗಳಂ ದೇವಿಯ ಪದತಲಕೊತ್ತಿದ ಬಳಿಕಂ ಲಜ್ಜೆಗಿಜ್ಜೆಯ ಚಿಂತೆಯುಮಿಲ್ಲ. ಮಾನ್ಯಾಮಾನ್ಯತೆಯ ಸುಖದುಃಖಗಳ ಗೋಜಿಲ್ಲ.

ಮೊಲ್ಲೆ ಬನದೊಳ್ ಮೊಲ್ಲೆಯಲ್ಲದೆ ಬೇರೊಂದು ಅರಳಲಕ್ಕುಮೆ? ಮೊಲ್ಲೆಬನದ ಸಂಶೋಭೀ ಮಲ್ಲಿಕಾ ಇಂ ಮಿಡಿ ಮೊಗ್ಗು ಕಣಾ!

ಆಶ್ವಯುಜ ಶುಕ್ಲ ದಶಮಿ
ಮಂಗಳವಾರ

ಮಲ್ಲಿಕಾ
೧೦-೧೦-೧೯೮೯

ಕನ್ನಡ ಸಾಹಿತ್ಯ ಪರಿಷತ್ತಿನ ಮುಖ ಪತ್ರಿಕೆ

# ಕನ್ನಡ ನುಡಿ

## ಅಭಿಪ್ರಾಯ

ಕನ್ನಡದ ಕವಿಗಳು ಮಹಾಭಾರತ ಮತ್ತು ರಾಮಾಯಣದ ಕಥಾವಸ್ತುವನ್ನು ಗತಾನುಗತವಾಗಿ ಬಳಸಿಕೊಂಡು ಸಾಹಿತ್ಯ ರಚಿಸಿರುವುದನ್ನು ಕಾಣಬಹುದು. ಅಂತೆಯೇ ಮಲ್ಲಿಕಾರವರು ಸಹ ಮಹಾಭಾರತದಲ್ಲಿಯ ಕುರುಕ್ಷೇತ್ರದ ಕಥಾವಸ್ತುವನ್ನು ತೆಗೆದುಕೊಂಡು ಅಲ್ಲಿ ಬರುವ ಕಿರಿಯರ ಅದರಲ್ಲಿಯೂ ಅಭಿಮನ್ಯುವಿನ ಬಿಲ್ವಿದ್ಯೆಯ ಸಾಹಸ ಪ್ರೌಢಿಮೆಯನ್ನು ಮೆರೆದಿರುವುದನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ ಈ 'ಐಂದ್ರ ಕೀರ್ತಿ ಕೇತನ'ದಲ್ಲಿ.

ಅಭಿಮನ್ಯು ಎಳೆವಯಸ್ಸಿನಲ್ಲಿಯೇ ಪಿರಿದಪ್ಪ ಅಭ್ಯಾಸವಿಲ್ಲದೆ ಸಕಲ ಶ್ರೇಷ್ಠ ಬಿಲ್ವಿದ್ಯೆಯನ್ನು ಕಲಿತು ಕುರುಕ್ಷೇತ್ರದ ಯುದ್ಧದಲ್ಲಿ ಅರ್ಜುನನ್ನು ಹೊರತಾಗಿ ಪದ್ಮವ್ಯೂಹವನ್ನು ಭೇದಿಸಲಾಗದೆ ಪಾಂಡವರು ತತ್ತರಿಸಿ ಬೇಡಿಂಗೆ ಬಂದು ಚಿಂತಾಕ್ರಾಂತರಾಗಿರುವಾಗ ಕೆಚ್ಚೆದೆಯ ಬೀರರ ಬೀರ ಅಭಿಮನ್ಯು ಅಭೇದ್ಯವಾದ ಪದ್ಮವ್ಯೂಹವನ್ನು ಭೇದಿಸಿ ಒಳನುಗ್ಗಿ ವೈರಿಗಳ ರುಂಡವನ್ನು ಚೆಂಡಾಡಿ ವೀರ ಮರಣಗೈದು ಇಂದ್ರ ಧನುರೇಂದ್ರ ಕೀರ್ತಿಕೇತನನಾದ ಎಂಬುದನ್ನು ತಿಳಿಸುವ ಹಿನ್ನೆಲೆಯಲ್ಲಿ ಇಡೀ ಕುರುಕ್ಷೇತ್ರದ ಯುದ್ಧದ ಪಕ್ಷಿನೋಟವನ್ನು ವರ್ಣನಾತ್ಮಕವಾಗಿ ಲೇಖಕಿಯರು ಇಲ್ಲಿ ಚಿತ್ರಿಸಿದ್ದಾರೆ.

ಅಮೋಘವಾದ ವರ್ಣನಾ ಕೌಶಲ್ಯ, ಕಲಾತ್ಮಕತೆಯ ಬೆಡಗು–ಬಿನ್ನಾಣ, ಔಚಿತ್ಯಾರಿತ ಪಾತ್ರಗಳ ಚಿತ್ರಣ, ಸಂಭಾಷಣೆಯ ವೈಖರಿ, ಶಬ್ದಾಡಂಬರದ ಲಾಲಿತ್ಯ ಇವೆಲ್ಲವೂ ತಮ್ಮ ಪ್ರತಿಭಾ ಮೂಸೆಯಿಂದ ಮೂಡಿ ಬಂದು ಓದುಗರಲ್ಲಿ ಕುತೂಹಲವನ್ನು ಕೆರಳಿಸಿ ಮನಸೆಳೆಯುವುದಲ್ಲದೆ ಪಂಪ, ರನ್ನ ಮತ್ತು ಮುದ್ದಣರ ಚಿತ್ರಣವನ್ನು ಸ್ಮೃತಿಪಟಲದ ಮುಂದೆ ತಂದು ನಿಲ್ಲಿಸುತ್ತಾರೆ ಮಲ್ಲಿಕಾರವರು.

ಕೌರವರಲ್ಲಿಯ ಕೆಲ ಪಾತ್ರ ಚಿತ್ರಣಗಳು ಮಾತ್ರ ಅಭಿಮನ್ಯು ವೆಂಬ ವೀರಾಧಿವೀರನಿಗೆ ಪ್ರತಿಸ್ಪರ್ಧಿಯಾಗುವಂತೆ ಚಿತ್ರಿಸಿದ್ದಾರೆ. ದುರ್ಯೋಧನ, ದುಶ್ಯಾಸನ, ಕರ್ಣ, ದ್ರೋಣಾಚಾರ್ಯ ಮೊದಲಾದವರ ಕುಹಕ ಬುದ್ಧಿಯನ್ನು ತೀರಾ ಮಾರ್ಮಿಕವಾಗಿ ಚಿತ್ರಿಸಿ, ಭೀಷ್ಮ, ಕೃಷ್ಣ, ಧರ್ಮರಾಯ, ಕುಂತಿಯರ ನಡಾವಳಿ ಗಳು–ನೀತಿ ಬೋಧಕಗಳು ಸಜ್ಜನಿಕೆಗೆ ಪ್ರತೀಕವಾಗಿ ಮೂಡಿ ಬಂದಿವೆ.

ಈ ಕೃತಿಯು ಗದ್ಯ–ಪದ್ಯ–ನಾಟಕ ಇವ್ಯಾವು ಅಲ್ಲದ ಎಲ್ಲವೂ ಸಮ್ಮಿಶ್ರವಾದ ಮಾಧ್ಯಮದಲ್ಲಿ ಮೂಡಿಬಂದಿದೆ. ಭಾಷಶೈಲಿಯು ತುಂಬಾ ಸೊಗಸಾಗಿದ್ದು ಹಳಗನ್ನಡ–ನಡುಗನ್ನಡದ ಸೊಗಡು–ಬನಿ, ಭಾಷಾವೈವಿಧ್ಯ, ಶಬ್ದಗಳ ಲಾಲಿತ್ಯ ಮೊದಲಾದವುಗಳು ಓದುಗರನ್ನು ಮೋಹಕಗೊಳಿಸುವುದರಲ್ಲಿ ಯಾವ ಸಂದೇಹವಿಲ್ಲ.

ಕಥೆ ವೇಗವಾಗಿ, ಕ್ರಿಯಾತ್ಮಕವಾಗಿ ಸಾಗುವುದರಿಂದ ಪ್ರಧಾನ ಪಾತ್ರಗಳ ಹಾಗೂ ಇತರ ಪಾತ್ರಗಳಲ್ಲಿ ಕೊಂಚ ಆತಂಕ, ಗೌಣತೆ ಕಂಡುಬರುತ್ತಿದೆ. ನಡುಗನ್ನಡದ ಭಾಷಾ ಶೈಲಿಯನ್ನು ಹೆಚ್ಚು ವ್ಯಗೂಡಿಸಿಕೊಂಡ ಮಲ್ಲಿಕಾರವರು ಈ ಕೃತಿಯಲ್ಲಿ ಮುದ್ದಣನ ಭಾಷಾಶೈಲಿಯನ್ನು ಅನುಕರಿಸಿರುವರು. "ಕೆಲ ಓದುಗರಿಗೆ ನೀರಿಳಿ ಯದ ಗಂಟಲಲ್ಲಿ ಕಡುಬು ತುರುಕಿದಂತೆ" ಎಂದೆನಿಸಿದರೂ ಸರಾಗ ವಾಗಿ ಓದಿಸಿಕೊಂಡು ಹೋಗುವುದರಲ್ಲಿ ಅನುಮಾನವಿಲ್ಲ.

ಸಾಹಿತಿಯಾಗಿ ಮಲ್ಲಿಕಾರವರಿಗೆ ಜನತೆಯಿಂದ ಸಲ್ಲಬೇಕಾದ ಮನ್ನಣೆ ಅಷ್ಟು ಸಿಗಲಿಲ್ಲ ಎಂದೆನಿಸುತ್ತದೆ. ಅವರ ವೈವಿಧ್ಯಮಯವಾದ ಭಾಷಾಶೈಲಿ, ಪ್ರತಿಭೆ, ಹಳಗನ್ನಡ, ನಡುಗನ್ನಡ ಆಧುನಿಕ ಮತ್ತು ಕನ್ನಡದ ಅಧ್ಯಯನದ ವಿಪುಲ ಪರಿಶ್ರಮ, ಪ್ರಾಮಾಣಿಕತೆಗಳ ದೃಷ್ಟಿ ಯಿಂದ ನಿಜಕ್ಕೂ ನೆನಪಿಡಬೇಕಾದ ಮಹಿಳಾ ಸಾಹಿತಿಗಳಲ್ಲೊಬ್ಬ ರಾಗಿದ್ದಾರೆ. ನಮ್ಮ ಸಾಹಿತಿಗಳು, ವಿದ್ವಾಂಸರು, ವಿಮರ್ಶಕರು ಇಂಥಹ ಸಾಹಿತ್ಯವನ್ನು ಇನ್ನಾದರೂ ಗುರುತಿಸಿಯಾರೆ ?

— o —

# ಐಂದ್ರ ಕೀರ್ತಿ ಕೇತನಂ

## ಪ್ರಥಮಾಶ್ವಾಸಂ




ಓಮೋ! ಲೋಕಲೋಕಜ್ಞನೆನಿಪ್ಪ ಕಾಲಕಂಠೀರವಂಗೆ ದಮ್ಮ ಕಮ್ಮ ಮಣಮಿಲ್ಲಂ ಗಡ! ನಿಚ್ಚಂ ನಡೆಯೊಳ್ ಭ್ರಾಮಕಾಸ್ತ್ರಂ ಗಡ! ಕಟ್ಟುಬ್ಬರದ ಕಟ್ಟಾಸುರಂ ಗಡ! ಆರುಮಂ ಲೆಕ್ಕಿಸದೆ ಮಂಕುಮಾಯೆಯಂ ತೀವಿ ಗಾರುಗೆಡಿಸಿ ಸಿಡಿಲಿನಂತೆರಗುಗುಂ ಗಡ! ಒಡಲೊಳ್ ಗುಡುಗುಟ್ಟಿಸಿ ಎರ್ದೆಯಂ ಕಿಡಿಸಿ ತಲೆಯಂ ಸಿಡಿಸುವನಕ್ಕು! ಮಾಗಿಯೊಳ್ ಮುಗುಳ್ದು, ಸುಗ್ಗಿಯೊಳ್ ಸೊಗಯಿಸಿ, ಕಾರೊಳ್ ಜರ್ರನೆ ಕಾರುವ ಕಡುಬೀರಂ ಗಡ! ಸೋಲ್ತು ಗೆಲ್ವ, ಗೆಲ್ದು ಸೋಲ್ವ ನಿಜ ಪಾವಕಂ ಗಡ! ಮಾದೇವಿಯ ಕರಕಮಲದಿಂ ತುಳುಂಕಿದುದೊ ಎನೆ ಗೂಢಾದ್ಗೂಢತರಂ! ಅಖಂಡಂ, ಅವರ್ಣ್ಯಂ, ಅವರ್ಜ್ಯಂ, ಕಾಲಂ ಜಾಲಂ! ಕಾಲಂ ವಿಚಿತ್ರಂ! ೧೦

ಎಲೆಲೆ, ಕೋಗಿಲೆ! ಏಕಿಂತುರ್ಬಿ ನಲಿವೈ ? ಚಿಃ, ಕಾಲಗತಿ ಗಿಂತು ಮರುಳಪ್ಪರೇಂ ಪೇಳ್ ? ಈ ಮಧುಮಾಸಮುರುಳದೇಂ ಕಡುಬೇಸಗೆಯ ಕಟ್ವಾಸುರನೋಲೈಸೆ? ಇಂದೇಂ ಮುದಂ ಮದಂ ಮೈಗೂಡಿ ಮೈವೆರ್ಚಿ ಬಾಯ್ಬಿಡುವೆಯೆಲೆ ? ಏಂ ರಾಗಂ ? ಏಂ ಉತ್ಸಾಹಂ ? ಮಾಮರದ ಪಚ್ಚಗಳಸಮಂ ಮೆಚ್ಚಿ ಬೀಗಿ ರ್ಪೆಯೇಂ ? ಅಹಃ, ಮತ್ತಿದೇಂ ಮತ್ತಂ ಮತ್ತಂ ಬಾಯ್ಬಿಡುವೆ ಚಂಚಲ ದೃಷ್ಟಿಯನತ್ತಮಿತ್ತಂ ಸಂಚಲಿಸಿ. ಮಳೆ ಮಂಜುದೆರೆ ಮುಸುಂಕಿ ಮಾಮರದರಮನೆಯುಂ ಬಾಸಣಿಸಿರೆ ಇಂತಪ್ಪ ಪೆರ್ಮೆ ಯೇಂ? ಎಳೆದಳಿರ್ದಟ್ಟಣಿಸಿ ಮಿಡಿ ಮೊಗ್ಗರಳಿ ಜಗದಗಲಂ ಕ್ಷೇಮ ಮಿಂತಿರ್ಕುಮೆಂಬ ಬೆಮೆಯೇಂ ? ಬಿಡು, ಬಿಡು, ಇದಂ ವ್ಯರ್ಥಂ, ಆಶೆಯುಂ ಪಾಶಂ. ಪೆರ್ಚಿನ ಪುರುಳೇನಿಲ್ಲಂ ಬರುವಾಳ್ಕೆಯ ಬರ್ದುಂಕಿನೊಳ್. ೨೦

ಬೆಳ್ಳಿಯ ಬೆಳ್ಳಕ್ಕಿಗಳೇ ? ಇಂತಿದೇಂ ಸೊಗಸಿನ ಕೂಟಂ ಮಾಟಂ ಬೇಟಂ ? ಇಂತು ಪಿಂಡು ಪಿಂಡೈಸಿ ಮೆಯ್ಯಂ ಬಳುಂಕಿಸಿ ಅಂಡಲೆಯಲ್ಕೆ ಆವ ಕತಮಿರ್ಕುಂ ? ಮುಂಬಯಣಕೊಪ್ಪಮಿಡೆ ಗ್ರಹಗತಿಯನಾರೈವಿರೇಂ ಜೋಯಿಸರಂ ಕಂಡು ? ಆವ ದಿಕ್ಕಿನೊ ಳಾವಕೊಳಂ ಸಮೃದ್ಧಮಿರ್ಕುಂ ಮೀಂಗಳ್ಗೆಂದು ಪುಡುಕುವಳ್ಕ ರೆಯ ನೋಡಿಯಿದೇಂ? ಅಹಃ, ಬಣ್ಣನೆಯ ನುಡಿಗಳಿಂ ನುಡಿಸಿ ಪಾಡಿಸಿ ನಲಿಸಿ ನುತಿಸಿ ಮೀಂಗಳಂ ಸೆಳೆದು ತಿಂಬ ಸಂಚಿದಲ್ತೆ? ೩೦ ಅಕ್ಕಟಾ! ಒರ್ವನೊರ್ವನುಂ ನುಂಗುವ ಕೀಳ್ತನಮೆ ತಿರೆಯೊಳೆ ಲ್ಲೆಲ್ಲಿಯುಂ. ಇಂತಿದುಂ ಪೇಸಿಕೆಯ ನಾಣ್ಚಿಕೆಯ ಕಜ್ಜಮಲ್ತೆ ?

ಎಲೆ, ಚಂದಳಿರರಮನೆಯ ಚಾದಗೆಯೆ ! ನಿನ್ನ ನಡೆ ನುಡಿ ಯೊಳ್ ಇನಿತೊಂದು ಬಿನ್ನಣಮೇಕೆ? ಶ್ರಾವಣಮಿದೆಂದು ಬಾಯ್ಬಿ ಡುವೆಯೇಂ ? ನೀಂ ತಪ್ಪಿದೆಯ್, ತಪ್ಪಿದೆಯ್ ಅದಿನ್ನುಂ ದೂರ ಮಿರ್ಕುಂ. ಓ ಓ ! ಎನ್ನೀ ನುಡಿಯಣಮಂ ಕಡೆಗಣ್ಚಿ ಮತ್ತಿ

ದೆತ್ತಣ ಸಡಗರಂ ಸಂಭ್ರಮಂ ? ಆವೆಡೆಗೆ ಪೋಗಲ್ವೇಳ್ಕುಂ ?
ಎರಂಕೆಯೊದರಿ ಎರಂಕೆ ಬಿರ್ಚಗಲಿಸಿ ಆವೆಡೆಗೆ ಜಿಗಿಯಲಿರ್ಪ
ಸಂಚು ? ನಿನ್ನ ಕೆಳದಿಯರ್ಗಾವ ಸಂದೇಶಂ? ಒಡನೊಡನೆ ಜೊತೆ
ಗೂಡಿ ಬರವೇಳ್ಕುಮೆಂದಲ್ತೆ? ತಾಯ್ನಾಡ ಬಿಸಿಲ ಬಿಸರದ ಬೆಂಕೆ ೪೦
ಹೊಂಚಿದುದೇಂ ಮುಂಬಯಣಮಂ? ಓವೋ ! ಸಾಲ್ಗು ಮಿಾ ಸಿರಿ
ವೊಳ್ತಿನ ಸಂಚು? ಕಾರ್ಮೋಡಮಿಲ್ಲದಿಂತು ಗಗನಮುಖಂ ನಿರ್ಮಲ
ಮಿರೆ ಎಲ್ಲೆಡೆಯುಂ ಜಲಾಗಮನಂ ಬರಿಗನಸಲ್ತೆ ? ಮುಂಗಾರುಂ
ಸಧ್ಯದೊಳಿಲ್ಲಂ. ಮಾಣ್, ಮಾಣ್ ! ನಿನಗೆತ್ತಣ ಪುರುಪು ?

ಎಲೆಲೆ, ಮಿರು ಮೆಯ್ಯ ನೀಲ ನವಿಲೆ ! ರಂಗು ರಂಗಿನ ಕಣ್ಣು
ಕಣ್ಣಿನ ಸೊಬಗುಗುವ ಅಂದಚಂದದ ಸೋಗೆ ನವಿಲೆ ! ಏನೀಗಳುಂ
ಹಸ್ತಿನಪುರಮಂ ಕುರಿತು ಮುಂಬಯಣಮೆ ? ಅರಮನೆ ಚಿನ್ನ
ಗಳಸಂ ಕೈವೀಸಿ ಕರೆಯುತಿರ್ಪುದೇಂ ? ಮೇಣಲ್ಲಿನ ಕೈದೋಂಟ
ದೊಳಾಡುವ ನಿಡು ಬಯಕೆಯ ಸಡಗರಮಿದೇಂ? ಓ, ಈಗಳರಿತೆಂ,
ಅರಿತೆಂ ; ನೀನಿತ್ತಲಿರೆ ಅರಿವುದೆಂತೈ ಜುದ್ದ ಬಾರ್ತೆಯಂ? ಕಾಡುಂ ೫೦
ನಾಡುಂ ದೂರದೂರಮಿರ್ದು ಸುಕದುಕ್ಕಂ ತಿಳಿವುದೆಂತು ? ಬಿಡು,
ಬಿಡು ; ಈಗಳಾಗಳ್ ಪುಗಲಾಣತಿಯಿಲ್ಲಂ. ಹಸ್ತಿನಪುರಂ ಇಂದ್ರ
ಪ್ರಸ್ತಂ ಯುದ್ಧದುಜ್ಜುಗದೊಳ್ ನಿಚ್ಚಂ ಬದ್ಧಂ. ಕಾಪಿನವರ್
ಮಾವುತರ್, ರಾವುತರ್, ಜೋದರ್ ತಂತಮ್ಮ ಅಸ್ತ್ರಶಸ್ತ್ರಮಾದ
ಕೂರ್ವಾಳಂ, ಇಟ್ಟಿಯುಂ, ಕಕ್ಕಡೆಯುಂ, ಕಡಿಗತ್ತಿಯುಂ,
ಮುಸುಂಡಿಯುಂ, ಗದೆಯುಂ ಕೈಕೊಂಡು ಸುತ್ತಮುತ್ತಂ ಪಗ
ಳಿರುಳ್ ಕಾದಿರ್ಪರ್. ಈಗಳತ್ತ ನೀನಿಣಿಕಿದೊಡಂ ಬಿರ್ದುಣಿಸಪ್ಪೆ
ಜೋದರ್ಗೆ ! ಎಚ್ಚರಿರು ! ಕುರುಪಾಂಡವರ್ಗೆ ಪುಟ್ಟನಿಂದೆಣ್ಣೆ
ಸೀಗೆಯೆಂಬುದಂ ನೀಂ ತಿಳಿದಿರ್ಪೆಯಲ್ತೆ ? ಈಗಳದು ಬಲಿತು
ಜುದ್ಧಮಂ ಸಾರ್ದುದು ಕಾಣ್ ! ಇಂತಪ್ಪ ಕುಲಬೀರರ್ ೬೦
ಕಚ್ಚಾಡಿ ಕಡಿದು ಕೊಳ್ಚಿ ಕೆನ್ನೆತ್ತರಂ ಕಾರಿ ಸಗ್ಗಮಡರ್ವುದು
ವಿಧಿಲಿಖಿತಮಲ್ತೆ ? ಅಕ್ಕಟಾ ! ಏಂ ಕಿಡುಗಾಲಂ ಬೀರರ್ಗೆ ? ಶಿವ

ಶಿವಾ! ಬಿಲ್ಲಾಳ್ತನದ ಬೀರರ್ಗೆ ಜಯಮಕ್ಕೆ ! ಓ, ಅಲ್ತಲ್ತು ! ತಪ್ಪಿದೆಂ ! ಆಂ ತಪ್ಪಿದೆಂ ! ಎನಗುಂ ಪುರ್ಚು ಕಣಾ ! ಪುರ್ಚು, ಪುರ್ಚು ! ಸತ್ಯಕ್ಕೆ—ಧರ್ಮಕ್ಕೆ ಮೇಣ್ ಒಳ್ಳಿದರ್ಗೆ ಜಯಮಕ್ಕೆ ಶುಭಮಕ್ಕೆ ! ಮೇಲಕ್ಕೆ ! ಗೆಲವಕ್ಕೆ !

ಎನ್ನ ಮುದ್ದಿನ ನವಿಲೆ! ಬೀರರ ಬಾರ್ತೆಯೊಳ್ ನಿನ್ನಂ ಮರೆತು ಜಾಡು ತಪ್ಪಿದೆಂ. ಹಾ, ಈಗಳಿದೇಂ ನಿನ್ನ ಸಿರಿಮೊಗದೊಳ್ ಚಿಂತೆಯು ಪಡಿಯಚ್ಚು? ಇಂತೇಂ ಅರೆಚಣದೊಳ್ ನೆಚ್ಚುಗೆಟ್ಟಂತೆವೊಲ್ ಕಳೆಗೆಟ್ಟೆ ? ಕೇಳ್, ಕಿವಿಗೊಟ್ಟು ಕೇಳ್ ? ೭೦
ಎನ್ನೀ ನುಡಿ ಪುಸಿಯಲ್ತು. ನಿಚ್ಚ ಸೊಗದಿಂ ಬಾಳ್ಗೆ ನಾಡಿಂ ಕಾಡು ಲೇಸು! ಇಂತಪ್ಪ ಮಾಂಜಳಂ, ಪಲಸು, ಪನ್ನೇರಿಳೆ, ನೇರಿಳೆ ಇತ್ಯಾದಿ ತರತರದ ಫಲವೃಕ್ಷಲತಾದಿ ಗಿಡುಗೆಂಟೆಗಳ ಸಂದೋಹಂ! ನೀರ್ದಾಣದೊಳ್ ಪುಟ್ಟಿ ತಂಪುಂಡು ಮೈಸೊರ್ಕಿ ಸುತ್ತಿಸುತ್ತಿ ಪಲವಾರು ಮಾರು ಮುಂಬೆಳೆದು ಪೆರ್ಮೆಣಿಯಾಗಿ ತೋರಮರವನೇರ್ದು ಕಾರ್ಗಾಳಿಗೊಲಿದು ತಲೆದೂಗುವ ನೀಲನಿಚುಲದಿಂದೆಯುಂ; ಕೋಳ್ಕೆಸರೊಳ್ ಕಾಲ್ಕುಸಿದು ಬಿಗಿನಿಂದ ಚೆಂದೆಂಗಿನ ಚೆಂಬಣ್ಣದ ಚೆಲ್ವಿನಿಂ ; ತನ್ನಂಗಿಯೆನೆ ತೆಳುಮೈದಳೆದ ಕೌಂಗಿನ ಪಚ್ಚನೆಯ ಮೈಸಿರಿಯುಂ; ಅರೆ ಮುಗುಳ್ತು ಪರಿಮಳಂ ಬೀರ್ದು ಪೆರ್ಮೆಯಿಂ ತಲೆದೂಗುವ ಮೊಲ್ಲೆಯಿಂ : ೮೦
ಕೂರ್ಮುಳ್ಳಿನ ಗಿಡದೊಳ್ ಹರಿದ್ವರ್ಣದ ಸಿಂಗರವೆತ್ತ ಜಾಜಿಯಿಂ ಮತ್ತಂ ಕಣಿಗಿಲೆ ದಾಸವಾಳ ಬೆಟ್ಟದಾವರೆ ಸೇವಂತಿಗೆ ಮುಂತಪ್ಪ ಪುಷ್ಪ ಪರಿವಾರದಿಂದೆಯಿಂ ತುಂಬಿ ತುಳುಂಕಿ ಮನೋಜ್ಞಮಾದೀ ನಲ್ದಾಣಂ ಸೊಗದಿಂ ಶಾಂತಿಯಿಂ ಬಾಳ್ಗೆ ಒಳ್ಳಿತು.

ಏಂ ಬಕರಾಜ ? ಇತ್ತಲಿತ್ತ ಮಿಣ್ಣನೆ ಮಾರ್ಗಲಿನ ಪಯಣಂ ? ತೆಂಗಡೆಯೊಳ್ ಕೆಮ್ಮಣ್ಣು ಪೆರ್ಗಡಾಯಿಯಂತೆ ಕಂಗೊಳಿಪ ನಿಡುಗೊಳನಲ್ತೆ ನಿನ್ನನೆಲೆವನೆಯುಂ ? ಮತ್ತಿದೇಂ ಇತ್ತ ಗಮನಂ ? ಮನದೊಳ್ ಪುರುಳಿಲ್ಲಂ, ಮೈಯೊಳ್ ಪುರು

ಡಿಲ್ಲಂ, ಮತ್ತೇಸಿರ್ಕುಂ ಮಾರ್ಗಾಲಿನ ನಡೆಯೊಳ್ ? ಓವೋ !
ಪೆರ್ಗ್ಗಾಲಿನ ಕಾರ್ಗ್ಗಾಳಿಯುಂ ನುರ್ಗಿ ಜರ್ವಿ ಬಗ್ಗು ಬಡಿವವೊಲ್ ೯೦
ಮಿಕ್ಕಿನ ತಕ್ಕಿನ ತಿಳಿನೀರಂ ಪೊಯ್ದು ಅವ್ವಳಿಸಿ ಜಾಲಾಡಿಸಿ ಅಲೆ
ಯೇಳಿಸಿ ಕೆಮ್ಮಣ್ಣಾಡಿಸಿ ಕೋಳ್ಕೈಸರೆನೆ ಕೆಂಗಲಿಸಿ ಮೀಂಗಳಿಗೆ
ಚೊಕ್ಕ ತೆರೆಯೊಡ್ಡಿದನೇಂ ? ಅಲ್ಲದೊಡೆ ಸಗ್ಗಗರಾಣ್ಮನ ಘನ
ಕರಿಘಟೆಗಳ್ ನಡುನೀರ್ಗ್ಗಿಳಿದು ನೀರಾಡಿ ಮಣ್ಣಾಡಿ ಮಿಂದೆಳ್ದು
ಬಗ್ಗಡಗೊಳಿಸಿದಪವೇಂ ? ಅಂತಿಪ್ಪೊಡಂ ಪೆರ್ಚಲ್ತು ಒರ್ಪೊ
ತ್ತೊಳ್ ನೀರ್ಪ್ಪಿಳಿಯಪ್ಪುದು. ಮಾಣ್, ಮಾಣ್ !

ಅಹ, ಬೂರುಗದ ಮರಮಿದೇಂ ನುಡಿಯುತಿರ್ಕುಂ ಮೈ
ಮನವೆರ್ಚಿದಂತೆವೊಲ್ ? ಇದೆತ್ತಣ ದನಿಯೊ ? ಸಗ್ಗದಾಣ್ಮಂ
ನುಡಿಸಿದನೇಂ ಬೂರುಗಮಂ ? ಅಲ್ತೆಂದೊಡೆ ಮತ್ತಿದೇಂ ಬಿಡು
ನುಡಿ? ಏಗಳುಂ ಇಂತುಸಿರ್ವೊಡೇಂ ಮಾಯದಾಟವೊ?ಮಂತ್ರದಾ ೧೦೦
ಟವೊ ? ಕಗ್ಗಾಡೊಳಲೆವ ಜಕ್ಕಿಣಿಯೊ ? ಆವಾವ ಕುಮ್ಮ
ಕ್ಕಿರ್ಕುಮಿಂತಿದರೊಳ್ ? ಎಡೆಎಡೆಯೊಳ್ ನುಡಿಯೆ ಬೂರುಗ
ಬಾಯಿ ಪಲವೇಂ ? ಅಲ್ತಲ್ತು, ಇಂತೆಡೆಎಡೆಯೊಳ್ ನುಡಿಯು
ತಿರ್ಪುದು ಪಂಡಿತವಕ್ಕಿಯ ಬಳಗಂ ಏಂ ಒಂದೇ ? ಎರಡೇ ?
ಲೆಕ್ಕಕ್ಕೆ ನಿಲುಕದವೊಲ್ ಒಗ್ಗೂಡಿವೆ ಪಲವು. ಸೆಳೆಗೊಂಬೆಯಿಂ
ಸೆಳೆಗೊಂಬೆಗೆ ಪಾರ್ದು ನಿಂತೆಡೆ ನಿಲ್ಲದ ಕುಳಿತೆಡೆ ಕೂರದ ಪಚ್ಚ
ಮೆಯ್ಯ ಕೆಂಚಿನ ಚಂಚೂಪುಟದ ಪಂಡಿತವಕ್ಕಿಯ ತಂಡಂ. ಏಂ
ಬೀಗಿರ್ಪಯ್ ? ನಲ್ನುಡಿವೆವೆಂಬ ಪೆರ್ಮೆಯೊ, ಬೆಳ್ನುಡಿಯೆಂಬ
ಕೊರ್ವೊ ಪೇಳ್? ನುಡಿದುದಂ ನುಡಿವೆ ಮತ್ತೆಮತ್ತೆ. ಬೇರೇನಂ
ಅರಿಯೆ. ಮತ್ತೇಂ ಪಂಡಿತನೆಂಬ ಬಿರುದು ? ನೇರೀಳೆಯ ೧೧೦
ಬಿರ್ದುಂಡೊಡೆ ಬರ್ಕುಮೆ ಪಾಂಡಿತ್ಯಂ ? ಏಪೊಳ್ತುಂ ಮಾತಿನ
ಮೋಡಿಯೊಳಿರ್ಪೆ ಮನಮಂ ಪುಟಪುಟಿಸಿ. ಲೋಗರ್ ನಿನ್ನ
ಸೊಲ್ಲಂ ಕೇಳ್ದೊಡೆ ನಿನಗಕ್ಕುಂ ಬಂಧನಂ !

ಓವೋ ! ಎಂತಪ್ಪ ಕಾರ್ಕ್ಕೋಣವಳಗಂ ? ನಲ್ವಿಂಡಿರಂ
ನಲ್ಲಕ್ಮಳಂ ಕೂಡಿ ಬಲ್ಮೆಯಿಂ ಮೈಗೆ ಮೈಯುರ್ಜಿ ಮಾಸಿ

ಮುಂಡಾಡಿ, ಪೆರ್ಮರನಂ ಪಾಯ್ದು ಕೋಡಿರಿದು ಕೊಳ್ಮಣ್ಣಾಡಿ,
ಕೆಂಗಣ್ ನಟ್ಟು ಮುಂಗಾಲಂ ಕುಟ್ಟಿ ಕುಟ್ಟಿ ನೆಲನಂ ಬಿರಂಟು
ತುರ್ಚಿ ಅತ್ತಲಿತ್ತಂ ಜಿಗಿದಾಡಿ ಗರ್ಜಿಪ ಮೋದಮಿದೇಂ ?
ಓವೊ, ಮುಂಬೆಳೆದ ಪಚ್ಚ ಪಸಲೆಯು ಬಿರ್ದುಂಡು ಮೈವೆರ್ಚಿ
ಮನವೆರ್ಚಿ ನಡಗರಿಪ ಸಂಭ್ರಮಮಿದಲ್ತೆ ? ಈಗಳೀಗಳ್ ರಾಜ್ಯ ೧೨೦
ದಾಣ್ಮರ್ ರಣರಂಗದುಜ್ಜುಗದೊಳ್ ಮನವಿಟ್ಟು ಇತ್ತಂ
ಸುಳಿಯದಿರ್ಕೆ ಬಿಯದರ ಬಿಲ್ಲಾಳ್ಗಳ ಕರಕುಶಲಮಂ ಅರಿಯಿರಲ್ತೆ?
ಇರ್ಕುಂ, ಇಂತಿರ್ಕುಂ ಭಯಮಿರದ ಸುಗಾಲಂ ಅನುಗಾಲ ಗಡ ?

ಅದೊ, ಏಂ ಮಿರುಮೆಯ್ಯ ಕೋಳ್ಮೃಗ ಕುಟುಂಬಂ ?
ಕಿವಿಯಂ ಪಟಪಟಿಸಿ ಮುಂಡು ಬಾಲಮಂ ಅತ್ತಿತ್ತಲಾಡಿಸಿ, ಪಣೆ
ಮಣ್ಣಾಡಿ ಸಂತಸವಟ್ಟು ನೆಗೆಯುತುಂ ಜಿಗಿಯುತುಂ ಕಡು
ಕಾಯ್ಪೇರಿದ ಮರಿಸಿಂಗನವೋಲ್ ಮುಂಡೆಯೆತ್ತಬ್ಬರಿಪ ಸಂಭ್ರಮ
ಮಿದೇಂ ? ಅಣುಕಿನ ತಳುಕಿನ ಸಂಗರಮಿದೇಂ ? ಓ ಓ! ಎನಿ
ತಂದಂ ? ಏಂ ಪುರುಪು ? ಏಂ ಕೂಟಂ ? ಏಂ ಬೇಟಂ ? ಏಂ
ಸರಸ ಸಲ್ಲಾಪಂ ? ೧೩೦

ಅಕ್ಕೊ, ಅಕ್ಕೋ ! ಸೂಕರಕುಳಂ ! ಪಿಂಡು ಪಿಂಡೈಸಿ
ಬುಳುಬುಳು ನುಗ್ಗುವ ಸಾಯಿರ ಸಾಯಿರ ಡೊಳ್ಳುವೊಟ್ಟೆಯ
ಗುಜ್ಜು ಮೆಯ್ಯ ಸಂಸಾರಂ! ಈ ಪರಿ ಗುರುಗುಟ್ಟುವ ಪುರು
ಡಿದೇಂ ? ಗಿಡುವಳ್ಳಿಗಳ ಬುಡಮಂ ಬಿರಂಟೆ ದಿಂಡುರುಳ್ಚಿ ಗೆಡ್ಡೆ
ಗೆಣಸಂ ಬಗೆದು ನಿಚ್ಚವರ್ಬದ ಮೆಚ್ಚಿನೊಳ್ ಮೆದ್ದು ಬಾಯಾರಿ
ನೀರ್ದಾಣಮಂ ಪುಗುವ ಪುರುಪಿದೇಂ? ಅಂಕೆ ಸಂಕೆಯಿಲ್ಲದ ನಿಡು
ಬಾಳ್ಗೆ ಸೀಗೆಡ್ಡೆಯ ಸೀಯೂಟಂ ! ಸೀನೀರಿನ ಸಿಹಿಪಾನಂ !
ಮತ್ತೇಂ ಕೊರತೆ ಬರ್ದುಂಕಿನೊಳ್ ?

ಇದೇಂ ವನಾಂತರದ ಗಜಿಬಿಜಿಯುಂ ? ಪೆರ್ಮರಂಗಳ್ ಗಲ
ಗಲನೆ ಅಲೆಯುತುಂ ಮಲೆಯುತುಂ ಮರ್ಮರಿಸುತುಂ ತಲೆಯಂ ೧೪೦

ತೊನೆಯುುವ ವಿಚಿತ್ರವಿದೇಂ! ಓ, ಈಗಳರಿತೆಂ, ಕಾರೊಡಲ ಪೇರಾನೆಯ ಪರಿವಾರಂ! ಮುಂಬರ್ಪ ಬಟ್ಟೆಯೊಳ್ ಸೊಂಡಿಲೆತ್ತಿ ಗಿಡುಮರಗಳನಲುಗಿಸಿಯುಂ ನಿಡುವಲ್ಗಳ ತೋರುತುಂ ಘೀಳಿ ಡುವ ಪೆರ್ಗಾಲಿನ ಕಳಭಂಗಳುಂ ಮುಂದೈಸಿ ಮುಂದೈಸಿ ಬೀರದಿಂ ಮುಂದೆಸೆಯೊಳ್ ಸರಿನಿಂದು ಪಿಡಂ ಮುನ್ನಡೆಸುವ ಪರಿಯಿದೇಂ? ಅಹಹ, ಸಾದಿಗಳಿತ್ತ ಸಾರದಿರ್ಕೆ ಇಂತಪ್ಪ ಸೊಗವುರ್ಕುವ ಬಾಳ್ತೆ ಕಾಣಿರೊ! ಎಚ್ಚರಿರ್ಕುಂ, ಎಚ್ಚರಿರ್ಕುಂ! ಇದುಂ ನಿಚ್ಚ ಮಲ್ತು! ರಣರಂಗದುಜ್ಜುಗಕೆ ನಿಮ್ಮಂ ಪಿಡಿದೊಯ್ವ ಕಾಲಂ ದೂರಮಿಲ್ಲಂ ಕಾಣಿರೊ!

ಅದೋ, ಅದೋ, ಸುತ್ತಮುತ್ತಲೆಲ್ಲೆಡೆಯಿಂ ಸಿಂಗಂಗಳ ಪೆರ್ಬುಲಿಗಳ ಕುರ್ಕಗಿರ್ಕಂಗಳ ತೋಳಕರಡಿಗಳ ವಾಸನೆಯುಂ ದಟ್ಟೈಸಿರ್ಕುಂ ಮತ್ತಮಾ ನಿಡುವಾಯ ಪೆರ್ದನಿಯುಂ ಆಗಳಾ ಗಳುಂ ಕೇಳುತಿರ್ಕುಂ. ಓ, ಇದೇಂ ಸೊರ್ಕೊ? ಕೊರ್ವೊ? ನಿಜಬಾಳ್ತೆಯ ನಾಕಸುಕವೊ? ಜಗದಾಣ್ಮನ ಆಣ್ಕೆಯೊ? ಏನಿರ್ಕುಂ. ಏನಾದೊಡೇಂ, ಇಚ್ಚೆಯುಂ ಪಚ್ಚೆಯುಪ್ಪಿ, ಪಗೆಯುಂ ಕಾಲ್ಮುರಿದು ದಶದಿಶೆಗೈಸಿ ಕೆಳೆಯುಂ ಕಳೆಗೊಂಡು ಬಾಳ್ವುದೆ ಸಂಪದಂ; ಸಿರಿಸಂಪದಂ. ೧೫೦

ಈ ತರತರದ ಮೃಗಂಗಳುಂ ಪಕ್ಷಿಗಳುಂ ಪಲ್ಲಿಗಳುಂ ಪಾವು ಗಳುಂ ಕ್ರಿಮಿಕೀಟಗಳುಂ ಜಲಚರಂಗಳುಂ ಲೋಕದ ರೋಡೆಗರ ಬಿಯದರ ಬಿಲ್ಲಾಳ್ಗಳ ಭಯಮಿನಿತಿಲ್ಲದೆ ಎಂದುಮೆಂದು ಸುಕ ಜೀವನದೊಳಿರ್ದೊಡೆ ಏಂ ಸೊಗವೊ? ಏಂ ಶಾಂತಿಯೊ? ಕಾಲ ಗತಿಯೊಳ್ ಎಲ್ಲಂ ಬರಿ ಕನಸಲ್ತೆ? ೧೬೦

ಮತ್ತಂ, ಮತ್ತಂ, ನೆಟ್ಟ ನಿಟ್ಟೋಟದಳತೆಯೊಳ್ ಹರಿ ಯುಂಗುಟದೆಡೆಯ ಪಚ್ಚಪಾಚಿಯೊರೆದ ಕಗ್ಗಲ್ಲರಾಶಿಯೊಳ್ ಕಾಲ್ಮುಕಿದು ದಿಮ್ಮನೆ ನಿಲ್ದ ಕೋಳ್ಗಲ್ಲ ತುತ್ತ ತುದಿಯೊಳ್

ಪುಟ್ಟಿ ತಟತಟನೆ ತೊಟ್ಟಿಕ್ಕಿ ಮುಂತೆ ಮುಂತೆ ಜಳಜಳನೆ ಪರಿದು
ನಿಡು ಪೊಳೆಯಾಗಿ ಭೋರ್ಗರೆದು ಮುನ್ನುಗ್ಗುವ ಪುಣ್ಯಧಾರೆ
ಪಯೋಷ್ಣೀ ನದಿಯುಂ ಬನಮುಂ ಸೀಳ್ದು ಕೊರೆದು ಮೊರೆದು
ಬಂಡೆ ಬಂಡೆಯಂ ಪಾಯ್ದು ಉಕ್ಕೇರ್ದು ಜಗಿದುರುಳ್ದುರುಳ್ದು
ಇರ್ಕೆಲದ ದಂಡೆಗಳಂ ಕೋರೈಸಿಯುಂ ಗಾರೈಸಿಯುಂ ತಣ್ಪಿನ ೧೭೦
ನೆಲೆಯಿಂ ಶಾಂತಿಯ ಮೈಮೆಯಿಂ ಸಕಲ ಜೀವಕೋಟಿಗುಂ ಜೀವ
ನಾಳಮೆನೆ ಎಡೆವಿಡದಾಶ್ರಯಮಿತ್ತು ತಿರೆಯೊಳ್ ಪಿರಿದೆನಿಸಿ
ಪರಿದಿಹಳ್ ಕಣ್ಗೆಡ್ಡವಾಗಿ. ಸಾರ್ವರ್ತುಕಮೆನಿಸಿದ ವಾಮಾಂಗದ
ಮಟ್ಟಸದಾಣದೊಳ್ ಚೆಂದೆಂಗಿನ ಪಚ್ಚಕೌಂಗಿನ ತಾಳೆಯ ಸುಳಿ
ವಾಳೆಯ ದಾಳಿಂಬದ ಮಾವಿನ ಬೇವಿನ ಪಲಸಿನ ಕಿರುನಾರಂಗದ
ಹೊನ್ನೆಯ ನೇರಳೆಯ ಮತ್ತಮಾ ಕಂಪುಗುವ ಬಗೆವಗೆಯ ಪುಷ್ಪ
ಕೋಟಿಯ ಪೊಸವೊಗೆಯ ನಿಡುದೋಂಟಂಗಳ ಚೆಲ್ವಂ, ಸಾಲು
ಸಾಲೆನೆ ಸಾಲ್ಗೊಂಡು ಗಿಡುಮರಂಗಳನೇರ್ದು ಕಾಯ್ವಿಟ್ಟು ಅಲ್ಲಲ್ಲಿ
ಪಣ್ತು ತೊಂಗಲಿಂಬಿಡಿದು ಜೋಲ್ದ ಮುದ್ದಿಗೆಯ ನಿಡುವಳ್ಳಿಯ
ಕಾವಣದಿಂ ನೀರ್ದಾಣದೊಳ್ ಬಂಡೆಳ್ದಂತೆ ಬಂಡೆಬಂಡೆಗ ೧೮೦
ಳೊತ್ತಿನೊಳ್ ಪಚ್ಚನೆ ಮೈಯೊಡೆದ ಹರಿತ ಶಾಡ್ವಲದಿಂ
ಕೇದಗೆಯ ಪೂವರಳ್ದು ಕಂಪುಗುವ ನಿಡುಪೊದೆಯಿಂ ಮೇಣ್
ಮುಂಡುಗದ ಪಿಂಡಿಲುಂ ಪಂತಿವಿಡಿದೊಪ್ಪಿರೆ ನದೀ ಪ್ರದೇಶಂ
ಸೊಗಯಿಸಿದತ್ತು ಎಲ್ಲಂ ಕಣ್ತಣಿಸಿ ಕೈಸೆಂದು ಬಾಯೊಳ್
ನೀರೂರುವವೊಲ್ !

ಮುಗಿಲಂ ಮುಂಡೆಯೊಳ್ ಸಿಲುಂಕುವ ಪೆರ್ಮರಂಗಳ ನಿಡು
ಗೊಂಬೆಯೊಳ್ ಅಲರ್ವಕ್ಕಿಗಳ್ ತಟ್ಟೆಯ ಕಟ್ಟಿಯೆಂತಂತು,
ಸಗ್ಗದ ಜಾಗಟೆಯೆಂತಂತು, ದೇಗುಲದ ನಗಾರಿಯೆಂತಂತು
ಪೇರರಿಯಂ ನೆಯ್ದು ಮಧು ಮಂದಿರಮಂ ನಿರ್ಮಿಸಿ ಮಧುವಂ
ತುಂಬಿ ಕಾದಿರೆ ಲಕ್ಷಾನುಲಕ್ಷಮುಂ ಮಾರ್ದನಿಡು ಸಂಖ್ಯೆಯೊಳ್, ೧೯೦
ಬನಂ ಜೇವೊಡೆದುದೊ ಎನಲ್ ಎಡೆವಿಡದೆ ಝೇಂಕರಿಪ ಸರಂ
ಸಪ್ತ ಶರದಿ ನಿರ್ಘೋಷಮುಂ ಮಾರ್ಮೊಡಿ ಮಾರ್ದತ್ತು

ಕೊಡಂಕೆಯುಂ ಕಿಡಿಸುವವೊಲ್ ! ಅಹ, ಕಿರುವಾಯ್
ಝೇಂಕಾರದೊಳ್ ಓಂಕಾರಮುಣ್ಮುವ ಮಾಟಮಿದೇಂ ?
ಅಹಹ, ಏಂ ಒಕ್ಕೂಟಂ ? ಏಂ ಎಡೆವಿಡದ ಕಜ್ಜಮುಜ್ಜುಗಂ ?
ಇಂತಪ್ಪ ಎಣೆಯಿಲ್ಲದ ಸಡಗರಮಿದೇಂ? ಸಿಸ್ತೆನೆ ಏಗಳುಂ ಪೊಳ್ತು
ಮೂಡುವ ಮುನ್ನಮೆಳ್ಚತ್ತು ವನಾಂತರಮಂ ಪುಗುವ
ಪುರುಡೇಂ ? ಬಿರ್ದುಂಡು ಬೀಗುವ ಮೋದಮಿದೇಂ ? ಅಹ,
ಎಂತಪ್ಪ ಸಡಗರಮೊ ಅಂತಪ್ಪ ಓಗರಮಲ್ತೆ? ಇರ್ಕುಂ, ಇರ್ಕುಂ.
ಓಗರದಿಂದಲ್ತೆ ಸುಖೀರಾಜ್ಯಂ ? ೨೦೦

ಓ ಓ ! ಸುಯ್ಗೊರಲಿನ ತಣ್ಮೊಗದ ಬನಗಾಳಿ! ಬೇಸಗೆ
ಬಿಸರದ ಕಾಯ್ಪುಂ ಪೋಗಾಡಿ ಮುಂದೆವಂದಿದಿರ್ಗೊಂಡು ಮೈ
ದಡವಿ ದಣಿವಂ ಪರಿಹರಿಸಿ ಮುದ್ದಿಸಿ ಮುದ್ದಿಸಿ ಮೈಮನಮಂ
ಪೆರ್ಚಿಸುವ ಸೈಪಿನೊಳೆ ಕಜ್ಜಮೆಸಗುವಯ್! ಏಂ ಎಣೆಯಿಲ್ಲ
ದುಜ್ಜುಗಮೊ ? ಏನೀತೆರದೂಳಿಗಮೊ ? ಬೇಸರಿಲ್ಲದಿನಿತುಪಚಾರಂ
ಗೈವೆಯ್ ? ಊಳಿಗದ ನೋವುಂ ದಣಿವುಂ ಕಾಣದಿನಿತು ಕಜ್ಜಂ
ಗೆಯ್ವ ಸೋಜಿಗಮಿದೇಂ ? ಸಾಲ್ಗುಂ, ಸಾಲ್ಗುಮೀ ಶೈತ್ಯೋಪ
ಚಾರಂ ! ಇಸಿತೊಂದು ಖಣಂಬರಿಸಿದೊಡೆ ನಾವೆಂತು ಸಲಿಸಲಕ್ಕು?

ಇದೆಕೊಳ್ ! ಎನುವೊಲ್ ಪೇರೀಳೆ ನೇರೀಳೆ ಕಿತ್ತೀಳೆ
ವೃಕ್ಷಗಳುಂ ಪಣ್ತು ತನಿವೆತ್ತ ಫಲಂಗಳಂ ಚೆಂಬವಳಮಂ ಚೆಲ್ಲುವ ೨೧೦
ವೊಲ್ ಗಲಗಲಸೆ ಉದುರ್ಚೆ ಬಳಲ್ದ ಬಟ್ಟೆಗರಂ ಕರೆದುಂ
ಸೆಳೆದುಂ ಬಲ್ಮೆಯಿಂ ನಲ್ಮೆಯಿಂ ತಣ್ಣೆಳಲಂ ನೀಡಿಯುಂ ತನಿ
ವಣ್ಗಳನಿತ್ತು ಪಸಿವು ನೀರಳ್ಕೆಗಳಂ ನಿವಾರಿಸಲೆರೆದಪರ್ "ಇದೆ
ಕೊಳದೆಕೊಳ್" ಎನುವಂತೆ ಕಾಣ್ !

ನೋಡ, ನೋಡ ! ನಾಡಸೀಮೆಯೊಳ್ ಪುಣ್ಯರಾಶಿಯೆನೆ
ಮೇಲೇರ್ದು ತಂಗಾಳಿಯಂ ಪೀರ್ದು ಗಗನಂ ಮುಟ್ಟೆ, ಬೆಳ್ಳಿಯಂ
ತಟ್ಟೆ, ಮುಗಿಲಂ ಕಿಟ್ಟೆ ಸಿಡುಮೆಯ್ಯೊಳ್ ಗಿಡುಮರಂಗಳಿಗಾಶ್ರಯ
ಮಿತ್ತು ಪಚ್ಚೆಯ ಪಟ್ಟುಡೆಯುಟ್ಟು ಪೊಂದಳಿರ ಚೆಂದರಳಿರ

ಬೆಳ್ದಳಿರ ಸಿಂಗರಗೊಂಡು ವೈರಿಕುಲಜರ್ಗೆ ಅಡ್ಡಗೋಡೆಯಿಕ್ಕಿದ
ದೂರ ಬಿಂಜವೆಟ್ಟುಂ ಸಂಜೀವನ ಪರಮಾರ್ಥಂ ! ೨೨೦

ಲೋಗರ್ಗೆ ಧರ್ಮಕರ್ಮಂ ನಿಚ್ಚಮಿರ್ಕುಮೆಂದಿರ್ಪುಡಿ
ಬುದ್ಧಿಯಿರ್ಪುದಲ್ತೆ ? ಆದೊಡದಂ ಗುರ್ತಿಪುದೆಂತೊ ? ಅವ
ಮಾಯೆಯೊ ಮತ್ತಾವ ಮಾಳ್ಕೆಯೊ ಪೇಳ್ವರಾರ್ ? ಅಂತು
ಮಿಂತುಂ ಎಲ್ಲದೆಸೆಯೊಳ್ "ಕುರುರಾಜ್ಯಂ ನಿಷ್ಪ್ರವೇಶ್ಯಂ" ಎಂದು
ಡಂಗುರಮಿರ್ಕುಂ. ಆರುಮಿದಂ ದುರುದುಂಬಿತನಮಿದೆಂದು
ಬಗೆಯದಿರಿಂ. ನನ್ನಾಣೆ ! ಜಗದಾತ್ಮನಾಣೆ ! ತ್ರಿಲೋಕಜ್ಞನಾಣೆ !

ಮೂಡಣದೊಳ್ ಮುನ್ನೇಸರ್ ಮುಗಿಲ್ನಡೆಮಾಡಮನ
ಡರ್ದು ಸಗ್ಗದ ನಾಡೊಳ್ ಒಯ್ಯನೆ ಪಯಣಂಬೋಪೊಂದು
ಗತಿಯೊಳ್ ತ್ರಿಲೋಕಂಗಳ ನಲ್ಪಂಜಿನ ಸೇವೆಯೊಳ್ ಬೆಳಗುತಿರೆ
ಪಕ್ಷಿಕುಲದ ನುಣ್ದನಿಯುಂ ರನ್ನದಾರದಿಂ ಪೊನ್ನಕಿರುಗೆಜ್ಜೆಗಳಂ ೨೩೦
ಸುರಿದಲುಗಿಸಿದವೊಲ್ ಪೊಣ್ಮುವ ರಾಗಮಾಧುರ್ಯದಿಂ, ವನ
ವನಾಂತರದೊಳ್ ಅರೆಮುಗುಳ್ದ, ಪೂಗಳ ನರುಗಂಪಂ ಪೀರ್ದು
ಗಮ್ಮನೆ ಸೊಗಯಿಸಿ ತೀಡುವ ತಂಗಾಳಿಯಾಮೋದದಿಂ, ಕರ್ವೆ
ಟ್ಟಿನ ಬಂಡೆಯೊಳ್ ಪೊದಳ್ದು ಧಾರೆಧಾರೆಯಾಗಿ ಪರಿವ ಪಯೋ
ಷ್ಣಿಯ ತರಂಗಲೀಲ ರಾಗಮಾಲೆಯಿಂ, ಏಗಳುಂ ಪಚ್ಚೆಯೊಸರ್ವ
ವನವಾರ್ಧಿಯ ರಂಗುರಂಗಿನ ಚೆಂದಳಿರ ವೈಭೋಗದಿಂ ಕಣ್ಗೆಡ್ಡ
ಮಾದುದು ಸಗ್ಗ ಸಿರಿಯುಂ ಸೋರ್ದವೊಲ್ !

* * * * *

ಇರುಳ ಕರ್ಪಳಿದು ಮುಂಬೊಳ್ತು ಮೂಡುವ ಮುನ್ನಮೆಯೆ
ಬೀಡಂ ಬಿಟ್ಟು ಕುವರನೊಡು ಪಯೋಷ್ಣಿಯ ತೀರಕ್ಕೈದಿದ
ಪಾಂಡವಮಧ್ಯಂ ಪ್ರಾತರ್ವಿಧಿಯಂ ಪೂರೈಸಿ ನಾರ್ಮಡಿಯಂ ೨೪೦

ಮಡಿಗೆಯ್ದು ಪಿಂಡಿ ಪರಡಿ ಕರ್ಬಂಡೆಯನೇರಿ ಪದ್ಮಾಸನದೊಳ್
ಕುಳ್ಳಿರ್ದು ಕುವರನಂ ಕುರಿತಿಂತೆಂಗುಂ- ಕುವರ ! ನಾವೀಪೊಳ್ತು
ಸುಭದ್ರೆಗೊರೆಯದೆ ಬಂದೆವಲ್ತೆ ? ಮುಂಜಾವಿನೊಳಿದ್ದವಳ್
ನಿನ್ನಂ ಪುಡುಪುಡುಕಿ ಕರೆಯದೆ ಬಿಡಳ್. ನೀನಿನ್ನು ಪೋಗಿ
ಬೀಡಂ ಸೇರ್ವುದು ಲೇಸೈ. ಆನುಮಿಲ್ಲಿರ್ದು ಪೊಳ್ತೇರ್ವನ್ನೆಗಂ
ತಪಂಗೈದಬಳಿಕಂ ಪಿಂತಿರುಗಿ ಬಂದಪೆಂ. ಏವೇಳ್ವೆ ಕಂದ ?
ದಟ್ಟವಿರ್ಪ ವನಾಂತರದೊಳ್ ನೀನೊರ್ವಂ ಪಯಣಿಪುದು
ಸಾಧ್ಯಮೆ ? ನಿರ್ಜನಮಪ್ಪತಾಣಂ ದುಷ್ಟಮೃಗ ಭೀಕರ
ಮೆಂಬುದಂ ಅರಿತಿರ್ಪೆಯಲ್ತೆ ?

ಆಗಳಭಿಮನ್ಯು ಮೊಗದೊಳ್ ಸರಳ ಹಾಸಮಂ ಮೂಡಿಸಿ ೨೫೦
ತಲೆಯಂ ತೊನೆಯುತ್ತೆ–ಅಹಹ, ಏಂಪೇಳ್ವೆನೊ ಈ ಮಾತಿಂಗೆ ?
ಆನೇಂ ಎಳೆಗೂಸೆ ಇಂತು ಸಂಕೆಗೊಳೆ ? ಆನಿಂದಿನಿಂ ಅನುದಿನ
ಮಿಲ್ಲಿ ಬಿಲ್ ಬಿಜ್ಜೆಯಭ್ಯಾಸಂಗೈವ ಇಚ್ಚೆಯೊಳಿರ್ಪೆಂ. ಈಗಳಿಂತೇ
ನವಸರಂ ಪಿಂದಿರುಗಲ್ಕೆ ?

ಅರ್ಜುನಂ ಕುವರನ ಮಾತಂ ಕೇಳ್ದು ನಗುಮೊಗದಿಂ–
ಮಾಣ್, ಇಂತಾತುರಂ ಸಲ್ಲದು ಬಿಲ್ಬಿಜ್ಜೆಯಂ ಕೈಗೊಳ್ಳಲ್,
ಕಾಲಮಿನ್ನುಂ ಬಲಿಯಲಿಲ್ಲ್ಯ. ಏಗಳುಂ ತಾಳ್ಮೆಯೆ ಲೇಸು.
ನೀನಿನ್ನುಂ ಎಳೆಯಂ ಗಡ ! ಪಸುಳೆಗೇಕೈ ಪೊಣರ್ಕೆಯ ಘೋರ
ರೂವಿನ ಕಟ್ಟಾಳ್ತನದ ಕಜ್ಜಗಿಜ್ಜಂ ?

ಅಭಿಮನ್ಯು–ಏಂ ಮಾತು ಎನ್ನಯ್ಯ ? ಆನಿನ್ನುಂ ೨೬೦
ಪಸುಳೆಯೆ ?

ಅರ್ಜುನಂ ನಲ್ಗುವರನ ಕಟ್ಟಾಳ್ತನಮಂ ಪೆರ್ಮೆಯಿಂ
ನಿಟ್ಟಿಸಿ ನೋಡುತುಂ ಮೊಗದೊಳ್ ಹರಿಸಂಬರಿಸಿ ಬೆನ್ನಂ ನೇವರಿಸಿ-
ನಿಲ್, ನಿಲ್ ! ನಿನ್ನೀಮೆಯ್ಯುಂ ಪಾಲ್ಬೆಣ್ಣೆಯಿಂದುರ್ಬಿದುದಲ್ತೆ ?
ಇದರೊಳೆಂತು ಬಲ್ಪುಮಿರ್ಕುಂ ಪೇಳ್? ಬಾಲ್ಯಂ ಬಲ್ ಸೂಕ್ಷ್ಮಂ.

ನೀನಿನ್ನುಂ ಕೆಲಗಾಲಂ ತಾಳಲ್ವೇಳ್ಕುಂ. ಇದುಂ ಅವಸರಿಪ ಬಿಜ್ಜೆಯಲ್ತು ಕುವರ !

ಅಭಿಮನ್ಯು-ಇಂತೊಂದು ಸಂಕೆ ಸಂದೆಯಂಗಳೊಳ್ ನೀವೆಂತು ಮನವಿಟ್ಟಿರೊ ಕಾಣೆಂ. ಇಂತಳ್ಪುದರಿಂ ಏಂಬರ್ಪುದು ಈಗಿನಿಂದಭ್ಯಾಸಮಂ ಕೈಕೊಂಡೊಡೆ ಭುಜಬಲಂ ಬಲಿಪನ್ನೆಗಂ ಬಿಜ್ಜೆಯುಂ ಬಲಿವುದಲ್ತೆ ? ೨೭೦

ಅರ್ಜುನಂ-ಇಂತಪ್ಪ ಅವಸರವೇಕೆಲೆ ಮಗನೆ ?

ಅಭಿಮನ್ಯು ಮಿಣ್ಣನೆ ತಲೆಯಾಡಿಸುತಂ-ತಂದೆಯೆ ! ತಳ್ಪುದರಿಂ ಎಮಗಲ್ತೆ ನಷ್ಟಂ ?

ಅರ್ಜುನಂ-ಕಂದ! ಈ ನಷ್ಟಗಿಷ್ಟದರಿಕೆ ಕಟ್ಟಂಕದ ತೋಳ್ವಲದ ಪುಡುಗಲ್ತೆ ?

ಅಭಿಮನ್ಯು ಮೊಗದೊಳ್ ಎಳನಗೆ ಮುಗುಳಂ ಸೂಸಿ-ಆಯ್ತು, ತಕ್ಕಿನ ಎಳೆಯರ್ಗಿದು ಸಾಜಂ !

ಅರ್ಜುನಂ-ತಾಳ್, ಬಾಳ್ ! ಎಲ್ಲಂ ಅರಿತಿರ್ದು ತೋಳ್ಪಟ ಮೇಕೆ ! ಸಾಸಿಗಳ್ಗೆ ಕಲಿಯಲ್ ಪದವೆನಿತುವೇಳ್ಕುಂ ? ೨೮೦

ಅಭಿಮನ್ಯು ಬೇವಸದಿಂ ಬೆಸನದಿಂ ಮೊಗಂ ಬಾಡಿ-ನಿಮ್ಮೊಳಗಿಂತೇಂ ಉಬ್ಬೆಗವೊ ನಾನರಿಯೆಂ. ಮುತ್ತಬ್ಬೆಯ ಸರದೊಲಿರ್ಕುಂ ನಿಮ್ಮ ನುಡಿಯ ನೋಡಿ.

ಅರ್ಜುನಂ ನಗುನಗುತುಂ ಕಂದನ ಮಂಡೆಯೊಳ್ ಕೈಯಿಕ್ಕಿ ನಿಳುಪಿ ನಲ್ಮೆಯಿಂ-ಚೀಃ, ಪೋಕೆ ಇದು ಉಬ್ಬೆಗಮಲ್ತು; ಇಂ ಕಲಿಯಲ್ ನಿಡುಗಾಲಮಿರೆ ಇಂತವಸರಂ ಸಲ್ಲವೆಂಬುದೊರ್ಕತಮಲ್ಲದೆ ಬೇರೆ ಏನಿಲ್ಲೈ ಮಗನೆ !

ಅಭಿಮನ್ಯು-ಆಯ್ತಾಯ್ತು, ಇಂತಿದೆಲ್ಲಂ ಲೆಕ್ಕಿಸಿದೊಡೆ ಆಂ ಬಿಜ್ಜೆಯಂ ಕೈವಿಟ್ಟಂತೆಯೆ ಎನಲಕ್ಕುಂ.

ಅರ್ಜುನಂ–ನೀಂ ಬರಿ ಪುಡುಗು ಕಣಾ! ಆತುರ ಕಾತರದಿಂ ೨೯೦
ಮನಗೆಟ್ಟಪರ್ಪಯ್.

ಅಭಿಮನ್ಯು–ಕೇಳೆನ್ನಯ್ಯ! ಇಂತಡೆತಡೆಯೊಡ್ಡಿ ಎನ್ನೀ
ಆಕಾಂಕ್ಷೆಯ ಬೇರಿಂಗೆ ಕಿಚ್ಚಿಡದಿರ್. ಆನೀಗಿನಿಂ ಕಲಿಯಲಕ್ಕುಂ.
ಕಲ್ತು ಬಲ್ತು ಬಲ್ಪಿನ ಬೀರನೆನಿಸಿ ರಣಕಾಳಿಯ ಸೇವೆಗೆ ಸಲ್ವೆಂ!

ಆ ಮಾತಿಂಗೆ ಸಂತಸಬಟ್ಟು ಅರ್ಜುನಂ ಮಂದಹಾಸಮಂ
ಸೂಸಿ–ನಿನ್ನ ದಿಟ್ಟತನಮಂ ಮೇಣ್ ಕ್ಷಾತ್ರಶಕ್ತಿಯಂ ಆನರಿ
ಯೆನೇಂ? ಆದೊಡಂ ಇಂತವಸರಿಸದಿರೆಂಬುದೊಂದೆ ಕತಂ,
ಮತ್ತೇನಲ್ತು?

ಅಭಿಮನ್ಯು-ಅಯ್ಯ! ಮತ್ತಂ ಇದೇ ದಾಟಿಯೊಳ್ ಪೊಳ್ತು
ಕಳೆಯದಿರ್ಪೈ, ಎನಗೀಗಳ್ ಬಿಜ್ಜೆಯಜ್ಜುಗಕೆ ಅಪ್ಪಣೆಯೀಯ ೩೦೦
ಲಕ್ಕುಂ.

ಅರ್ಜುನಂ ಬಲ್ಮೆಯಿಂ ನಲ್ಮೆಯಿಂ ತಲೆಯಂ ನೇವರಿಸಿ–
ಕಂದ! ನೀಂ ಬೀರರ ಬೀರಂ ಗಡ!

ಅಭಿಮನ್ಯು–ಈಗಲ್ತು, ಕಲ್ತು ಬಲ್ತ ಬಳಿಕ್ಕಂ ಬೀರರ
ಬೀರಂ ಎನಲಕ್ಕುಂ!

ಅರ್ಜುನಂ–ನಿನ್ನ ಬಲ್ಪಿಂಗೆಣೆಯಿಲ್ಲಮೆಂಬುದಂ ಬಲ್ಲೆ
ಮಗನೆ! ಆದೊಡಂ....

ಅಭಿಮನ್ಯು ಅನಿತರೊಳ್ ಕಂಚುಮಿಂಚಾಗಿ ಇಂತಿದಂ ಕೇಳಿ
ಸಿದಂ–ಆದೊಡಂ ಗೀದೊಡಂ ಎಂಬುದೆಲ್ಲಂ ಸಂದೆಯಮಲ್ತೆ?
ಇನ್ನು ಸಂದೆಯಮಂ ಬಿಟ್ಟು ಕಲಿಪ್ಪೈ. ಆನೋರ್ವನೆ ಕುರುಕುಲದ ೩೧೦
ಸೊರ್ಕುಕ್ಕುವ ಜಪ್ಪನಿಗರಂ ಕಡಿದು ಕೊಚ್ಚಿ ರಣದೇವಿಗೆ
ಬಿರ್ದಿಕ್ಕಿ ನಾಡಿನ ಕೇಡಳಿಪೆಂ.

ಅರ್ಜುನಂ–ಭಲೆ! ಭಲೆ!

ಅಭಿಮನ್ಯು–ರಣಮೊಳ್ ಅರಿರಕ್ಕಸರ್ಗೆಂದುಂ ಬೆನ್ನಂ ತೋರೆ!

ಅರ್ಜುನಂ–ಭಲೆ! ಭಪ್ಪರೇ!

ಅಭಿಮನ್ಯು–ತಂದೆಯೆ! ಕ್ಷಾತ್ರಧರ್ಮಂ ಎನ್ನುಸಿರ್. ರಣಕಾಳಿಯೆ ಎನ್ನ ಕುಲದೈವಂ. ಅಟ್ಟಿಯೊಳ್ ಉಸಿರುಳ್ಳನ್ನೆವರಂ ಕ್ಷಾತ್ರಧರ್ಮಮಂ ಕ್ಷಾತ್ರಧೈರ್ಯಮಂ ಕೈವಿಡೆಂ. ಅರಿ ರಕ್ಕಸರ್ ಒಟ್ಟೈಸಿ ಎದುರಾದೊಡಂ ಪಿಂಜರಿಯೆಂ.

ಅರ್ಜುನಂ–ಭಲೆ! ಭಲೆ! ನಿನ್ನ ಧೈರ್ಯಮಂ ಮೆಚ್ಚಿದೆಂ. ೩೭೦
ಈಗಳ್ ಪೂರ್ಣ ಮನಸ್ಸಿನಿಂ ಜಗದ್ಧಾತ್ರಿಯುಂ ಸ್ತುತಿಸಲಕ್ಕುಂ. ಇಗೊ, ಕೈಮುಗಿದು ಕಣ್ಮುಗಿದು ಭಕ್ತಿಯಿಂ ಪ್ರಾರ್ಥಿಸೈ.

ಅಭಿಮನ್ಯು–ಆಯ್ತು, ತಂದೆಯೆ!

ದೇವಿ ಪ್ರಸನ್ನಾರ್ತಿ ಹರೇ ಪ್ರಸೀದ
ಪ್ರಸೀದ ಮಾತರ್ಜಗತೋಽಖಿಲಸ್ಯ ।
ಪ್ರಸೀದ ವಿಶ್ವೇಶ್ವರಿ ಪಾಹಿ ವಿಶ್ವಂ
ತ್ವಮೀಶ್ವರಿ ದೇವಿ ಚರಾಚರಸ್ಯ ॥

ಆಧಾರಭೂತಾ ಜಗತಸ್ತ್ವಮೇಕಾ
ಮಹೀಸ್ವರೂಪೇಣ ಯತಃ ಸ್ಥಿತಾಸಿ ।
ಅಪಾಂ ಸ್ವರೂಪಸ್ಥಿತಯಾ ತ್ವಯೈತತ್ ೩೮೦
ಆಪ್ಯಾಯತೇ ಕೃತ್ಸ್ನಮಲಂಘ್ಯವೀರ್ಯೇ ॥

ತ್ವಂ ವೈಷ್ಣವೀಶಕ್ತಿರನಂತವೀರ್ಯಾ
ವಿಶ್ವಸ್ಯಬೀಜಂ ಪರಮಾಸಿ ಮಾಯಾ ।
ಸಂಮೋಹಿತಂ ದೇವಿ ಸಮಸ್ತಮೇತತ್
ತ್ವ ವೈ ಪ್ರಸನ್ನಾ ಭುವಿ ಮುಕ್ತಿಹೇತು ॥

ಜಗದ ಜಂಜಡದ ಕವಡು ಮಾಯೆಯ ಬಿಗಿಗಟ್ಟುವಡೆದು ಜಗದ್ಧಾತ್ರಿಯ ಪದತಲದೊಳ್ ಮನಃಪ್ರಾಣಗಳಂ ಕೆಡವಿ ಕಂಚಿನ ಕಂಠದೊಳ್ ನುತಿಸಿದ ಕಂದನ ಕಂಜೊಡರ್ ಪೊಳೆದತ್ತು

ಮೆಚ್ಚಿನ ನೆಚ್ಚಿನ ಕೆಚ್ಚಿನ ಕಿಡಿಯಂ ಕೆಮ್ಮನೆ ಸೂಸಿ ತಾಯುರಕೆಯಿಂ
ತೇಜಂ ಪುಟಗೊಂಡುದೊ ಎನಲ್ಕೆ ಶೋಡಶಕಳೆಗಳುಂ ಪೆರ್ಚಿದುವು ೩೪೦
ಪೊನ್ನರಾಗದಿಂ. ಅರ್ಜುನ ಸಂತಸದ ಕಡಲೊಳ್ ಮುಳುಗೆಳ್ದು
ನಲ್ಮೆಯಿಂ ಬೆನ್ನಂ ನಿಳುಪಿ–ನೀನಿಂದು ಸಲ್ ನುಡಿಸಿದ್ದೈ ಮಗನೆ!
ಇಂತಿದು ಭಕ್ತಿಯೊಳ್ ಪೊದಳ್ದು ಭಾವಗಂಗೆಯ ತೆರಂ ದುಂಬಿ
ಯೋಂಕೃತಿಯೊಲ್ ಮೊರೆದು, ಕರ್ಣಾಂತರಮಂ ನೆರೆತುಂಬಿ,
ಎರ್ದೆಗಡಲಂ ಮಥಿಸಿ, ಮತಿಯ ಕಡಿಗತ್ತಿಯಂ ಮಸೆದು, ಮನ
ಸ್ತರಂಗದ ಅಲೆಯೋಳಿಯಂ ಪೋಸಿ ಋತಚಿತ್ ಶತಾಬ್ಧಿಯಲಿ
ಮಿಂದು, ಮುಗಿಲರಾಶಿಯೊಳ್ ನುಸುಳ್ದು, ಬೆಳ್ಳಿಗಳಂ ಕಿಟ್ಟಿ
ವಿಯದ್ ವಿಸ್ತೀರ್ಣಮಂ ತಟ್ಟಿ, ಜಗದ್ಧಾತ್ರಿಯ ಪದಯುಗಂಗಳಂ
ಮುಟ್ಟಿ ಮಣಿದು ಮನಃಪ್ರಾಣಗಳ ದೀನ ಮೊರೆಯಂ ಕೇಳಿಸ
ಲಕ್ಕುಂ! ಮತಿಗಂ ಬೋಧವನಿತ್ತು, ಪ್ರಾಣಕಂ ಚೋದನೆಯಿತ್ತು, ೩೫೦
ಶಕ್ತಿಗಂ ವಜ್ರವೀರ್ಯವನಿತ್ತು ನಿನ್ನ ಕೃತಿಯುಂ ಲೋಕದೊಳ್
ಶಾಶ್ವತವಿರ್ಪವೊಲ್ ಪರಕೆಗೈ ಮಗನೆ! ಶಸ್ತ್ರಮಂ ಮುಟ್ಟುವ
ಮುನ್ನಂ ರಣಬಿಜ್ಜೆಯೊಳ್ ಕೋವಿದನಪ್ಪ ವರವೇಳ್ಕುಂ ಕಂದ!
ಆನೊಂದು ಕಾಲದೊಳ್ ನಿನ್ನವೊಲ್ ಆತುರಕಾತರಂಗಳಿಂ
ಮಲೆತಿರ್ದೆನಯ್. ಈಗಳದಂ ನೆನೆದೊಡೆ ನಗೆಯ ಬುಗ್ಗ
ಪೊಣ್ಮುವುದು ಮನೋಗತಿಯ ಛಂದಶ್ಶರೀರದಿಂ. ಗುರುಗಳ
ಸಮ್ಮುಖದೊಳ್ ಕಲ್ತು ಒಲಿವುದೇ ನಿಜಸ್ಫೂರ್ತಿಗೆ ಕುಲಕೀರ್ತಿಗೆ
ದಾರಿ ಕಣ! ಆತುರಕಾತುರದಿಂ ಕಲ್ತುದು ವ್ಯರ್ಥಂ. ಸಮಯ
ಸಂದರ್ಭಂಗಳ್ಗೆ ಕೈಗೆಟುಕದೆಂಬ ಸಂಗತಿಯಂ ಮರೆಯದಿರ್ ಕಂದ!

ಕೇಳ್, ಜಗದ್ಧಾತ್ರಿ ಎಂದೊಡೆ ಇಡೀ ಬೊಮ್ಮಾಂಡದ ೩೬೦
ತಾಯಿ ಕಣ! ನಿಚ್ಚಂ ಸೃಷ್ಟಿ ಸ್ಥಿತಿ ಲಯಂಗಳುಂ ಆಕೆಯಾಜ್ಞೆ
ಯಿಂದಲ್ತೆ ನಡೆಯುತಿರ್ಕುಂ? ಮೊದಲ್ ನಿನ್ನ ಪರಕೆಯಂ ಅವಳ
ಪದಯುಗಕೆ ಸಲ್ಲಿಸಿದನಂತರಂ ಮಿಕ್ಕವರೊಳ್ ಪರಕೆ ಕಂದ!
ಎಂದು ಕುವರಂಗೆ ಜಾನದಿಂ ಬೀರದಿಂ ಅಳ್ಕರೆಯಿಂ ಧರ್ಮ

ಪಥಮಂ ತೋರ್ದ್ವೊಂದು ಇಚ್ಛೆಯೊಳ್ ಮತ್ತಿಂತೆಂದನಾ ಫಲ್ಗುಣಂ–ಕೇಳ್ ಮಗನೆ! ಬರೀ ಬಿಜ್ಜೆಯೊಳ್ ಮನವಿಟ್ಟೊಡೇಂ ಬಹುದು? ಧರ್ಮ ಕರ್ಮಗಳ ಸಂಯೋಜನೆಯಿಂದೆ ಮಿಂಚುವುದೈ ನಿಚ್ಚಂ ನಿಚ್ಚಟದ ದಿವ್ಯ ಪ್ರಜ್ಞೆ. ಪ್ರಾಣಮಿರ್ದೊಡೆಂತು ಮೈಯೊಳ್ ಬರ್ದುಂಕಿನ ಪರ್ಷರಿಕೆಯು ರೋಸಗೀಸದ ರ್ಥುಂಜಡಮೊ ಅಂತೆಯೆ ಪ್ರಜ್ಞೆ ಅರಳ್ದಿದೆ ಪರಮ ಜ್ಞಾನದ ಜಹಾಸೆ ಕಣಾ! ಇಂತಿದಂ ಮನದೊಳಿರ್ಕೆ ಬಾಳ್ವೆಯೊಳ್ ಎಡರ್ ತಾರದವೋಲ್ ಎಚ್ಚರಲಕ್ಕುಂ. ಪೂರ್ಣದೊಳ್ ಪೂರ್ಣಮಂ ಕಾಂಬುದರಿಂದಲ್ತೆ ಸತ್ಯದಾವಿಷ್ಕಾರಂ? ಚಿತ್ ಪ್ರಕಾಶನದೊಂದು ರಸಲೋಕವಿಲಾಸಮೆ ಭಾವಕೆಳೆದು ರೂಪುಗೊಳ್ಳಲದುವೆ ಸಂಜೀವನ ಶ್ರದ್ಧೆ ಗಡ! ಪಂಕದಿಂ ಪಂಕಜಂ ಪೊದಲ್ದಂತೆ, ಶಿಲೆಯಿಂ ಕಿಡಿ ಚಿಮ್ಮಿದಂತೆ, ಕಬ್ಬಿನ ಗಾಣದಿಂ ಕಬ್ಬಿನರಸಂ ಸೂಸುವಂತೆ, ಚಿಪ್ಪಿನಿಂ ಮುತ್ತು ಮೂಡುವಂತೆ ನಿನ್ನ ಬಾಳ್ವೆ ಬೆಳಗಲ್ವೇಳ್ಕುಮೆಂಬುದಂ ಏಗಳುಂ ಮರೆಯದಿರ್. ೩೭೦

ಅಭಿಮನ್ಯು ನಯವಿನಯದಿಂ ತಲೆವಾಗಿ–ಅಯ್ಯ, ನಿಮ್ಮುಪದೇಶಮಂ ಬಗೆಯೊಳಿಟ್ಟಿರ್ದು ನಡೆನುಡಿಯುಂ ಪುಟವಿಟ್ಟು, ನಿಮ್ಮ ಮುಂಬಟ್ಟೆಯೊಳ್ ಪಜ್ಜೆಯಂ ತಪ್ಪದೊಲ್ ತೊಡರ್ಚಿ ರೂಪಿಸಿಕೊಳ್ವೆನೆನ್ನ ಬಾಳ್ವೆಯಂ. ೩೮೦

ಅರ್ಜುನಂ–ಮೆಚ್ಚಿದೆಂ ಕಂದ! ಇನ್ನುಂ ಕೇಳ್, ಬರ್ದುಂಕಿನೊಳ್ ಸಮತೆಯಿರ್ಕುಂ. ರಾಜರ್ಷಿಯಾದೊಡಂ ದೂರದರ್ಶಿತ್ವಮಿಲ್ಲದಿರ್ದೊಡೆ ಕುರುಕುಲದವೊಲ್ ಬಟ್ಟೆಗೆಡುಗುಂ. ಎಲ್ಲರೊಳ್ ನೀಚೋಚ್ಚ ಬೇಧಮಂ ಕಳೆದು ಸ್ಪರ್ಧೆವೈರಂಗಳಂ ತೊಡೆದು, ಪ್ರಜಾಹಿತಕಂ ಮೇಣ್ ಪ್ರಜಾಮತಕಂ ಬದ್ಧನಿರ್ದುಂ ಪೊಣೆಯಂ ಪೊರಲಕ್ಕುಂ. ಇದೇ ಕ್ಷಾತ್ರಕುಲ ಪಯೋಧಿಯ ಸುಧಾಸೂತಿ ಕಾಣ್.

ಅಭಿಮನ್ಯು—ಆಯ್ತು ತಂದೆಯೆ! ನಿಮ್ಮುಪದೇಶಮಂ ೩೯೦
ತಪ್ಪದೆ ಶಿರಸಾವಹಿಸುವೆಂ.

ಅರ್ಜುನಂ—ಕೇಳ್, ಕಂದ ! ಯಾವೊಂದು ಉಪದೇಶಮಂ
ಕೈಕೊಳ್ವ ಮುನ್ನಂ ಬರ್ದುಂಕಿನ ಮೇಲ್ಮೆಗಾಗಿ ಭಗವತಿಯಂ
ಧ್ಯಾನಿಸವೇಳ್ಕುಂ.

ಅಭಿಮನ್ಯು—ಅಕ್ಕೆ.

ಅರ್ಜುನಂ— ಅಂತುಮಲ್ಲದೆಯುಂ ಅಸ್ತ್ರಶಸ್ತ್ರಂಗಳಂ
ಕೈಕೊಳ್ವ ಮುನ್ನಂ ತಪ್ಪದೆ ಪರಕೆಗೈ. ಕುಲದೈವದೊಳ್
ಭಕ್ತಿಯಿಂ ಬೇಡಿ ಪಡೆಕೊಂಡಲ್ಲದೆ ಆವುದುಂ ಕೈಗೂಡದು ಕಾಣ್.

ಅಭಿಮನ್ಯು—ಅರಿತೆಂ, ಅರಿತೆಂ.

ಆಗಳಾಫಲ್ಗುಣಂ ಸಂತಸದ ಹುಗ್ಗಿಯನುಂಡು ಸಿರಿಮೊಗ ೪೦೦
ದೊಳ್ ನಗೆ ಮುಗುಳಂ ಅರಳ್ಚಿ ನೆಟ್ಟನಿಟ್ಟಾಲಿಯಿಂ ನಿಟ್ಟಿಸುತುಂ—
ಕುವರ! ಇನ್ನುಂ ನೀಂ ಬೀಡಿಂಗೆಯ್ದು ಆಟಪಾಠಂಗಳೊಳ್ ಮನ
ವಿಡು. ಆನಿಲ್ಲಿ ತಪಂ ತೀರ್ಚಿದನಂತರಂ ಪಿಂತಿರುಗಿ ಬಂದಪೆಂ.

ಅಭಿಮನ್ಯು—ಈಗಳಿಂತೇಂ ಅವಸರಂ ಬೀಡಿಂಗುಯಲ್ಕೆ ?
ನೀಮಿಲ್ಲಿ ತಪಂಗೈವನ್ನೆಗಂ ಆಂ ಬಯಲೊಳಿರ್ದು ಬಿಲ್ ವಿಜ್ಜೆಯ
ಭ್ಯಾಸಗೈವೆಂ.

ಅರ್ಜುನಂ ಒಯ್ಯನೆ ತಲೆಯಂ ತೂನೆದು ಅಸಮ್ಮತಿಯಂ
ಸೂಸುವಂತೆ ನುಡಿದಂ—ಕೇಳ್, ಕುವರ, ನಾನಾಗಳೇ ನಿನಗೆಲ್ಲವ
ನೊರೆದೆನಲ್ತೆ ? ನೀಂ ಪಿರಿಯರ್ಕಳ ಅಪ್ಪಣೆಯಂ ಮೇಣ್ ಆಶೀ
ರ್ವಾದಮಂ ಪಡೆಕೊಂಡಲ್ಲದೆ ಬಿಲ್‌ಬಿಜ್ಜೆಯಭ್ಯಾಸಂ ನಿಷಿದ್ಧಂ. ೪೧೦
ಮೊದಲ್ ಅಬ್ಬೆ ಅನಂತರಮಾ ತಾಯಂದಿರಿಂದಂ ಪರಕೆಗೊಂಡು
ಮತ್ತಂ ಪಿರಿಯರಿಂ ಗುರುಜನರಿಂ ಅಪ್ಪಣೆ ಆಶೀರ್ವಾದಗಳಂ
ಪಡೆಕೊಂಡು ಬಿಜ್ಜೆಯಭ್ಯಾಸಮಂ ಕೈಕೊಳ್ಳಲಕ್ಕುಂ. ಅನ್ನೆವರಂ

ಶಸ್ತ್ರನ್ಯಾಸಂ ನಿನಗೆ ಮಗನೆ! ನಾಳೆ ಮುಂಜಾವಿನೊಳಿದ್ದು ದಿಂದು ಮಡಿಯುಟ್ಟು ಎಲ್ಲರ ಪದಯುಗಕೆ ಮಣಿದು ಅಪ್ಪಣೆಯುಂ ಶಿರದೊಳ್ ಪೊತ್ತು ಬಳಿಕ್ಕಂ ಬಿಜ್ಜೆಯುಜ್ಜುಗಂ ಕೈಕೊಳೆ ಶುಭಮಕ್ಕುಂ.

ಅಭಿಮನ್ಯು ಸಂತಸದಿಂದೊಪ್ಪಿ ತನ್ನೊಂದು ಗರಗರಿಕೆಯು ಸೊಮ್ಮಿನಭ್ಯುದಯಮುಂ ಮನದೆ ನೆನೆನೆನೆದು ಪುರುಳ್ಗೊಂಡು ಪುಳಕಿತನಾಗಿ–ಅಕ್ಕೆ, ಆನೆಲ್ಲರಿಂ ಆಶೀರ್ವಾದಮುಂ ಪಡೆದಪೆಂ. ೪೨೦

ಅರ್ಜುನಂ–ನಿನಗೊಳ್ಳಿತಕ್ಕೆ ಕಂದ !
ಅಭಿಮನ್ಯು–ಅಂತಾದೊಡೀಗಳಾಂ ಪಿಂತಿರುಗುವೆಂ ಬೀಡಿಂಗೆ.

ಅರ್ಜುನಂ–ಅಕ್ಕೆ, ಮಗನೇ !

ಫಲ್ಗುಣನಂತೆನಲ್ ಅಭಿಮನ್ಯು ಮರಿಯಾನೆಯೊಲ್ ಪೊರ ಮಂಟನಲ್ಲಿಂದಂ. ಬಿಲ್ ಬಿಜ್ಜೆಯುಂ ಕೈಕೊಳ್ವೊಂದು ಸಡಗರ ದೊಳ್ ಮನಮೆರ್ಚೆ ಮೊಗವರಳ್ದುದು ಸಗ್ಗದ ಮಂದಾರ ಪುಷ್ಪ ದೊಲ್.

# ದ್ವಿತೀಯಾಶ್ವಾಸಂ

ಮುಂಜಾವಿನೊಳೆದ್ದ ಅಭಿಮನ್ಯು ತನ್ನಯ್ಯನಪ್ಪಣೆಯಂ ಮನದೊಳಿಟ್ಟು ಪಿರಿಯರ್ಕಳ ಪದಯುಗಂಗಳ್ಗೆ ತಲೆಮಣಿದು ಬಲ್ಮೆಯ ಆಶೀರ್ವಚನಮಂ ಪೊತ್ತು ಸಂತಸದಿಂ ಬಿಲ್ ಅಭ್ಯಾಸಮಂ ಕೈಕೊಳಲ್ ಅಣಿಯಾಗೆ ಅಬ್ಬೆಯರ್ ಪಣೆಗೆ ತಿಲಕವಿಕ್ಕಿ ಗಂಧಮಾಲ್ಯಾದಿಗಳಿಂ ಸಿಂಗರಿಸಿ ನಲ್ಮೆಯಿಂ ಬಲ್ಮೆಯಿಂ ಪೆರ್ಮೆಯಿಂ ಪರಸಲ್, ಬೆನ್ನಿಂಗೆ ಮೂಡಿಗೆಯಂ ಬಿಗಿದು, ಬಿಲ್ಲಂ ಕೈಕೊಂಡು ಪಿತನೊಡಂ ಪೊರವಂಟಂ; ಪಜ್ಜೆಪಜ್ಜೆಯುಂ ಗಲ್ ಗಲ್ ಎನೆ ನಿಡುವೊಳಲ ಗಡಿಯಂ ದಾಂಟಿ ಪಸುರುರ್ಕುವ ವನಪ್ರದೇಶದ ಪೆರ್ಬಯಲಂ ಸೇರ್ದು ಸುತ್ತಮುತ್ತಂ ನೋಡಿ ಆವೆಡೆ ಸೂಕ್ತಮೆಂದರಸಿದ ಬಳಿಕ್ಕಂ ಫಲ್ಗುಣನಿಂತೆಂಗುಂ–ಕಂದ! ಇದೊ, ೧೦ ಈಯೆಡೆ ಬಿಲ್‌ಬಿಜ್ಜೆಯುಜ್ಜುಗಕೆ ಸೂಕ್ತಮಿರ್ಕುಂ. ಇತ್ತ ಬಾರಯ್, ಇಲ್ಲಿಂದಾವೆಡೆಗಾದೊಡಂ ಗುರಿಯಿಡಲ್ ಸುಲಭಂ.

ಮತ್ತಾಗಳುಂ ಪೂರ್ವಾನಿಲಂ ಹರಿದ್ವಲಯದೊಳ್ ನುಗ್ಗಿ ಬರಲ್ ಪೊಂಬಿಸಿಲ್ ಪ್ರತಿಫಲಿಸಿ ಜಗಜಗಿಸುತಿರ್ದ ಇಬ್ಬನಿಗಳ್ ಬಜ್ಜರದಕ್ಷತೆಯಂ ತಳೆದವೊಲ್ ತಲೆಯೊಳ್ ಬಿಳ್ದು ಪರಸಲೊಡಂ ಕುವರಂ ಪುಳಕಿತನಾಗಿ ಆನಂದ ಸುಧೆಯೊಳ್ ಮುಳುಂಗಿ ತನ್ನೆರ್ದೆಯಿಚ್ಚೆಯನಣಂ ಇಂತು ಬಿತ್ತರಿಸಿದಂ–ಅಯ್ಯ, ಇನ್ನುಂ ನಿನ್ನ ಮುಂಬಟ್ಟೆಯೊಳೆ ಎನ್ನ ಮಾರ್ಗಾನುಕ್ರಮಣಂ. ಎನಗಿನ್ನಾವ ಗುರುವಿನವಶ್ಯಕತೆಯಿಲ್ಲಂ.

ಅರ್ಜುನಂ—ಮೆಚ್ಚಿದೆಂ ಕುವರ! ಏಗಳುಂ ನಿನಗೆ ಜಗ ೨೦
ದ್ಧಾತ್ರಿಯ ರಕ್ಷೆಯಿರ್ಕೆ.

ಅಭಿಮನ್ಯು ನೂರ್ಮಡಿ ಪುರುಷಿಂ ಮನವೆರ್ಚಿ ವೈವೆರ್ಚಿ
ಮೋದಂಜೆತ್ತು ತನ್ನೊಳ್ ತಾನೆ—ನಿಮ್ಮ ಪರಕೆ ಎನ್ನಂ ಬೆಂಗಾಪುಲಿ.

ಅರ್ಜುನಂ—ಕೇಳ್ಳೈ, ಕುವರ! ಬಿಜ್ಜೆಯಭ್ಯಾಸದೊಳ್
ಕಟ್ಟೆಚ್ಚರವಿರವೇಳ್ಕುಂ.

ಅಭಿಮನ್ಯು—ಅಕ್ಕೆ, ಅಕ್ಕೆ, ಅದನರಿತಿರ್ಪೆಂ.

ಅರ್ಜುನಂ—ಅರಿತವರ್ ಎಚ್ಚರದಪ್ಪರೇಂ ?

ಆ ಮಾತಿಂಗೆ ಸಗೆ ಮುಕ್ತಕಂ ಸೂಸಿದ ಅಭಿಮನ್ಯು—
ನಿಮ್ಮೆಲ್ಲರ ಪರಕೆಯೆನ್ನ ತಲೆಗಾಯಲ್ಕೆ ಬೇರೆಯೇನೆಚ್ಚರವೇಳ್ಕುಂ?

ಅರ್ಜುನಂ—ಅಂತೆಂದೊಡೆ ನಿನ್ನ ಸಾಸಮೆ ವ್ಯರ್ಥಂ. ೩೦
ರಣಬಿಜ್ಜೆಯುಜ್ಜುಗದೊಳ್ ಪುರ್ಚುಗೊಳ್ಳದೆ ಅರಿತು ನುರಿತು
ಬಲಿತು ನಿನ್ನ ಪಿರಿಯರ್ಕಳೆಂತಂತು ಬೀರಸಿರವೇಳ್ಕುಂ.

ವನದೇಶದೊಳರಲ್ದ ಬಗೆವಗೆಯ ಕಮ್ಮಲರಿಂ ಮನವೆರ್ಚಿ
ನೋಳ್ಪ ಕಣ್ಮಣಿಯೆ, ಕಮ್ಮಲರ ತಣ್ಣನೆಯ ತೀಟಂ ಬಿಲ್ ಬಿಜ್ಜೆ
ಯುಜ್ಜುಗಕೆ ಮಂತಣವಿತ್ತುದು ಬೀರಸಿರಿಯಂ ಜೋದಿಸಿ.

ಅರ್ಜುನಂ—ಈಗಳ್ ರಣಕಾಳಿಯ ಪ್ರಾರ್ಥನೆಗೆಯ್ ಕುವರ!

ಒಡನೊಡನೆ ಅಭಿಮನ್ಯು ಪುಲ್ವಾಸಿನ ಪಚ್ಚಗಂಬಳಿಯೊಳ್
ಬಿಲ್ಲಂ, ಮೂಡಿಗೆಯುಂ ಕೈವಿಟ್ಟು ಮಂಡಿಯೂರಿ ಕುಳ್ಳಿರ್ದು
ತಗ್ಗಿಯುಂ ಬಗ್ಗಿಯುಂ ನಯಭಯದಿಂ ಕೈಮುಗಿದು ಕಣ್ಮುಗಿದು
ಇಂತು ಪರಕೆಗೊಂಡಂ—ಓ ಜಗದಂಬೆ! ಮಾಕಾಳಿ ರಣಕಾಳಿ! ೪೦

ಆನುಮಿನ್ನು ನಿನ್ನ ಸೇವೆಯುಂ ಕೈಗೊಳ್ವೆಂ, ನೀನೇ ರಕ್ಷೆ! ನೀನೇ
ಧಾತೃ! ನೀನೇ ಮಾತೃ! ನಿನ್ನ ಗರಡಿಯೊಳ್ ನಿನ್ನರಿಕೆಯೊಳ್
ನಿನ್ನ ಪರಕೆಯೊಳ್ ನಿನ್ನ ರಕ್ಷೆಯೊಳ್ ರಣಕೇಳಿಗಿಳಿವೆಂ. ಆಂ
ನಿಚ್ಚಂ ನಿನ್ನ ಪದಸೇವೆಯೊಳ್ ಸಲ್ವೆಂ. ಕೈವಿಡಿದು ನಡೆಸೆನ್ನಂ.

ಓ? ಜಗತ್‌ಚಕ್ಷುವೇ! ತಳತ್ತಳಿಸಿ ಬಾನೇರ್ದು ಕೆಂಗಲಿಪ
ಘನತೇಜವೇ; ನಿನ್ನಂ ಬೇಡಿಕೊಳ್ವೆಂ ತಲೆ ಮಣಿದು. ಈ ಬಾಲಕಂ
ಇಂದೀಗಳ್ ಬಿಲ್‌ವಿಜ್ಜೆಯುಂ ಕೈಕೊಳ್ಳಲಿರ್ಪಂ ನೀಂ ದಯೆಯಿಂ
ನಿನ್ನ ತೇಜಮುಂ ಬಲ್ಪುಮುಂ ಮತಿಯುಂ ಎನಗಿತ್ತು ಆಶೀರ್ವದಿಸೈ.

ಓ, ಕಮ್ಮಲರ್ಗಳೆ! ಮಲರಿಂ! ಮಲರ್ದು ಎನ್ನೆರ್ದೆ
ಬಿರಿವನಿತು ನರುಗಂಪಂ ಸೂಸಿ. ಗಿಡುಮರ ಬಳ್ಳಿಗಳೆ, ಚೊಕ್ಕ ೫೦
ಮಾದೀ ಪಚ್ಚೆಯೊಚ್ಚತಂ ನಿಚ್ಚಂ ಸೂಸಿ ಪರಕೆಗೊಂಡೀ ಅಣುಗ
ನಂ ಪರಸಿಂ! ಜಗದಗಲ ಮುಗಿಲಗಲ ಪಯಣಂಬೋಪ
ಕಮ್ಮಲರೆ ಕರುಣದಿಂ ಪರಸಿ; ಪುರುಡುಂ ಪುರುಪುಂ ಘನಿಸು
ವೊಲ್, ದೂರ ಪಯಣಂಬೋಪವಸರದೊಳ್ ಮರೆಯದಿರ್.

ಓ, ಜಗದಾಣ್ಮ! ತ್ರಿಲೋಕನಾಯಕ! ನಿನಗೆನ್ನ ಬಿನ್ನಪಂ;
ಬಿನ್ನಪಂ. ನೀನೀ ಚಿಣ್ಣನಂ ನಿರ್ಲಕ್ಷಿಸದೆ ಕೈವಿಡಿದು ನಡೆಸೈ.
ನಿನ್ನ ರಕ್ಷೆಯೊಳ್ ರಣಬಿಜ್ಜೆಯೇಳ್ಗೆಗೊಳೆ ನೀಂ ಕರುಣೆಯಿಂ
ಮುಂಬಟ್ಟೆಯೊಳ್ ನಡೆಸೈ.

ಹೇ, ಉಷಾಮೋಹಿನಿ! ನಿನ್ನ ಗಾಡಿಯ ಮೋಡಿಯ
ಸಜ್ಜನ ಕಜ್ಜದ ಕಣ್ದೀವಿಯುಂ ತೆರೆಯಲೇಂ ಹೊಂಪುಳಿ? ೬೦
ಮೂಜಗದ ಜನ್ನದಗ್ಗಿಯುಂ ಪೋಲ್ವ ರಾಗದ ಯೋಗದ ತೇಜದ
ತನಿವೆಳಗು ಪುಷ್ಪಾಳಿಯು ಜೀವಾಳಿಯ ಸಂಪದಕೆ ಮೋಣೀ ಪುಟ್ಟನ
ಬಿಜ್ಜೆಯೋಜೆಗಕ್ಕುಂ ನಿಜಸ್ಫೂರ್ತಿ. ಎಲೆ ತಾಯೆ! ಕೈ ಮುಗಿದು
ಪ್ರಾರ್ಥಿಸುವೆಂ, ಕರುಣೆಯಿಂದೀಯೆನಗೆ ನಿನ್ನಾಹೊಂಪುಳಿಯುಂ.

ದಶದಿಕ್ಕುಗಳೆ! ಭೂವ್ಯಾಕಾಶಂಗಳೆ! ಉಡುಗಣಂಗಳೆ! ಮೇಣೆನ್ನಯ್ಯನಯ್ಯ ಸಗ್ಗದೊಡೆಯನೆ! ತಲೆವಣಿದು ಕೈ ಮುಗಿದು ಕಾಲ್ವಿಡಿದು ನಿಮ್ಮಂ ಬೇಳ್ವೆಂ. ಬೀರದೇಳ್ಗೆಗೆ ಬಿಜ್ಜೆಯೆ ಗುಡಿಯಕ್ಕುಂ. ಪಾರ್ಥಸೂನು ರಣದೊಳ್ ಪ್ರಾಣಮಂ ಕಡೆ ಗಣ್ಚಿ ಪೋರ್ವಂತು ತಕ್ಕಿನ ಬೀರಾತಿಬೀರನಿರ್ಕುಂ ಎಂದುಮೆಂದು ಬಾಯ್ತುಂಬಿ ಪರಸಿಂ. ೭೦

ಇಂತೆಡೆವಿಡದೆ ಅಭಿಮನ್ಯು ಪ್ರಾರ್ಥಿಸಲ್ಕೆ ಪ್ರಾಂಜಲಿಯೊಡ್ಡಿ ಓರೊರ್ಮೆ ಮೆಲು ಮೆಲ್ಲನೆ ಇನ್ನು ಕೆಲವೊರ್ಮೆ ಏರು ದನಿಯೊಳ್ ಪೊಣ್ಮಿದುದು ಪ್ರಾರ್ಥನಾ ವಿಶೇಷಂ. ಧನಂಜಯಂ ಕಣ್ಮುಗಿದು ಕೈಮುಗಿದು ಮನವಿಟ್ಟು ತನ್ನ ಪ್ರಾರ್ಥನೆಯಂ ಸಲ್ಲಿಸಿದಂ. ಅನಂತರಂ ಅಭಿಮನ್ಯು ಮೂಡಿಗೆಯಿಂ ವಿಶಿಖಾವಲಿಯೊಳ್ ಪಿರಿದಪ್ಪ ಸರಳನಾಯ್ದುಕೊಳಲ್, ಅರ್ಜುನಂ ಮುದದಿಂ ಪರಿಹಾಸದಿಂ ಇದೇನೈ ಕುವರ! ಏಂಗೈಯುತಿರ್ಪೆ! ಅದರೊಳೇಂ ಅಂದಚೆಂದವಿರ್ಕುಮೆ ಆಯ್ದುಕೊಳಲ್ ?

ಅಭಿಮನ್ಯು–ಅಂತಲ್ತು ತಂದೆಯೆ! ಆವುದು ಪುಲಿ ಕರಡಿಗಳ್ಗೆ ತಕ್ಕುದೆಂದರಿತುಕೊಳ್ವೆಂ. ಸರಳ್ಕೋಲ್ಗಳ್ ಪೆರ್ ೭೫ ಮೃಗಗಳಿಂಗಾಗದಲ್ತೆ ?

ಅರ್ಜುನಂ–ಅಹುದು; ಪೆರ್ಮೃಗಂಗಳ್ಗೆ ಕೂರಂಬು ವೇಳ್ಕುಂ.

ಅಭಿಮನ್ಯು ಇನ್ನೊರ್ ಬಾಣಮಂ ಆಯ್ದು ತೋರಿ–ಇದು ತಕ್ಕುದೇಂ ಸೂಕರಂಗಳ್ಗೆ ?

ಅರ್ಜುನಂ ಕುವರನ ಮಂಡೆಯಂ ನಿಳುಪಿ ಬಲ್ಮೆಯಿಂ ಇಂತೆಂಗುಂ–ಈಗಳೆನ್ನ ಮನದ ಸಂದೆಯಂ ಕಳೆದುದು ಕುವರ. ನೀಂ ನಿಚ್ಚಮಭ್ಯಾಸಂಗೆಯ್ಯಲ್ ತಕ್ಕಂ, ಮೊದಲ್ ಗುರು ಪೂಜೆಗೈ. ಅನಂತರಂ ಬಿಜ್ಜೆಯಭ್ಯಾಸಂ.

ಅಭಿಮನ್ಯು—ಅಕ್ಕೆ. ೯೦

ತರುವಾಯೊಳ್, 'ಎಲ್ಲವಗೆಯ ಬಿಲ್‌ಬಿಜ್ಜೆಯುಂಜಪ್ಣಗವಂ ಕಲಿತು ಬಲಿತು ಧನ್ಯನಪ್ಪಂತೆನಗೆ ವರವಂ ಕರುಣಿಪುದು' ಎಂದು ಪ್ರಾಂಜಲಿಯೊಡ್ಡಿ ಮತ್ತೆ ಪ್ರಾರ್ಥಿಸಿದಂ ಶ್ರೀ ಗುರುವಿನೊಳ್ ಮನವಿಟ್ಟು.

ಗುರುರಾದಿರನಾದಿಶ್ಚ ಗುರುಃ ಪರಮದೈವತಮ್ ।
ಗುರೋಃ ಪರತರಂ ನಾಸ್ತಿ ತಸ್ಮೈ ಶ್ರೀ ಗುರುವೇ ನಮಃ ॥

ಬ್ರಹ್ಮಾನಂದಂ ಪರಮ ಸುಖದಂ ಕೇವಲಂ ಜ್ಞಾನಮೂರ್ತಿಂ ।
ದ್ವಂದ್ವಾತೀತಂ ಗಗನಸದೃಶಂ ತತ್ತ್ವಮಸ್ಯಾದಿಲಕ್ಷ್ಯಮ್ ॥

ಅರ್ಜುನಂ—ನಲ್ ನುಡಿಸಿದೈ ಕಂದ! ಈಗಳ್ ದೇವೀ ಪ್ರಾರ್ಥನೆಯಂಗೆಯ್. ೧೦೦

ಇಂತು ವಚಿಸಿದಯ್ಯನ ಮೊಗದೊಳ್ ಪೊದಳ್ದ ಸಂತೃಪ್ತಿಯುಂ ಕಂಡ ಅಭಿಮನ್ಯು ತಾನುಂ ಸಂತುಷ್ಟಿಯಿಂದೊಪ್ಪಿ ಎಳನಗುವಂ ಸೂಸಿ ಕೇಳಿಸಿದನಿಂತು—ಅಕ್ಕೆ, ತಂದೆಯೆ!

ಶೂಲೇನ ಪಾಹಿ ನೋ ದೇವಿ ಪಾಹಿ ಖಡ್ಗೇನ ಚಾಂಬಿಕೆ ॥
ಘಂಟಾಸ್ವನೇನ ನಃ ಪಾಹಿ ಚಾಪಜ್ಯಾನಿಃಸ್ವನೇನ ಚ ॥

ಅರ್ಜುನಂ— ಕುವರ ನಲ್ ಹೊ! ನಲ್ ಹೊ! ಈಗಳ್ ಮನದೊಳ್ ತ್ರಿವಿಕ್ರಮ ಮೂರ್ತಿಯಂ ಸ್ಮರಿಸಿ, ಪಿರಿಯರಂ

ಭಾವಿಸಿ, ಕುಲದೈವವಂ ನೆನೆದು, ಗುರುಜನರಂ ನಮಿಸಿ ಕೈ
ಕೊಳ್ವುದೀ ಬಿಲ್ ಬಾಣವಮಂ. ಪ್ರಾರ್ಥನೆಯಿಲ್ಲದಾವ ಕಜ್ಜವಮಂ
ಕೈಕೊಳ್ಳದಿರ್. ಸೋಲು ಗೆಲುವು ರಣಕಾಳಿಯ ಪದತಲದೊಳ್ ೧೧೦
ಸಮರ್ಪಿತವಾದೊಡೆ ನಿನಗದರಿಂದಾವ ಸುಕದುಕ್ಕಂ ತಟ್ಟದು
ಕಂದ !

ಆಗಳ್ ಅಭಿಮನ್ಯುಂ ಮನದೊಳ್ ರಣಕಾಳಿಯಂ ಗುರು
ಗಳಂ ಪಿರಿಯರಂ ಸ್ಮರಿಸಿಯುಂ ನಮಿಸಿಯುಂ ಬಿಲ್ಲಂ ಕೈಕೊಂಡು
ನೆಚ್ಚಿನಿಂ ಕೆಚ್ಚಿನಿಂ ಬಿಲ್ಲನಾರಿಯಂ ಬಿಗಿ ಸೆಳೆವಿಡಿದು ಎಳೆದೆಳೆದು
ಜೇವೊಡೆಸೆ ಝೇಂಕರಿಸಿದುದು ಇಡೀ ವಿಪಿನಂ ಜೇವೊಡೆದುದೊ
ಎನಲ್ಕೆ. ಸುಸ್ವನ ಸಮ್ಮೋಹಿತನಪ್ಪಿ ಮತ್ತಂ ಮತ್ತಂ ಜೇವೊಡೆಸಿ
ಪುರುಪಂ ಪುರುಡಂ ಸೂಸಿ, ಎಳನೇಸರ ಬೆಳಗಿಂಗೆ ಇದಿರ್ನಿಂತು
ಕೆಂಗಲಿಸಿ ಚೆಂಗೆನ್ನೆಯೊಳ್ ಚೆಂಬಣ್ಣವಮಂ ಕೋದು, ಬಿಲ್ಲ
ನಾರಿಯಂ ಎಳಗೈಯಿಂ ಸೆಳೆವಿಡಿದು ವಿಶಿಖಮಂ ಬಿಲ್ಲಕೊಪ್ಪಿಂಗಳ ೧೨೦
ವಡಿಸಿದಂ. ಅರ್ಜುನಂ ಮುಂಬರಿದು ಬಿಲ್ಲಂ ಸರಿವಿಡಿದು ಹೆದೆ
ಯೇರಿಸುವ ಮಾಳ್ಕೆಯಂ ತೋರ್ದು–ಕಂದ ! ಇದೊ, ಮೂರ್ಬೆರಳಂ
ಸೆಳೆವಿಡಿದಿಂತು ಬಿಗಿವಿಡಿಯವೇಳ್ಕುಂ.

ಅಭಿಮನ್ಯು–ಇಂತಲ್ತೆ ?

ಅರ್ಜುನಂ–ಅಹುದು. ಇನ್ನುಂ ಬಲಗಾಲಂ ನಸು ಮುಂದಿಕ್ಕಿ
ಸರಿ ನಿಲ್ವುದೀ ತೆರಂ. ಬಿಲ್ಲನಾರಿಯಂ ಬಿಗಿವೆರಳೊಳ್ ಪಿಡಿದು
ಆಕರ್ಣಾಂತಂ ಬಿಡದೆ ಸೆಳೆಯವೇಳ್ಕುಂ. ಆತುರಕಾತರಗಳಿಂಗೆಡೆ
ಗೊಟ್ಟೊಡೆ ಬಿಜ್ಜೆ ಕೆಡುಗುಂ.

ಅಭಿಮನ್ಯು–ಆಯ್ತು ! ಈಗಳೆನ್ನೊಳಾವ ಆತುರಕಾತರ
ಮಿಲ್ಲಂ, ಉಬ್ಬೆಗಮಿಲ್ಲಂ, ಈಗಳ್ ಗುರಿಯೆತ್ತಲಿಡವೇಳ್ಕುಂ ಪೇಳ್! ೧೩೦

ಅರ್ಜುನಂ—ಅದೊ, ಆ ಪೆರ್ಮರನ ನಿಡುಗೊಂಬೆಯೊಳ್ ವಾಯಸವೆರಡು ಒಟ್ಟಿಗೆ ಕುಳಿತಿರ್ಪುದು ಕಾಂಬುದೇಂ ಕುವರ ?

ಅಭಿಮನ್ಯು—ಅಹುದು, ತಂದೆಯೆ !

ಅರ್ಜುನಂ—ಅವುಗಳಲೊಂದಂ ಪೊಡೆದುರುಳಿಸವೇಳ್ಕುಂ, ಗುರಿತಪ್ಪದಿರ್, ಕಣ್ಣೊಳ್ ಕಣ್ಣಿಟ್ಟು ನೋಡಿ ಗುರಿಯಿಡವೇಳ್ಕುಂ.

ಅಭಿಮನ್ಯು ಒಡನೆ ಅತ್ತಣಂ ಗುರಿಯಿಕ್ಕಿ ಬಾಣವಂ ರೊಯ್ಯನೆ ಬಿಡಲ್ ವಾಯಸವೆರಡುಂ ನೆಲೆದಪ್ಪಿ ಸುಳಿಸುತ್ತಿ ಧರೆ ಗುರುಳ್ವುವು ಒದ್ದಾಡಿ ಚೀರಿಡುತುಂ. ಅದರಿಂದೆ ತುಸು ಮನಂ ಗೆಟ್ಟು ಅಭಿಮನ್ಯು ಇಂತೆಂಗುಂ—ಓ, ತಪ್ಪಿದೆಂ. ತಪ್ಪಿದೆಂ. ಮನ್ನಿಪುದೆನ್ನಂ ಅಯ್ಯ ! ಕೈ ಬಿಗುಪಿನಿಂದೆರಡುಂ ಉರುಳ್ದುವು. ನೀವೆಂದುದು ಒಂದು ಮಾತ್ರಮಲ್ತೆ ? ೧೪೦

ಅರ್ಜುನಂ ಸಂತಸದಿಂ ತಲೆಯಂ ತೊನೆದು ಕಣ್ಣರಳ್ಚಿ— ಭಲೆ ! ನಲ್ಗುರಿಯಿಟ್ಟೆ ಕಂದ ! ಎರಡುಮೆಂದೊಡಂ ಇನ್ನುಂ ಪಿರಿದಲ್ತೆ ? ಇದರೊಳೇಂ ತಪ್ಪಿಲ್ಲೈ ಗುರಿಯೆಂದೊಡಿಂತಿರ್ಕುಂ.

ಆ ಮಾತಿಂಗೆ ಅಭಿಮನ್ಯು—ಅಂತಾದೊಡಿದು ನಲ್ಗುರಿ.

ಅರ್ಜುನಂ—ಅಹುದು ! ಅದರೊಳ್ ಸಂದೆಯಮಿಲ್ಲಂ.

ಅಭಿಮನ್ಯು—ಇನ್ನಾವೆಡೆಯೊಳ್ ಗುರಿಯಿಡಲಕ್ಕುಂ ಅಪ್ಪಣೆ ಯೀವುದು.

ಅರ್ಜುನಂ ಮೂಡಿಗೆಯಿಂ ಬೇರೆ ವಿಶಿಖಮಂ ಕೈಕೊಂಡು ಬಿಲ್ಲಿಂಗಳವಡಿಸಿ—ಕೇಳ್ ಕಂದ ! ಇದು ಬಲ್ ಸೂಕ್ಷ್ಮಂ. ಅಂತೆಯೇ ಸೂಕ್ಷ್ಮದೊಳ್ ಪಿಡಿಯಲ್ವೇಳ್ಕುಂ. ಅಲ್ಲದೊಡೆ ಗುರಿ ತಪ್ಪುಗುಂ. ೧೫೦

ಅಭಿಮನ್ಯುಂ ಬಿಲ್ಲಂ ಹೆದೆಯೇರಿಸಿ–ತಂದೆಯೆ, ಈಗಳ್ ತೋರ್ಪುದಿನ್ನೊಂದು ಗುರಿಯಂ.

ಅರ್ಜುನಂ–ನಿಲ್, ನಿಲ್ ! ಇಂತವಸರವೇಕೆ ? ಗುರಿಯರಿತು ಹೆದೆಯೇರಿಸುವೇಳ್ಕುಂ. ಎಡಗಾಲಂ ಇನ್ನುಂ ಪಿಂತಿಕ್ಕಿ ಬಿಗಿವೊತ್ತಿ ನಿಲ್ಲೈ.

ಅಭಿಮನ್ಯು–ಇಂತಲ್ತೆ ಸೆಳೆವಿಡಿವ ಮಾಳ್ಕೆ ?

ಅರ್ಜುನಂ–ಸರಿ, ಸರಿ. ನೀನತಿ ಚತುರಂ. ನಿನಗಂ ತಿಳಿಪುವ ಕತಮಿಲ್ಲಂ. ೧೬೦

ಅಭಿಮನ್ಯು–ಈಗಳ್ ಆವೆಡೆ ಗುರಿಯಿಡವೇಳ್ಕುಂ ?

ಅರ್ಜುನಂ–ಅದೋ ನೋಡಲ್ಲಿ. ಆ ಪೆರ್ಬಂಡೆಯ ನೆತ್ತಿಯೊಳ್ ಮಂಡಿಸಿರ್ಪುದೊಂದು ಕೆಂಗಣ್ಣಿನ ಗೃಧ್ರರಾಜಂ. ಕಾಂಬುದೇಂ ಅಲ್ಲಿ ? ಆ ಗಿಡದ ಕೆಂದಳಿರ ನೇರಕ್ಕೆ ?

ಅಭಿಮನ್ಯು–ಅಹುದು, ಕಂಡೆನದಂ. ಗುರಿಯಿಡಲೇಂ ?

ಅರ್ಜುನಂ ಅದಂ ನೆಟ್ಟ ನೋಟದಿಂ ನಿಟ್ಟಿಸಿ ನೋಡುತುಂ–ಅದರ ಕಣ್ದೀವಿ ಬಿಸಿಲ ಝಳಂ ಬಿಳ್ದು ತಳತಳನೆ ಕೆಂಗಲಿಪುದಲ್ತೆ ?

ಅಭಿಮನ್ಯು–ಅಹುದಹುದು.

ಅರ್ಜುನಂ– ಕಂದ ! ಕಣ್ಣೊಳ್ ಕಣ್ಣಿಟ್ಟು ಗುರಿಯಿಟ್ಟೊಡೆ ತಪ್ಪದು. ಈಗಳ್ ಅದರ ಕಣ್ದೀವಿ ಮಾತ್ರ ಪಾರಲಕ್ಕುಂ. ಎಚ್ಚರ! ೧೭೦

ಅಭಿಮನ್ಯು–ಇದೆನ್ನ ಪ್ರಥಮ ಪ್ರಯತ್ನಂ.

ಅರ್ಜುನಂ–ಕೇಳ್, ಕಂದ ! ಬಾಣಾಗ್ರದೊಳ್ ದಬ್ಬೆಯ ಕಣೆಯಂ ಅಭಿಮಂತ್ರಿಸಿಡುವೆಂ, ನೀಂ ಬಾಣಮಂ ಸೆಳೆದುವಿಟ್ಟೊ

ಡನೆ ದಬ್ಬೆಯ ಕಣೆ ಮಾತ್ರ ಕಣ್ದೀವಿಯುಂ ಪುಗುಗುಂ ಕಣಾ !
ಪ್ರಯತ್ನಿಸು ಬಿಲ್ ಬಿಜ್ಜೆಯೊಳ್ ಸೂಕ್ಷ್ಮಮರ್ಮವಿದು.

ಅಭಿಮನ್ಯು–ಆಯ್ತು. ನಿಮಗಿಂದು ಎನ್ನ ಪ್ರಥಮ ಪ್ರಯತ್ನದೊಳದಂ ಸಾಧಿಸಿ ತೋರ್ಪೆಂ.

ಅರ್ಜುನಂ–ಭಲೆ ! ಕುವರ !

ಅಭಿಮನ್ಯು–ಇದೋ ನೋಳ್ಪುದು.

ಅರ್ಜುನಂ–ಕೇಳ್....! ದಬ್ಬೆಯ ಕಣೆಯುಂ ಈ ಕಣ್ದೀವಿಯೊಳ್ ಪೊಕ್ಕು ಆ ಕಣ್ದೀವಿಯೊಳ್ ಪೊರಪೋಕುಂ....ಅವಸರಿಸದೆ ಬಲ್ ಸೂಕ್ಷ್ಮದೊಳ್ ಕಜ್ಜವೆಸಗು ಕಂದ ! ೧೮೦

ಅಭಿಮನ್ಯುವಾಗಳ್ ಪುರುಪಿನಿಂ ಪುರುಡಿನಿಂ ಪುಳಕಿತನಾದೊಡಂ ಕೈಪಿಡಿಯನ್ನಿನಿತು ಬಿಗಿಗೊಳಿಸಿ–ನಿಮ್ಮ ಪರಕೆಯುಂ ಗೆಲ್ವೆಂ ಅಯ್ಯ.

ಆ ಚಣದೊಳ್ ಗುರಿವಿಡಿದು ಬಿಡಲ್ ರೊಯ್ಯನೆ ಪಾರ್ದುದು ಬಾಣಂ. ಆಗಳಾ ಬಾಣಾಗ್ರಭಾಗದೊಳಿರ್ದ ದಬ್ಬೆಯ ಕಣೆಯುಂ ಪುಟದು ಕಿರ್ಚಿನ ಕಿಡಿಯೊಲ್ ರೊಚ್ಚಿನ ಕೂರ್ಮೆಯೊಲ್ ಗೃಧ್ರರಾಜನ ಕಣ್ಣಾಲಿಯಂ ಕೋರೈಸಿ ತೂರ್ದು ಪೊರವಂಟು ದತ್ತಣ ಕಣ್ಣಾಲಿಯೊಳ್. ಕೂರಂಕುಸದಿರಿತಕ್ಕಂ ನಟ್ಟೊತ್ತಿ ನಾಂಟ ದಾಂಟದ ಬೇನೆಯಿನಿತುಂ ಕಾಣದಂತೆಂತಂತು ವಿಣ್ಣನೆ ಪಂದದೆ ಕುಳಿತಿರ್ದುದಾ ಪರ್ದು ಮುನ್ನಿನೋಲ್ ! ೧೩೦

ಅರ್ಜುನಂ ನೆಟ್ಟ ನಿಟ್ಟಾಲಿಯಂ ಕೀಲಿಸದೆ ನೋಡುತುಂ ಸಂತಸದ ಪುರುಪಿನ ಕಟ್ಟುಬ್ಬರದಿಂ– ಭಳಿರೆ ! ಅಭಿಮನ್ಯು ! ನಿನ್ನ ಬುದ್ಧಿಶಕ್ತಿಗೆ ಎಣೆಯಿಲ್ಲಂ ! ನಿನ್ನ ಬಿಜ್ಜೆಗೆ ಸಾಟಿಯಿನ್ನಿಲ್ಲಂ!

ಅಭಿಮನ್ಯು ತನ್ನಯ್ಯನ ಕಟ್ಟುಬ್ಬರದ ಪುರುಪುಂ ಮತ್ತಮಾ ಪರ್ದಿನಿರವಂ ಕಟ್ಟುಚ್ಚರಿಯಿಂ ಕಣ್ಮಲರ್ಚಿ ನೋಡುತುಂ–ತಂದೆಯೆ ! ಇಂತಿದೇಂ ಅಚ್ಚರಿ! ಇನ್ನೆವರಂ ಪರ್ದು ಚಲಿಸದೆ ಮಿಣ್ಣನಿರ್ಕುಂ. ಅಂ ಗುರಿ ಮುಟ್ಟಿದುದು ಸಂದೆಯುಮಲ್ತೆ ?

ಅರ್ಜುನಂ–ಓ, ನೀನರಿಯೆಯೇಂ ಇದರ ಮರ್ಮಮಂ ಕಂದ! ೨೦೦

ಅಭಿಮನ್ಯು–ಏಂ ಮರ್ಮಂ ? ಏಂ ಚೋದ್ಯಂ ?

ಅರ್ಜುನಂ–ಇದು ಬಿಲ್ ಬಿಜ್ಜೆಯ ಜಾಣ್ಮೆಯಲ್ತೆ ? ಆ ಪರ್ದಿಂಗೆ ಇನ್ನುಂ ಕೆಲಚಣಮೇಳ್ಕುಂ ತನ್ನ ಬೇನೆಯನಣಂ ತಿಳಿಯಲ್ಕೆ. ಅಂತಪ್ಪ ಸೂಕ್ಷ್ಮಮಿಾ ಬಿಲ್ ಬಿಜ್ಜೆ.

ಅಭಿಮನ್ಯು–ಅಂತಪ್ಪಡಿನ್ನು ಕಾದು ನೋಡಲಕ್ಕುಂ.

ಅರ್ಜುನಂ–ಕೇಳ್ ಕುವರ! ಆವ ನಿಮಿತ್ತಮೊ ನಿನ್ನೊಳ್ ದೈವ ಬಲಮಿರ್ಕುಂ. ಇಂತಪ್ಪ ಬಿಲ್‌ವಿಜ್ಜೆ ಪಿರಿದಪ್ಪ ಅಭ್ಯಾಸ ಮಿಲ್ಲದೆ ಕೈಗೂಡಿಪುದು ಕಡುಕಷ್ಟಂ. ಆದೊಡಂ ನೀಂ ಲೀಲಾ ಜಾಲದೊಳ್ ಕೈಗೊಂಡುದು ಸಾಮಾನ್ಯಮಲ್ತು ! ನೀನಹುದು ಐಂದ್ರ ಕೀರ್ತಿ ಕೇತನಂ ! ೨೧೦

ಅಭಿಮನ್ಯು–ನೀಂ ಗುರುವಿರೆ ಇದೇಂ ಪೆರ್ಚು ? ಆನೆಂತು ಬಡವನಿರ್ಪೆಂ ? ಎಲ್ಲಂ ನಿಮ್ಮೋಜೆಯೊಳ್ ಬರ್ಕುಂ. ಅದೇ ದೈವಬಲಂ, ಕ್ಷಾತ್ರಬಲಂ.

ಅರ್ಜುನ–ಸಾಜಂ, ಕುವರ !

ಆಪೊಳ್ತಿಂಗೆ ಪರ್ದು ಬಂಡೆಯ ಮೇಲುರುಳ್ದುರುಳ್ದು ಪೊರಳ್ದು ಮಿಲಿಮಿಲಿ ಒದ್ದಾಡಿ ಪ್ರಾಣ ಸಂಕಟಂಬಡುತಿರ್ದುದಂ ಕಂಡು ಬಾಲಕನ ಮನಂ ಮರುಗಿ ಕರಗಿ ತಾನೆ ಬೇನೆಯುಂ ಬಟ್ಟಂತೆಯುಂ ನಲುಂಗಿ ನೊಂದು ನುಡಿದಂ–ಅಕ್ಕಟಕ್ಕಟಾ !

ಅದರ ಹರಣಂ ಬಿಟ್ಟುದು ತಪ್ಪಾಯ್ತು. ಗೃಧ್ರಂ ಕಣ್ದೀವಿಂ
ಕಳೆಕೊಂಡು ಬೇನೆಯಿಂ ಸಂಕಟಂಬಡುತಿರ್ಕುಂ. ಇನ್ನೆಂತಿದರ ೨೨೦
ಬಾಳ್ತೆ ? ಕಷ್ಟಂ, ಕಡು ಕಷ್ಟಂ !

ಅರ್ಜುನಂ–ಇನ್ನದಂ ಒರ್ ಬಾಣದೊಳ್ ಮುಗಿಪುದೇ
ಲೇಸು. ಕಣ್ಣಿಲ್ಲದ ಬನ್ನಮಿನ್ನೇಕೆ ? ಈಗಲೆ ತೊಡು ಬಾಣಮಂ.

ಅಭಿಮನ್ಯು–ಲೇಸು, ಲೇಸೈ.

ಆ ಚಣದೊಳ್ ಬಾಣಮಂ ಕೈಕೊಂಡು ಬಿಗಿ ಸೆಳೆದುವಿಡೆ
ಪೊರಳುತಿರ್ದ ಗೃಧ್ರಂ ಮಿಣ್ಣನಲ್ಲಿಯೆ ಅಸುವಂ ತೆತ್ತು ಜವ
ಹುರದ ಪೆರ್ಬಾಗಿಲ ಕಾಪಿಗೆಂದಡರ್ದುದು ನಿಶ್ಶಬ್ದಗತಿಯಿಂ.
ಅರ್ಜುನಂ ಕುವರನ ಮಂಡೆಯಂ ಒಯ್ಯನೆ ನೀವಿ–ಕಂದ! ನೀಂ
ಚಂಡಭಟನಪ್ಪುದೇಂ ದೂರಮಿಲ್ಲಂ. ಇಂತು ನಿಚ್ಚಂ ರಣವಿದ್ಯೆ
ಯಭ್ಯಾಸಂ ಗೆಯ್ದು ಕಲ್ತು ಬಲ್ತು ಕಲ್ಕಿಯಂ ಮಿಾರ್ದ ಕಲ್ಕಿ ೨೩೦
ಯಪ್ಪಯ್.

ಅಭಿಮನ್ಯು ಮೊಗದೊಳ್ ಕಿರುನಗೆಯಂ ಸೂಸಿ, ಸಂತಸದ
ಸುಗ್ಗಿಯನುಂಡು ಸಂಭ್ರಮದಿಂ ಕೇಳಿಸಿದಂ–ನೀನಿಂತು ಮೆಚ್ಚಿ
ಬೆಸಸಿದುದೆನ್ನ ಭಾಗ್ಯಂ. ಇನ್ನಾಂ ಏಗಳುಂ ಕಟ್ಟಭ್ಯಾಸಗೆಯ್ವೆಂ.

ಅರ್ಜುನಂ–ನೀಂ ಶೂರಂ ಬೀರಂ ! ನಿನಗಕ್ಕುಮಿಾ ಬಿಲ್
ಬಿಜ್ಜೆಯುಂ ಚೆಚ್ಚರದಿಂ ಆಟಪಾಠದೊಂದು ಸುಲಭದ ಮಾಳ್ಕೆಯೊಳ್.

ಅಭಿಮನ್ಯು–ಅಂತಿರ್ಪೊಡಾಂ ಧನ್ಯಂ. ಈಗಳ್ ಇನ್ನಾವ
ಬಾಣಮಂ ಕೈಗೊಳ್ಳಲಯ್ಯ ?

ಅರ್ಜುನಂ ನೆಟ್ಟಾಲಿಯಂ ಕೀಲಿಸದೆ ಪೆರ್ಮೆಯಿಂ
ನೋಡುತುಂ– ಇಂತೇಂ ಆತುರ ಕಾತರಂ ? ಎಡೆವಿಡದೆ ಬಿಲ್ಲ ೨೪
ನಾರಿಯಂ ಬಿಗಿ ಸೆಳೆವುದುಂ ತ್ರಾಸಮಲ್ತೆ ಎಳಗೈಗೆ ?

ಆಗಳ್ ಅಭಿಮನ್ಯು ಸರಸದಿಂ–ಕಾಣಿರೇಂ ಎನ್ನೀ ತೋಳ್ಬಲಮಂ? ಮರಿಯಾನೆಯುಂ ಬಂದಿದಿರ್ಚಿದೊಡಂ ಬೆದರದೆ ಬೆರ್ಚದೆ ಬೊಗ್ಗು ಬಡಿದು ಜವಹುರವಂ ಮುಟ್ಟಿಸುವೆಂ.

ಅರ್ಜುನಂ–ಅಹಹ, ಏಂ ಪುರಡಿನಾಗರಂ? ಒರ್ವರ್ ಗೆಲ್ದೊಡೆ ಇನ್ನೊರ್ವರ್ ಸೋಲಿಕುರ್ಂ, ಎಂಬುದಂ ಮರೆಯದಿರ್. ಕ್ಷಾತ್ರ ಧರ್ಮದೊಳ್ ಸೋಲು–ಗೆಲುವುಗಳ್ಗೆ ಪೆರ್ಚದೆ ಕುಗ್ಗದೆ ಸಮ ದೃಷ್ಟಿಯಿಂದಿರ್ಪುದಲ್ಲದೆ ಬೇರೆ ಗತಿಯಿಲ್ಲ ಕಣಾ!

ಅಂತೆಂದಯ್ಯನ ಮೊಗದೊಳ್ ಪೊಣ್ಮಿದ ಸಮಾಧಾನ–ಸಂತೃಪ್ತಿಯಂ ಕಂಡು ಅಭಿಮನ್ಯು ಮುದದಿಂ ನೇಮದಿಂ ೨೫೦
ಇಂತೆಂಗುಂ–ತಂದೆಯೆ, ಅರಿತೆಂ.

ಅರ್ಜುನಂ ಆ ಮಾತಿಂಗೆ ಮೆಚ್ಚಿ ನೆತ್ತಿಯಂ ಮೂಸಿ ಮುಂಡಾಡಿ, ಸಿಟ್ಟೋಟದಳತೆಯೊಳಿರ್ದ ಸಿರಿಹೊನ್ನೆಯ ಮರವಂ ಕಣ್ಣಿಟ್ಟು ನೋಡುತಂ–ಅದೊ, ನೋಡಲ್ಲಿ ಆ ಸಿಡುಗೊಂಚಲ ಸಿಡುಪೊದೆಯೊಳ್ ಸಣ್ಣ ಕೆಮ್ಮಣಿಯೊಲ್ ಕಾಂಬುದು ಘೂಕಾಕ್ಷಿಯಲ್ತೆ?

ಅಭಿಮನ್ಯು–ಎಲ್ಲಿ....ಎಲ್ಲಿ?

ಅರ್ಜುನಂ–ಅದೊ, ಆ ಕವೆಗೋಲ್ ಮೇಲೆ ಹೊಂದಳಿರೆಡೆಯೊಳ್ ಕಾಂಬುದೇಂ ಕೆಮ್ಮಣಿ?

ಅಭಿಮನ್ಯು–ಎಲ್ಲಿರ್ಪುದು? ಎನ್ನ ದಿಟ್ಟಿಗೇಂ ಕಂಡುದಿಲ್ಲಂ. ೨೬೦

ಅರ್ಜುನಂ–ಅದೋ. ಅದೋ! ಎನ್ನೀ ಕೈನೇರದೊಳ್ ನೋಡೈ!

ಅಭಿಮನ್ಯು–ಅಹುದಹುದು. ಕೆಮ್ಮನೇನೋ ಕಾಣುತಿರ್ಕುಂ

ಅರ್ಜುನಂ- ಘೂಕಂ ಈ ಪಗಲೊಳ್ ಕಣ್ದೆರೆವುದಿಲ್ಲೈ. ಆದೊಡಂ ಬೆರ್ಚಿ ತೆರೆದಂತಿರ್ಕುಂ.

ಅಭಿಮನ್ಯು-ಅಹುದು. ಈಗಳ್ ಸ್ಪಷ್ಟ ಕಾಣುತಿರ್ಕುಂ.

ಅರ್ಜುನಂ ಇಕೊ, ಈ ಬಾಣಮಂ ಕೈಕೊಂಡು ಗುರಿಯಿಡತ್ತಲ್.

ಅಭಿಮನ್ಯು ಕಣ್ಣಟ್ಟು ನೋಡಿ ಬಾಣಂ ಬಿಟ್ಟು-ಓ, ತಪ್ಪಿದೆಂ. ಅದು ಘೂಕಾಕ್ಷಿಯಲ್ತು. ಆವುದೋ ಚಿಣ್ಣ ಚಿಣ್ಣ ಫಲಂಗಳ ಗೊಂಚಲ್. ಗುರಗಂಜಿಯುಂತಃದುದುರ್ದಲ್ತೆ ? ೨೭೦

ನಗುತಿರ್ದ ಕುವರಂ ನೋಡಿ ತಾಂ ನಗುನಗುತಿಂತೆಂದನಾ ಫಲ್ಗುಣಂ-ಆನುಂ ತಪ್ಪಿದೆನಲ್ತೆ ? ಎಲ್ಲರುಂ ಒಟ್ಟೆ ತಪ್ಪುದು ಇಂತೇ ಅಲ್ತೆ ? ಮರದೊಳಿರ್ದ ಪಕ್ಷಿಗಳೆನಿತೊ ಪಾರ್ದುದಂ ಕಂಡೆಯಾ ?

ಅಭಿಮನ್ಯು-ಬಾಣಂ ನಿಶ್ಯಬ್ದದಿಂ ಸಾರ್ದಾದೊಡಂ ಮತ್ತೇಂ ಗಾವರಂ ಪಕ್ಷಿಗಳ್ಗೆ ?

ಅರ್ಜುನಂ-ಅವು ಬಲ್ ಸೂಕ್ಷ್ಮಂ ಗಡ !

ಅಭಿಮನ್ಯು-ಮಿಣ್ಣನೆ ಸಮ್ಮತಿಯುಂ ಸನ್ನೆಯೊಳ್ ತೋರ್ದು-ಈಗಳ್ ಇನ್ನಾವ ಬಾಣಂ ಕೈಕೊಳ್ಳಲಕ್ಕುಂ ? ೨೮೦

ಅರ್ಜುನ-ಕೇಳ್ ಕುವರ ! ನಿನಗೀಗಳ್ ಶಬ್ದವೇದಿಯುಂ ತಿಳಿಪೆಂ, ಈ ಬಾಣಮುಂ ಕೈಕೊಳ್. ಇದನೆಂದುಂ ಶಬ್ದ ಮಾತ್ರದಿಂ ಗುರಿಯಿಡವೇಳ್ಕುಂ. ಬಿಲ್‌ವಿಜ್ಜೆಯೊಳ್ ಶಬ್ದವೇದಿ ಬಲ್ ಸೂಕ್ಷ್ಮಂ. ನೀನದರ ಮರ್ಮವಂ ಅರಿಯಲಕ್ಕುಂ.

ಅಭಿಮನ್ಯು ಆಯ್ತು ಎನುತಂ ಬಿಲ್ಲಕೊಪ್ಪಿಂಗೆ ಬಾಣಮುಂ ಪೂಡಿ ಸಿದ್ಧನಾದಂ.

ಅರ್ಜುನಂ—ಅದೋ, ಕೇಳ್! ಪಕ್ಷಿಗೊರಲುಲಿ. ಹೆದೆಯೇರಿಸಿ ಅಣಿಯಾಗಿರ್ದು ಮತ್ತೊಮ್ಮೆರ್ದ ದನಿಯುಂ ಪೊಣ್ಮಿದೊಡೆ ಬಾಣಮಂ ಬಿಡು ಜೋಕೆ! ಗುರಿ ತಪ್ಪದಿರ್ ಕಂದ!

ಪೆರ್ಮರದಾಚೆಯ ಗಾಳಿವಟ್ಟೆಯೊಳ್ ತೇಲ್ದು ಪಾರಾಡಿ ನಲಿಯುತಿರ್ದ ಕೆಂಬಣ್ಣದ ಕೆಂಬೂತಂ ಕೊರಳ್ದನಿ ಬಿಡಲೊಡಂ ಅಭಿಮನ್ಯು ಆಯೆಡೆಗೆ ಬಾಣಮಂ ರೊಯ್ಯನೆ ಸೆಳೆದುಬಿಟ್ಟಂ. ಓಓ! ನೋಡಲೇನದಂ? ಪಚ್ಚ ಪಸುರ್ ಎಲೆದೆರೆಯೊಳ್ ತೂರ್ದ ಬಾಣಂ ತೆರೆದದರ ಬಾಯೊಳ್ ಪೊಕ್ಕು ಕೊರಳಂ ಕೋರೈಸಿ ನೆತ್ತರ್ ಚೆಲ್ಲಿ ತಿರ್ರನೆ ತಿರುಗಿಸಿ ಕೆಡಗಿದುದು ಕಿರೆಯ ಮಡಿಲಿಂಗೆ. ೨೯೦

ಅರ್ಜುನಂ ಕುವರನ ಬಿಲ್ ಬಿಜ್ಜೆಯಭ್ಯುದಯದಿಂ ಮನಮೆರ್ಚಿ ಮೈವೆರ್ಚಿ ಪ್ರಥಮ ಪ್ರಯತ್ನದೊಳ್ ಕುಂದಿಲ್ಲದೆ ಮುಟ್ಟುವುದಂ ಕಾಂಬ ಇಚ್ಛೆಯುಂ ಪಚ್ಚೆಯಾಗಿ ಮೋದಂಬೆತ್ತು ಪಕ್ಷಿಯ ಪತ್ತೆಸಾರ್ದು ತೆರೆದದರ ಬಾಯೊಳ್ ನಾಂಟಿರ್ದ ಕೂರ್ಮೊನೆಯ ವಿಶಿಖಮಂ ನೋಡಿ—ಕುವರ! ನೀಂ ಬಿಲ್ ಬಿಜ್ಜೆಯೊಳ್ ಚಂಡ ಪ್ರಚಂಡಂ! ನಿನ್ನ ಪಿರಿಯರ್ಕಳಂತಂತು ಬಿಜ್ಜೆಯ ಸಿರಿಯುಂ ಮನದುಂಬಿ ಮೈದುಂಬಿ ಕೋಡಿವರಿದು ಜಗದೇಕ ಬೀರನೆನಿಪ್ಪ ಕಾಲಂದೂರವಿಲ್ಲೈ. ನೀಂ ಪುಟ್ಟನೊಳೆ ಬುದ್ಧಿಯ ತುಟ್ಟತುದಿಯ ನೇರ್ದೈ. ಇಂ ನಿಚ್ಚಂ ಅಭ್ಯಾಸಂ ಗೆಯ್ದೊಡೆ ಕುಲಕೀರ್ತಿ ಪಡೆವೈ. ೩೦೦

ಆಗಳಾ ಮಾತಿಂಗೆ ಅಭಿಮನ್ಯು ನಸುನಾಣ್ಚಿದೊಡಂ ಬಲದಿಂ ಬೀರದಿಂ ಚಲದಿಂ ಕೆರ್ಚಿನಿಂ ಪುರ್ಚಿನಿಂ ಕೆಂಗಲಿಸಿ ಪೆಂಪಿನ ಸೊಬಗುಗುವ ಮೊಗದೊಳ್ ಕಿರುನಗೆಯುಂ ತಳೆದು—ಅಪ್ಪಾ! ಕಲ್ತುಕೊಳ್ವುದೊಂದೆ ಬೆಸನದಿಂ ಬಿಟ್ಟೆನಾಬಾಣಮಂ; ಪಿರಿಯರ್ಕಳಂ ಮನದೆ ನೆನೆದು; ತಪ್ಪದೆ ಗುರಿ ಮುಟ್ಟಿದೊರ್ ವಿಶೇಷಂ. ೩೧೦

ಅರ್ಜುನಂ—ಏಗಳುಂ ಪರಕೆಯೆ ತಾನಲ್ತೆ ವಿಜಯಲಕ್ಷ್ಮಿಯುಂ

ಪೊನ್ನ ಗದ್ದಿಗೆಯೊಳ್ ಕುಳ್ಳಿರಿಸಿ ಕೀರ್ತಿಮಾಲೆಯಂ ಸೂಡಿ ತಲೆಗಾಯ್ವುದೆಲ್ಲ ಪೊಳ್ತಿನೊಳ್.

ಅಭಿಮನ್ಯು—ಈಗಳರಿತೆಂ ತಂದೆಯೆ !

ಅರ್ಜುನಂ—ಸಂತಸದಿಂ ತುಂಬಿತೆನ್ನೊಡಲ್ ನಿನ್ನಿಂದೀ ವೊಳ್ತು ಮಗನೆ !

ಅಭಿಮನ್ಯು—ಇಂತೀಗಳೆ ಪಿರಿಯ ಮಾತಿಂದೇನಕ್ಕುಂ ? ಆಂ ಬಿಜ್ಜೆಯೆಲ್ಲಮಂ ಕಲ್ತನಂತರ ಪೆರ್ಚಳೆಂ. ಆನಿನ್ನುಂ ಪುಡುಗುತನದೊಳ್ ಕಜ್ಜವೆಸಗುತಿರ್ಪೆಂ.

ಅರ್ಜುನಂ-ಕಂದ! ಯೋಗಾನುಯೋಗಮೇನಿರ್ದೊಡಂ ೩೨೦ ಪುರುಷಪ್ರಯತ್ನಂ ವೇಳ್ಕುಂ. ಇಂತಪ್ಪ ಕಡು ಚಲದಿಂ ಬಲದಿಂ ಪ್ರಯತ್ನದಿಂ ನೀನಯ್ದೆ ಸಾಸಿಗಂ. ಇನ್ನಾರ್ಜಿಪುದು ಕ್ಷಾತ್ರ ಶಕ್ತಿಯಂ ಮೇಣ್ ಕ್ಷಾತ್ರ ಧೈರ್ಯಮಂ.

ಅಭಿಮನ್ಯು—ನಿಮ್ಮರ್ಭಕಂಗೆ ಎಂದಾದೊಡಂ ಬೆಳ್ತನಂ ಬರ್ಕುಮೆ? ಎನ್ನೆರ್ದೆಯೊಳ್ ಪನಿ ನೆತ್ತರಿರ್ಪನ್ನೆಗಂ ಸಾವಿಗಂಜೆಂ. ಕೈಕಾಲ್ ಕತ್ತರಿಸಿದೊಡಂ ಪೋರ್ವೆಂ ರುಂಡಮುಂಡಗಳಿಂ ಎಂದೀಗಳೆ ಪೂಣ್ದು ಪೇಳ್ವೆಂ !

ಅರ್ಜುನಂ—ಅದು ಮಾತ್ರಮಲ್ತು, ಕೇಳಯ್ ರಣರಂಗಮೆಂದೊಡೆ ಚಿಣ್ಣರಾಟದ ಬಯಲಲ್ತು. ಪಜ್ಜೆಪಜ್ಜೆಯೊಳ್ ಕಟ್ಟೆಚ್ಚರಿರವೇಳ್ಕುಂ. ಎಲ್ಲೆಡೆಯುಂ ಅನೀತಿವಂತರ್ ಅನಾಚಾರಿ ೩೩೦ ಗಳ್ ಗೋಮುಖವ್ಯಾಘ್ರರ್ ರೋಸಗೀಸದ ಕವಡು ಬಿಜ್ಜೆಯೊಳ್ ಕಾಳಗವೆಸಗುವರ್. ಅಂತಪ್ಪುದಂ ಕಂಡೆಡೆ ಕೊಚ್ಚಿ ಕಂಡರಿಸಿ ಕೊಲೆಗೆ ಕೂಳಿಕ್ಕಲಕ್ಕು. ಮೇಣ್ ರಣದೊಳ್ ಚೀರ್ವರ ಸಾಯ್ವರ ರಣಗೋಳಂ ಕಂಡು ಎರ್ದೆಗೆಟ್ಟು ಪಿಂಜರಿದೊಡೆ ಸಾಸಂ ವ್ಯರ್ಥಂ.

ಆ ಮಾತಂ ಕೇಳ್ದು ಅಭಿಮನ್ಯು ದಿಟ್ಟತನದಿಂ ತಲೆಯಂ ತೊನೆದು, ಮಿಂಚುಗಣ್ಣಿನೊಳ್ ಕೆಚ್ಚಿನ ಕಿಡಿಯಂ ಸೂಸಿ ಕ್ಷಾತ್ರ ತೇಜದಿಂ ಬೆಳಗಿ ಕೇಳಿಸಿದನಿಂತು–ಪಿಂಜರಿದೊಡೆ ಆನಪ್ಪುದೆಂತು ಅರ್ಜುನಸೂನು ? ರಣರಂಗದೊಳ್ ಮುನ್ನುಗ್ಗಿ ರಣಗೋಳಿ ಗಂಜುವರೇಂ ಅಯ್ಯ? ಏನಿರ್ದೊಡಂ ದಿಟ್ಟತನದಿಂ ಸಲ್ವೆಂ. ಆರೆನ್ನ ನಿದಿರ್ಚಿದೊಡಂ ಲೆಕ್ಕಿಸದೆ ಪೊಣರ್ದು ಜಡಿದು ಕೊರ್ಚಿ ತುಂಡರಿಸಿ ಸೊಪ್ಪುಸೊವಡಪ್ಪಿನೆಗಂ ಬಡಿಯದೆ ಬಿಟ್ಟೆನಾದೊಡೆ ಮತ್ತಮಾ ರಣರಂಗಕೆ ಬೆಂಗೊಟ್ಟೆನಾದೊಡೆ ಮುನಿ ಋಷಿಗಳಂ ಪಿರಿಯರ್ಕಳಂ ಪಳಿವ ತೆಗಳ್ವ ಕಡು ಕೂಳನೊಂದು ಕೀಳ್ಗತಿ ಎನಗಕ್ಕೆ ! ೩೪೦

ಇಂತು ಪೆರ್ಮೆಯಿಂ ಪುರುಪಿಂ ಕಂಚುಮಿಂಚಾಗಿ ಪೊಣ್ದ ಕುವರನ ಮಂಡೆಯಂ ನಿಳುಪಿ ಮುದ್ದಿಕ್ಕಿ ಮುಂಡಾಡಿ ನುಡಿದಂ ಕಿರೀಟಿ–ಭಲೆ ! ನೀನಹುದು ಕುಲ ಪ್ರದೀಪಂ !

ಅಭಿಮನ್ಯು–ಎನ್ನೀ ನೆಚ್ಚುಂ ಪಚ್ಚೆಯಕ್ಕೆ ಸಾಲ್ಗುಂ ಅಯ್ಯ!

ಅನಂತರಂ ಬಗೆವಗೆಯ ವಿಶಿಖಂಗಳಂ ಪೂಡಿ ಬೇರೆ ಬೇರೆ ಒರಸೆಯಂ ತೋರ್ದು ಕಲಿಪಿ ಪೊಳ್ತೇರ್ದ ಬಳಿಕ್ಕಂ ಅರ್ಜುನ ನಿಂತೆಂಗುಂ–ಕಂದ, ಈಗಳ್ ಬೀಡಿನೊಳ್ ಅಬ್ಬೆ ಕಾದಿರ್ಪಳ್ ನಿನಗಂ, ನಾಮಿನ್ನು ಚೆಚ್ಚರದಿಂ ಪಿಂತಿರುಗಲಕ್ಕುಂ. ೩೫೦

ಅಭಿಮನ್ಯು–ಅಕ್ಕೆ, ಇನ್ನನುದಿನಂ ಶಸ್ತ್ರಾಭ್ಯಾಸಂಗೆಯ್ವೆನಿಂತೆ.

ಅರ್ಜುನಂ–ಆಯ್ತು, ರಾಜಕುಲೋದ್ಭವಂಗೆ ಇಂತಪ್ಪ ಬಿಜ್ಜೆಯಾಸೆಯಿರವೇಳ್ಕುಂ.

ಅಭಿಮನ್ಯು ಬಾಣಗಳಂ ಮೂಡಿಗೆಯೊಳಗಿಕ್ಕಿ ಬಿಲ್ಲಂ ಕೈ ಕೊಂಡಯ್ಯನ ಬೆಂಬಿಡಿದು ನಡೆದಂ. ಮುಂತೆ ಮುಂತೆ ಪಯಣಂ

ಬೆತ್ತು ಹಾದಿಗಡ್ಡೈಸಿರ್ದ ಗಿಡಗೆಂಟೆಯ ಹರೆಗೈಯಂ ನಿಟಿ ನಿಟಿ ಮುರಿಯುತಿರ್ದರ್ಭಕಂಗೆ ಅರ್ಜುನಂ– ಇಂತೇಂ ಪಳುವಿನಲಿ ನುಗ್ಗುತಿಹೆ ಕಂದ! ಇತ್ತಲಿಹುದು ಮೃಗಚರಣಂಬರೆದ ಕಿರು ೩೬೦
ಬಟ್ಟೆ; ಆ ಪಳುವಂ ದಾಂಟ ಇತ್ತ ಬಾರಯ್.

ಅಭಿಮನ್ಯು–ಈಯೆಡೆಯೊಳ್ ಇದೆ ಮೊದಲ್ ಕಾಲಿಕ್ಕಿದೆಂ. ಇಂ ಸರಿ ಬಟ್ಟೆ ಕಂಡೆಸಿಲ್ಲಂ.

ಅರ್ಜುನಂ–ನೇತ್ರ ಪುಂಜದ ಮುಳ್ಳೊಟ್ಟೆಯೊಳ್ ನುಗ್ಗಿದೊಡೆಂತು? ಇತ್ತಲಿತ್ತಲ್ ನಸುನೆಡಕ್ಕೆ ಸರಿದು, ಅದೇ ಬಟ್ಟೆಯೊಳ್ ಬರ್ಕುಂ.

ಅಭಿಮನ್ಯು–ಇಂತಪ್ಪ ದಟ್ಟ ಪಳುವಿನೊಳ್ ಪಜ್ಜೆ ಮುಂದಿಡುವುದೇ ಕಷ್ಟಂ. ಎಡಬಲದ ಮುಳ್ಳೊಟ್ಟೆಗಳ್ ಮೊಗಮೈಗೆ ತಾಗಿ ಕೀಸುತಿರ್ಪುವು. ನಾಮುಂ ಬಟ್ಟೆದಪ್ಪಿದೊಲ್ ತೋರ್ಪುದೆನಗೆ.

ಅರ್ಜುನಂ–ಈಯೆಡೆಯ ಪಥಂ ಸರಿಯಿರ್ಪುದು. ಈ ಕಿರು ೩೭೦
ಬಟ್ಟೆವಿಡಿದು ಇತ್ತ ಬಾರಯ್. ಹಾ, ನಿಲ್. ನಿನ್ನ ಉತ್ತರೀಯಂ ಮುಳ್ಳೊಟ್ಟೆಯಲಿ ಸಿಲ್ಕಿರ್ಪುದು ಕಾಣ್! ಎಳೆದು ಪರಿಯದಿರ್.

ಅಭಿಮನ್ಯುವಾಗಳ್ ನಿಂತೆಡೆಯಿಂ ಪಜ್ಜೆ ಕೀಳದೆ ನಾರುಮಡಿಯಂ ಬಿಡಿಸಿಕೊಳ್ವನಿತರೊಳ್ ಅರ್ಜುನಂ ಕುವರನ ಪತ್ತೆ ಸಾರ್ದು ಮೆಲ್ಲಮೆಲ್ಲನೆ ಬಿಡಿಸುತಿರಲ್ ನಾರುಮಡಿ ಬೀಸುವ ಗಾಳಿಗೆ ಸಿಲ್ಕಿ ಮತ್ತೊಂದೆಡೆಯೊಳ್ ತೊಡರ್ಚಿ ಪಟಪಟಿಸಿದುದು ನಾವೆಯ ಪಟದವೊಲ್.

ಅರ್ಜುನಂ–ಅವಸರಿಸದಿರ್ ಕಂದ! ನೀನೀ ಸೆರಗಂ ಬಿಗಿವಿಡಿ. ಆಯೆಡೆಯೊಳಾಂ ಬಿಡಿಪೆಂ.

ಮತ್ತಂ ಸುಳಿಗಾಳಿಯ ಕೀಟದಿಂ ರೊಯ್ಯನೆ ಪಾರ್ದ ನಾರು ಮುಡಿ ಕರ್ಮುಳ್ಳಿನ ಟೊಂಗೆಯೊಳ್ ಸಿಲ್ಕಿದುದು ಇನ್ನೊಂದೆಡೆಯೊಳ್. ಪಾರ್ಥಂ ತೆಕ್ಕನೆ ಮುಂಬರಿದು ಎಡೆಎಡೆಯೊಳ್ ಮೆಲ್ಲನೆ ಬಿಡಿಸಿ ಕೈಕೊಂಡು ಅಲ್ಲಿಂದೆ ಕುವರನೊಡಂ ಮೃಗಚರಣ ರೇಖಾಪಥಮುಂ ಪಿಡಿದು–ಮಗನೆ! ನಿನ್ನ ಗಮನವೆತ್ತಣಿರ್ದುದೊ ಇಂತು ಮುಳ್ಪೊಟ್ಟೆಯೊಳ್ ನುಗ್ಗುವನ್ನೆಗಂ. ೩೮೦

ಅಭಿಮನ್ಯು–ಆಂ ನಲ್ವಾತಿನೊಳ್ ಮತ್ತಮಾ ಪೇರಡವಿ ಗಾತ್ರದೊಳ್ ಮನವಿಟ್ಟು ಮುನ್ನಡೆವಾತುರದೊಳ್ ಬಟ್ಟೆವಪ್ಪಿದೆಂ. ಅಮಮ! ಏಂ ಪೇರಡವಿ! ಏಂ ಗಿಡುವಳ್ಳಿ ! ಪಯೋಷ್ಣಿಯ ತಣ್ಪುಂಡು ಕಳ್ಳಿ ತುರುಚಿ ಪಳುಗಳ್ ಪರ್ಬಮೆಂಬವೊಲ್, ಮುಂಬೆಳೆದು ದಟ್ಟೈಸಿರ್ಕುಂ. ರವಿಕಿರಣ ಬೆರ್ಚಿ ಪಿಂಜರಿದಿರ್ಕುಮೊ ಎನೆ ಬಿಸಿಲ್ಗಾವು ಇನಿತಿಲ್ಲಂ. ಅಹಹ ! ಏಂ ಶೀತಲಂ? ಏಂ ಶಾಂತಿ ? ಏಂ ಪಚ್ಚರಾಗಂ? ಒರ್ಮೆಗೆ ಮೈಮನವೆರ್ಚುವಂತಿರ್ಕುಂ. ಅತ್ತಲ್ ಬಯಲೊಳ್ ಬೆಚ್ಚನೆ ಕಾವುಣಿಸಿದುದು ಎಳೆವಿಸಿಲ್. ಇತ್ತಲ್ ಶೀತಲವಾತಂ ಕೊರೆಯುತಿರ್ಕುಂ.

ಅರ್ಜುನಂ ನಗೆಮೊಗದಿಂ – ಓ ಓ ! ಅದು ಮಾತ್ರಮೇಂ ಕುವರ ! ಬಿಲ್‌ವಿಜ್ಜೆಯ ಪುರುಪೆನಿತು ಕಾವಿತ್ತುದು ಮೆಯ್ಗೆ ? ೩೯೦

ಅಭಿಮನ್ಯು–ಅಹುದಹುದು, ಮರೆತಿರ್ದೆಂ. ಆಗಳುಂ ಶೀತಭಾದೆಯಣಮುಂ ಕಂಡೆನಿಲ್ಲಂ. ಬಿಲ್‌ಬಿಜ್ಜೆಯ ಪುರುಪು ಅಂತಿರ್ದುದು.

ಅರ್ಜುನಂ– ಮುನ್ನಡೆಯೊಳ್ ಮನವಿಟ್ಟು ಮಾರುಗಾಲಿಕ್ಕುತಂ ನಡೆದು ಮುಂಗಡೆಯೊಳ್ ಹಾದಿಗಡ್ಡೈಸಿ ಪರಿವ ಕಾಲ್ವಾಯಿಯುಂ ದಾಂಟಿ ಬೀಡಿನ ಬಟ್ಟೆಯುಂ ಪಿಡಿದಂ ಕುವರನೊಡಂ.

ಅರ್ಜುನಂ–ರುಂದ್ರಾರಣ್ಯಮಿದು ಪಕ್ಷಿ ಮಧುರಮೆಂತಂತು ದುಷ್ಟವ್ಯಾಘ್ರ,ಕೋಳ್ಮೃಗ, ಕಾಳಪನ್ನಗ ಕರಿಣಂ, ಕರಿಣಾತಿಕರಿಣಂ.

ಅಭಿಮನ್ಯು–ನಿಮ್ಮ ನಲ್ ವಾಕ್ಯದೊಳ್ ಕಾವ್ಯರಸದ ೪೦೦ ಸೊಬಗಿರ್ಕುಂ.

ಅರ್ಜುನಂ ನಲ್ಮೆಯಿಂದಿಂತು ಕೇಳಿಸಿದಂ–ಈ ಮಾತುಂ ಕಾವ್ಯತೃಷೆಯೆಂಬೆಯೇಂ ? ಎಂತಪ್ಪ ಕಾವ್ಯಕೋವಿದರ್ ಸಲ್ಲ ದಾದರ್ ಈ ದಿಸೆಯೊಳ್. ಸೊಬಗು ಸಿರಿಯ ಕಾವ್ಯಕಾನನಂ ಕವಿ ರಸಿಗಳಿಗಲ್ತೆ ಮಿಾಸಲ್ ? ಆನೆಂತು ಸಲ್ವೆಸಿದರೊಳ್.

ಅಭಿಮನ್ಯು–ನಲ್ಮಾತಿನೈಸಿರಿಯುಂ ಪರಿಯಲದು ಕಾವ್ಯ ಮಕ್ಕುಂ. ಆಗುರ್ಮಿದು ಮಿಾಸಲಲ್ಲಂ.

ಅರ್ಜುನಂ–ಅಂತೆನೆ ಸುಲಭಂ. ಕಾವ್ಯಮೆಂದೆಂದು ಕಾವ್ಯಂ. ಹಾ, ಮಾತಿನ ಮೋಡಿಯೊಳ್ ಕಲ್ಲೆಡವಿ ನೆತ್ತರ್ ಪರಿದುದುದೆನ್ನ ಕಿರಿವೆರಳಿಂ. ೪೧೦

ಅಭಿಮನ್ಯು–ಆಂ ಈಯೆಡೆಯೊಳೆಂದುಮೆಂದು ನಡೆಯ ದಿರ್ದೊಡಂ ಕಾಲ್ಗೆ ಗಾಸಿಗೈದೆನಿಲ್ಲಂ. ನಿಮ್ಮ ಬರ್ದುಂಕಿನೊಳ್ ಕಾಡು ನಾಡಿಗಿಂ ಪೆರ್ಚಿರ್ದೊಡಂ ಮತ್ತೇನಿಂತು ಗಾಸಿವಟ್ಟಿರ್ ?

ಅರ್ಜುನಂ ಮೊಗದೊಳ್ ಕಿರುನಗೆಯುಂ ಸೂಸಿ–ಎಲ್ಲಂ ಬರ್ದುಂಕಿಗಳವಟ್ಟುದಲ್ತೆ? ಸುಕದುಕ್ಕ ಒಡಗೂಡದೆಲ್ಲಿಯು ಬಾಳ್ತೆ?

ಅಭಿಮನ್ಯು ಅಹುದೆಂದು ಮಿಣ್ಣನೆ ತಲೆದೂಗಿದಂ.

# ತೃತೀಯಾಶ್ವಾಸಂ

ಲೋಕದೊಳ್ ತೋಱುಂಗಿರದೆ ತನ್ನೊಂದು ಮೈಮೆಯ
ಗರಗರಿಕೆಯ ಸೊಮ್ಮನಭ್ಯುದಯದೆ ಮೈವೆರ್ಚಿದ ವಸಂತರಾಯ
ನುರ್ಕುಂ ಸೊರ್ಕುಂ ಸೋರ್ದುದೊ ಎನೆ ಬಯಲಪ್ಪಿನೆಗಂ
ದಾಳಿಗೆಯ್ದು ನಾಡಂ ಬೀಡಂ ಕಟ್ಟುರದಿಂ ಪಡಲಿಸಿ ಪುರುಳ್ಗೊಂಡು
ತಾಂ ಮುಕ್ಕಣ್ಣನುರಿಗಣ್ಣಿಂಗೆ ನೆರವಾದನೆನೆ ಉಗ್ರಗ್ರೀಷ್ಮರಾಜಂ
ಮೈದೋಱಿದಂ. ದಿನದಿನಂ ಕೊಳಂಗಳುಂ ನದಿಗಳುಂ ಸುರ್ಕಿ
ತಿರಲ್ ಕೆಸರ ಪಸೆಯುಂ ಬತ್ತಿ ಪಾವಸೆಯುಂ ಆಳಿಯೆ ನೀರ್ವಕ್ಕಿ
ಗಳ್ ದೆಸೆದೆಸೆಗೆ ಪಾರ್ದುವು ಬೇಱೆವೇಱೆ ನೀರ್ಗೊಳಂಗಳಂ
ಪುಡುಕುತುಂ. ಸುಡುಗಾಳಿಯ ತೀಟದಿಂ ಕೆಂಧೂಳೆಳ್ದು ಗಿಡು
ಮರಮುಂ ಮುತ್ತಿ ಸುಡುಬಿಸಿಲ ಕಾಯ್ಪಿನಿಂ ಬಿಸುಪುಗೊಂಡು     ೧೦
ತನಿರಸಮಂ ಪೀರುತಿರ್ದುದು ಗ್ರೀಷ್ಮಂಗೆಣೆಯಾಗಿ.

ಮೂಡಣದೊಳ್ ಮುಂಬೆಳಕುಮಿನ್ನುಂ ಮೂಡುತಿರೆಯಿರೆ
ತಂಗಾಳಿಯುಂ ತೀಡಿ ಗಿಡುಮರ ಬಳ್ಳಿಗಳಿಂ ಮುಂಬಕ್ಕಿಗಳನೇಳಿಸಿ,
ಪರ್ದು ಕಾಗೆಗಳಂ ಪಾರಿಸಿ, ಕುಕ್ಕುಟಂಗಳಂ ಮತ್ತೆಮತ್ತೆ ಮೊಳ
ಗಿಸಿ ಸದ್ದಿನ ಸೆಲೆಯೊಡೆಸಿದುದು ನಾಡಿನೆಲ್ಲೆಡೆಯಿಂ. ಚೆಂಗದಿರನ
ಚುಂಬನದಿಂ ಬೆಚ್ಚಂತು ಉರ್ಬಿ ಮೈಮನವೆರ್ಚೆ ನಿಗುರ್ದ ಕರ್ವೆ
ಟ್ಟಿನ ಪದಸರಂ ಪ್ರಾತಃಶ್ರೀಯಿಂ ಪೊದಳ್ದು ನಿಚ್ಚಮೊಸರ್ವ
ಸಜ್ಜನ ಪೆರ್ಚಿಗೆಯುಬ್ಬರದ ನಿಡುದಾಣದೊಳ್ ಹಿಮಮಣಿ ಬಿಳ್ದು,
ಬಿಡುಮುತ್ತಿನ ಜಾಲರಿಯ ಪಸೆಯಂ ನೆಚ್ಚಿ ನೆಯ್ದಿರೆ ಪೊಂಬಿಸಿಲ್
ಪ್ರತಿಫಲಿಸಿ ಬಜ್ಜರದರಲಂ ಮೀರ್ದು ತಳತಳಿಸಿ ಪೊಳೆದತ್ತು     ೦೨

ಬನದೇವಿಯ ಕಡುಚೆಲ್ವಿನ ಸೀರೆಯೊ ಎನೆ ಬೆಮೆಯುಂ ಬಿತ್ತುವ
ತೆರದೊಳ್ ಕಣ್ಮನಕಂ, ಅಲ್ಲಲ್ಲಿ ದಟ್ಟಯಿಸಿರ್ದ ಮುಗಿಲ್ಮಂಜು
ಕರಂಗಿ ತಂಗಾಳಿಯ ಶೀಟದಿಂ ನೆಲೆಗಟ್ಟು ಚದುರಿ ಮೈಗರೆಯು
ಲೊಡಂ, ಬನದಲಿ ಮಂಜುಗಳ್ತಲೆಯೊಳ್ ಪುದುಗಿರ್ದ ಮಿಗಕುಲಂ
ತರಗೆಲೆಯ ನಲ್ವಾಸಿನಲಿ ಮೈದೋರ್ದುವು ಚಂಗನೆ ಚಿಮ್ಮುತ
ಚೆಂಗಾವಿಯ ಮೈ ಕೊರ್ವಿನ ಚೆಲ್ವು ಚೆಲ್ಲಿ. ಮುಗಿಲ್ಮುಟ್ಟುವ
ವೊಲ್ ನೆರೆಮೆರೆದೊಪ್ಪುವ ಪೆರ್ಮರಂಗಳಂ ಕೆಂದಳಿರುಂ ಸಿಂಧೂರ
ವಿಲಿಪ್ತ ಸಿಂಗರದ ಪಾಂಗಿನಿಂ; ಕೋಡುವೆಟ್ಟನ ನಡುನೆತ್ತಿಯ
ಪೀಠವೇರಿರ್ದ ಎಳನೇಸರ್ ಮೋದಂಬೆತ್ತು ಜಗಮಂ ಬೆಳಗುವ
ಬಗೆಯಿಂ; ಬಗೆವಗೆಯ ಕಮ್ಮಲರಂ ಮುದ್ದಿಸಿ ಮುದ್ದಿಸಿ ೩೦
ಮೈವೆರ್ಚಿದ ಕಮ್ಮೆಲರುಂ; ಮುಗಿಲೊಡ್ಡೊಳ್ ಸುಗ್ಗಿ ಪಾರಾಡಿ
ನಲಿವ ಬೆಳ್ಳಕ್ಕಿಗಳ ತಂಡದಿಂ; ಬಂಡುಣಿಗಳ್ ಸಂದಣಿಸಿ ದುರು
ದುಂಬಿತನದಿಂ ಪೂವಿಂ ಪೂವಿಗೆ ಪಾರ್ದು ಕಂಪಿನ ಪೆಂಪಿಗುರ್ಬಿ
ಸಂತಸಗೊಂಡು ಝೇಂಕರಿಸಿ ಮಾರಾಂತು ಅವ್ವಳಿಸಿ ಮೊನೆ
ವಲ್ಗಳಿಂ ಚುರ್ಚಿ ರಸಂಪೀರ್ದು ಕಳನೊಳ್ ಕದ್ದೊಯ್ಯುವ
ಮಧು ಬೇಂಟೆಯಿಂ; ಗಿಡು ಮರಂಗಳ ನಿಡುಗೊಂಬೆಯೊಳ್
ಪುದುಗಿ ಬಗೆವಗೆಯ ರಾಗಂಗಳಿಂ ಪಾಡುತಿರ್ದ ಪಕ್ಕಿಗೊರಲ
ಸುಪ್ರಭಾತದಿಂ ಪೊತ್ತರೆಯ ಪದಂಪು ಮಧುರಂ; ಮನೋಜ್ಞಂ.

ಇಂತಿರ್ದು ನೆರೆಮೆರೆದೊಪ್ಪುವ ಸುಕ್ಷೇತ್ರಂ ಗಂಗಾಸರಿತ್ಸಾಗರ
ತೀರ್ಥದೊಳ್ ಮಿಂದು ಮಡಿಗೊಂಡುದೊ ಎನಲ್ ಮೆರೆದತ್ತು ೪೦
ಕರ್ವೆಟ್ಟನುಂಗುಟದ ನಿಡುವಲಯಂ ಪಾಂಡುಕುಲಜರ್ಗೆ ಸಗ್ಗದ
ಸೊಗಂಬರಿಪ ನೆಲೆಯಂಗೊಟ್ಟು. ನೆಲೆವೀಡಿನ ಎಡಗಡೆಯೊಳ್
ಪುಣ್ಯದ ಮಹಾರಾಶಿಯವೊಲ್ ಪಸುರುಕ್ಕುವ ಕೆಯ್ವೊಲಂ
ಕೇತಕಿಯ ಪಿಂಡಲಿನ ಬೇಲಿಯ ರಕ್ಷೆಯೊಳ್ ನೆರೆಮೆರೆದುದು
ನೂರಾರುವಗೆಯ ಗಿಡುಮರ ಲತೆಗಳಿಂದೊಪ್ಪಿ. ಅಹಾ ! ಸಿಂಗರದ
ಸಿಂಗಗಳೆಂತಂತು ಚೆಂದಳಿರ ಚೆಲುವುಳ್ಳ ಕಂಪಿನ ಪೆಂಪಿನ ಸೊಂಪಿನ
ಅಂದಚೆಂದದಿಂದೊಪ್ಪುವ ಕತ್ತುರಿಯಿಂ, ತೊಳಚಿಯಿಂ, ದವನದಿಂ

ಪತ್ರೆಯಿಂ, ಮೊಲ್ಲೆಯಿಂ, ಮಂದಾರದಿಂ, ಸಂಪಗೆಯಿಂ, ನಾಗ
ಸಂಪಗೆಯಿಂ ಮತ್ತಮಾ ನಲ್ ಸಂಬಾರಮಾಗಿ ಖಣಂಬರಿಸಿದ
ಮೆಣಸಿಂ, ಕೊತ್ತುಂಬರಿಯಿಂ, ತೊಗರಿಯಿಂ, ಪುರುಳಿಯಿಂ, ೫೦
ಅವರೆಯಿಂ, ಜೀರಿಗೆಯಿಂ ಮತ್ತಂಮತ್ತಂ ರಘುವರನ ಕೋಯಂಡ
ಮೆಂತಂತು ದಂಡಂಗೊಂಡ ಬಗೆವಗೆಯ ಕರ್ಬಿನಿಂ, ಭೃಗು
ಮುನಿಯಂ ಪೋಲ್ವಂತೆ ಜಟೆಯಂಬರಿಸಿದ ಕೆಂಜೋಳದಿಂ
ಪೊಸಪೂವಿಂ ಮಿಡಿಗಾಯಿಂ ವೈವೆರ್ಚೆ ಶೀವಿದಿವಮ್ರಾವಿಂ, ಶಿಳಿ
ನೀರ್ ತುಂಬಿದ ಪೊಂಗಳಸಮಿದೆನೆ ಇಂಬಿಡಿದು ಜೋಲು ಬಿಳ್ದ
ತೆಂಗಿನಿಂ, ಪೊಂಬಣ್ಣದಿಂ ನಳನಳಿಪ ಬೀಜಪೂರದಿಂ, ಬನದೈಸಿರಿಯ
ಸಿರಿಮೊಗದೊಳೊಗೆದ ಬೆಳ್ನಗೆಯೊಳ್ ಕಾಂಬ ಸಾಲುಸಾಲಾದ
ಪಲ್ಗಳನನುಕರಿಸಿ ಬಿಳ್ತನೊತ್ತಂಬಿಡಿದರೆವಿದ ಕೆಂದಾಳಿಂಬದಿಂ,
ಕಾಮದೇವನ ಪೇರುಕ್ಕೆವದೊಳ್ ಪೊತ್ತಿಸಿದ ದೀವಿಗೆಗಂಬ
ಮೆಂಬಂತಿರೆ ಪೊಂಬಾಳೆಯೊಡೆದ ಕೌಂಗಿನಿಂ, ಪಣ್ತ ನಿಡುವಣ್ಗಳ ೬೦
ಭಾರದಿಂ ಮರಂ ಮುರಿದು ಬೀಳ್ವುದೊ ಎಂದೆಂಬಂತಿರೆ ತುಂಬಿರ್ದ
ಪಲಸಿಂ, ಗಿಡಗಿಡಂಗಳ ಬುಡದೊಳ್ ನಾರಿನದಾರದಿಂ ಸುರಿದ
ಮಣಿ ಸರದಂತೆ ಪೊದಳ್ದ ಏಲಕ್ಕಿಯಿಂ, ಹರಿಯೊಲ್ ಪೀತಾಂಬರ
ಮುಟ್ಟು ಸೊಗಯಿಸಿದ ನೀರುಳ್ಳಿಯಿಂ, ಗೊಂಚಲ್ ಗೊಂಚಲ್ವೆತ್ತ
ರಂಗುರಂಗಿನ ಬದನೆಯಿಂ, ಸಾಲುಸಾಲ್ಗೊಂಡು ಮಿಡಿ ಕಸುಗರ್ಚ
ಗಳ್ವೆತ್ತು ಜೋಲು ಬಿಳ್ದ ತೊಂಡೆಯಿಂ, ಬಿಣ್ಪಿನ ಕರ್ಪಿನ ಹಳದಿಯ
ಪಚ್ಚೆಯ ಬಗೆವಗೆಯ ಉದ್ದುದ್ದನೆಯ ಸವುತೆಯಿಂ ಇಂತಪ್ಪ
ಜೀವನಮುಚಿತಮಾದ ನಿಡುದೋಂಟಂ ನಳನಳಿಸಿ ಕಣ್ಗಿಂ
ಬಾಗಿರ್ದುದು ಹರಿದ್ವಾರ್ಧಿಯೊಲ್. ನೆಲೆವನೆಯ ಬಲಗಡೆ
ಯೊಳ್ ಪೊಸವರ್ಣದಿಂ ರಂಜಿಸಿರ್ದ ಗೋಶಾಲೆಯುಂ ಗಜ ೭೦
ಶಾಲೆಯುಂ ಅಶ್ವಶಾಲೆಯುಂ ಕೂಡಿರ್ದ ಮಹಾ ಪ್ರಾಸಾದ
ಮಿರ್ದುದು ಕಣ್ಗೊಪ್ಪುವವೊಲ್. ಮುಂಗಡೆಯೊಳ್ ಗೋಮ
ಯಮಂ ತಳ್ತು ರಂಗವಲ್ಲಿ ಚಿತ್ತಾರಮಂ ಚಿತ್ರಿಸಿರ್ದ ಪ್ರಾಂಗಣಂ
ಸೊಗಯಿಸಿದತ್ತು ಬೀಡಿಗನುಗುಣಮಾಗಿ. ಮತ್ತಾ ಪ್ರಾಂಗಣ

ದಂಚಿನ ಚಂದನ ದ್ರುಮಂಗಳ್ ಮುಗಿಲ್ಮಂಜಿನೊಳ್ ಇಣುಕುತಿ ರ್ದುವು ಸಗ್ಗಮಂಪುಗುವವೊಲ್. ಮೂಡಣ ರಂಗದೊಳ್ ಎಳ ನೇಸರ್ ಒಯ್ಯನೊಯ್ಯನೆ ಸಾರ್ದು ಮಂಜಿನ ತೆರೆಯಂ ಶೀಳ್ದು ಮೇಲೇರೆ ಚಂದನ ದ್ರುಮಂಗಳ ಪಡಿನೆಳಲ್ ನೆಲದೊಳ್ ಸೀಳ್ದುದು ಕಡಿದು ಕೆಡೆದುದೊ ಎನಲ್ಕೆ.

ಇಂತು ಸೊಬಗುವೆತ್ತು ಸಿಂಗರದ ಸಿರಿಯೊಲ್ ಮಂಗಳದ ೮೦ ಮನೆಯೊಲ್ ಆನಂದದಾಗರಮೆಂಬಂತೆ ಮೆರೆದೊಪ್ಪುವ ನೆಲೆ ವನೆಯ ಮುಂಗಡೆಯೊಳ್ ಅಭಿಮನ್ಯು ತನ್ನೆಣೆವರೆಯದ ಗೆಣೆಯ ರೊಡಂ ಮೋದದಿಂ ಸಡಗರದಿಂ ಕೂಡಿರ್ದಂ ಆಟಂಗುಳಿಯಾಗಿ. ನಗೆವಾತುಗಳ ಸಲ್ಗದ್ದಲಂ, ಅತ್ತಲಿತ್ತಂ ಜಿಗಿದಾಡುವ ಪುಡುಗುಂ ಬಾಲಲೀಲೆಗೆಯ್ದುದು ನಿಡುವಲಯದೊಳ್. ಬಾಲರೊಳೊರ್ವಂ ಗೆಣೆಯರಂ ಕೂಡಾಡುತೆ ಕಣ್ಮರೆಯಾಟದೊಳ್ ಮನವಿಟ್ಟು ದೂರಸಾರ್ದು ಪುಲ್ಲಿನೊಳ್ ನುಸುಳ್ದು ಪಳುವೊಳ್ ಕಣ್ಮರೆಯಾಗೆ ಮಿಕ್ಕಿನ ತಕ್ಕಿನ ಬಾಲರ್ಕಳುಂ ಎಲ್ಲೆಡೆಯುಂ ಪುಡುಕಿ ಜಾಡಂ ಬಿಡದೆ ಬೆಂಬಿಡಿದು ಬರುತಿರ್ದುದಂ ಕಂಡ ಅರ್ಭಕಂ ಪುಳಕಿತನಾಗಿ ತಟ್ಟನೆಯ ಪುಟದೆಳ್ದು ಜಿಗಿದೋಡಿ ಕರ್ಬಂಡೆ ಮರೆಯೊಳೊಂದು ೯೦ ಪೆರ್ ಗವಿಯಂ ಕಂಡು ಪೊಕ್ಕಂ. ಅದರೊಳಗೊಳಗಿರ್ದೊಂದು ಸೃಗಾಲಂ ಬೆಚ್ಚಿ ಬೆದರಿ ಪೊರಗೆಯ್ದಲೆಂದು ನುಗ್ಗಿ ಮೇಲಾಯ್ದು ಬರಲ್ಕೆ, ಕಡು ಕಳ್ತಲೆಯ ಗವಿಯೊಳದಂ ತಿಳಿಯದೆ ಪುಲಿಯೆಂದಳ್ಕಿ ಚೀರಿಡುತೆ ಅರ್ಭಕಂ ಬಿಳ್ದೆಳ್ದು ಪೊರಗೋಡಿ ಬಂದುದಂ ಕಂಡು ಆಟಮುಂ ಕಡೆಗಣ್ಚಿ ಎಲ್ಲರುಂ ಮರವಟ್ಟು ಬಗೆಗೆಟ್ಟು ಕಣ್ಣೊಳ್ ಕಣ್ಣಿಟ್ಟು ನೋಡುತಿರೆಯಿರೆ ಸೃಗಾಲಂ ತೆಕ್ಕನೆ ಪೊರವಂದು ಪ್ರಾಣಭಯದಿಂ ದಿಕ್ಕುಗೆಟ್ಟೋಡಿದಂ !

ಒಡನೊಡನೆ ಬಾಲರ್ಕಳ್ ಹೋಯೆಂದುಂ ಘೇಯೆಂದುಂ ನೆರೆವೊರೆದಾಡುತಿರಲಾ ಘಳಿಗೆಯೊಳ್ ನಿಡುಮಿಾಸೆಯ ಕರ್ವೇಡ

ನೊರ್ವನಲ್ಲಿಗೈತಂದಂ. ಕೆಂಗಣ್ಣಿನ, ಪೆರ್ಮೂಗಿನ, ತೋರಗಿವಿಯ ೧೮೦
ಘೋರಮಪ್ಪ ರೂಪುಂ. ಕೊರಲ್ ಕತ್ತುರಿಯ ತೊಳಚಿಯ
ದಾಸವಾಳದ ತೋರದಂಡೆಗಳಿಂ ವಿರಾಜಿಸೆ, ಲಲಾಟಪಟ್ಟದೊಳ್
ಮೂರುಂಗವಲೊಡೆದ ಪಟ್ಟೆನಾಮವಿರ್ದು ಶಿರಮುಡಿಯೊಳ್
ಕಣಿಗಿಲೆ ಪೂದಂಡೆಯ ಸಿಂಗರವೆಸೆಯೆ ನಿಡುಮೆಯ್ಯುಂ ಕರ್ಮುಗಿಲ್ಗೆ
ಪಾಸಟಿಯಾಗೆ ಒಡಲ ಕಟ್ಟುಬ್ಬಸದುರ್ಬಿನ ಕಟ್ಟುಸಿರುಂ
ಮೇಲೇರ್ದು ಬರುತಿರಲ್ ಮುಕ್ಕಣ್ಣನ ದೂತನೆನೆ ಕಣ್ಗೆಸೆದಂ
ಚಾಪ ವಿಶಿಖಂಗಳ ಸಹಿತಂ.

ಬಾಲಕರ್ಕಳುಂ ಇಂತಿರ್ದಿವನಾರದಾರೆಂದು ಕಟ್ಟಚ್ಚರಿಯಿಂ
ನೋಡುತಿರೆಯಿರೆ ಪತ್ತೆಸಾರ್ದ ಕರ್ವೇಡಂ ಕರ್ಪುಗುವ ಮೊಗದೊಳ್
ಎಳನಗುವಂ ಸೂಸಿ ನೈಬಾಗಿ ಅಡ್ಡಬಿಳ್ದೆಳ್ದು ಕೈಮುಗಿಯುತಿಂತು ೧೧೦
ಬೆಸಗೊಂಡಂ–ಚಿತ್ತವಿಸ್ಸೆ ಕುಲದೀಪಕರೊಡೆಯ! ಆಂ ಬೇಡ
ರಾಣ್ಮಂ. ಇದೆ ಪೊಂಬೆಟ್ಟದ ಬೆಂಗಡೆಯೊಳಿರ್ಪುದೆಮ್ಮಯ
ಬೀಡು. ಸುತ್ತಮುತ್ತಣ ಸೊಬಗುಗುವ ಗದ್ದೆತೋಟಂಗಳಿಂದಾವು
ನಿಚ್ಚಂ ಸೊಗದೊಳ್ ಬಾಳುತಿರ್ಪೆವಂದಿಂದಿಗುಂ, ನಿಮ್ಮಾಶ್ರಯ
ದೊಳ್. ಈಗಳ್ ಏವೇಳ್ವೆಂ? ಜೀಯ! ಈವೊಂದು ದಿನಗಳೊಳ್
ಪೇರಾನೆವಿಂಡು ನಿಚ್ಚಂ ವಿಂಧ್ಯಾರಣ್ಯದಿಂದೈತಂದು ಗದ್ದೆ
ತೋಟಂಗಳ್ಗೆ ನುಗ್ಗಿ ತತ್ತಳ ತುಳಿದು ಮುಂಬೆಳಸಿನ ಬಿರ್ದುಂಡು
ತೋಂಟ ಗದ್ದೆಗಳೆಲ್ಲಮಂ ಪಾಳ್ಗೆಡಿಸುತಿರ್ಕುಂ. ಆನಿದಂ ಒಡೆಯ
ರ್ಗ್ಗೊರೆದು ನೆರಮಂ ಬೇಡಲೆಂದೆಯ್ತಂದೆನಿಲ್ಲಿಗೆ. ಆದೊಡೇಂ
ಆಸ್ಥಾನದೊಳಾವ ಒಡೆಯರಂ ಕಂಡೆನಿಲ್ಲಂ. ಆವ ಕಜ್ಜ ೧೨೦
ದುಜ್ಜಗಮಂ ಕೈಕೊಂಡು ಪೊರಗೆಯ್ದಿದರೊ ಕಾಣೆಂ. ಈಗೇಂ
ಗೆಯ್ಯಲ್ಬಾರದಾಂ ಪಿಂಗಿರುಗಿ ಪೋಪುದೆ ಲೇಸೆಂಬೆಂ.

ಇಂತಿಂತು ಅತಿ ಸಂಕಟದಿಂ ಬೆಸಗೊಂಡ ಕರ್ವೇಡನ ಘೋರ
ವೃತ್ತಾಂತಮಂ ಕೇಳ್ದು ಅಭಿಮನ್ಯು ಕಟ್ಟಚ್ಚರಿಯಂಬಟ್ಟವ

ರೊಂದು ಮಾಳ್ಕೆಯಿಂ ನೆಟ್ಟ ನಿಡುಗಣ್ಣ ನೋಟದ ದಿಟ್ಟಿಯಂ
ಕೀಲಿಸದೆ ಸಲ್ಗೆಯಿಂ ಬಿತ್ತರಿಸಿದಂ–ಮಾಣ್, ಮಾಣ್ ! ಅವಸರಿಸ
ದಿರಿಂತು ಬೇಡರಾಣ್ಮ. ನಿನ್ನೊಡಾನೀಗಳೆ ನಿನ್ನ ವೀಡಿಂಗೆ
ಬಂದಪೆಂ. ಎನ್ನಂ ಕಿರಿಯನೆಂದುಂ ಪಸುಳೆಗುವರನೆಂದುಂ ಬಗೆದು
ಚಿಂತಿಸದಿರ್. ಎನಿತೆನಿತು ಪೇರಾನೆಗಳಿರ್ದೊಡಂ ಬೆದರದೆ
ಬೆರ್ಚದೆ ಕೂರ್ಬಾಣಗಳಂ ತೊಟ್ಟು ಜವಹುರವಂ ೧೩೦
ಮುಟ್ಟಯಿಸುವೆಂ. ನಿನ್ನಾವಾಸದತ್ತಲ್ ಬಟ್ಟೆದೋರ್ಪೈ. ಏಗಳುಂ
ಮಾರ್ದೈವದೊಂದು ನೆರವಿರ್ಕುಂದೆಂಬುದಂ ಮರೆಯದಿರ್.

ಮಿಕ್ಕಿನ ಅಣುಗರ್ ಗೆಣೆಯನ ಧೈರ್ಯಸ್ಥೈರ್ಯವುಂ
ಕಂಡಚ್ಚರಿವಟ್ಟು–ಇದೇನ್ಸೈ, ಇಂತೊಂದು ಸಾಸವುಂ ಆಟಂಗುಳಿ
ಯೆನೆ ಕೈಕೊಂಡೆ ? ಇದು ಬರಿಯ ಪುಡುಗು ಕಾಣ್ !

ಅದರ್ಕಾ ಕರ್ವೇಡಂ ನಲ್ನುಡಿಸಿದಂ–ಅಯ್ಯ, ಮಹರಾಯ !
ಪಿರಿಯರ್ಕಳಿಲ್ಲದ ಪೊಳ್ತಿನೊಳ್ ಪಸುಳೆ ನಿನ್ನಂ ಪೇರಾನೆವಿಂಡಿನ
ಬೇಂಟೆಗೆಂದು ಪೇಳದೆ ಕೇಳದೆ ಪಕ್ಕಣಕ್ಕೊಯ್ದುಡಾನು ಪಿರಿಯ
ರ್ಕಳಿಗೇನಲಕ್ಕುಂ ? ಅಹಃ, ಕಂದರ ಕಂದ ! ಬೀರರ ಬೀರ !
ಇಂತೊಂದವಸರದಿಂದೇನಕ್ಕುಂ ? ಮಾಣ್, ಪೇರಾನೆಗಳಂ ೧೪೦
ಎದುರ್ಚಲ್ ನೆರವಿಲ್ಲದೆ ಪೋಪುದುಂಟೆ ? ಇದಂ ಪುರ್ಚು ಕಣಾ !

ಅಭಿಮನ್ಯು ದಿಟ್ಟತನದಿಂ ವಾಚಿಸಿದಂ–ಅಹಹ, ಇಂತದಂ
ಕಂಡಳ್ಕುವರೇಂ ? ಈ ಹಾಡಹಗಲ್ ಸೊರ್ಕಿಸಿಂ ತೋಟವುಂ
ಪೊಕ್ಕು ಪಾಳ್ಗೆಯ್ವುದಂ ನೋಡುತ್ತಿರಲಕ್ಕುಮೆ ? ಇಂತೊಂದು
ಪಾಳ್ಕೆಡಿಕುತನವುಂ ಸದೆಬಡಿಯದಿರ್ದೊಡೆಂತು ಬಾಳ್ಗಂ ?

ಆ ಮಾತಿಂಗೆ ಕರ್ವೇಡಂ ಕೈಮುಗಿದು–ಜೀಯ, ಮಾನಿಸ್ಸೆ !
ಎನ್ನೊಂದು ಬಿನ್ನಪವುಂ. ನಿನ್ನಂತಪ್ಪ ಪಸುಳೆಯುಂ ಎಂತು ಕರೆ
ದುಯ್ವೆಂ ಪೇರಾನೆಯ ಬೇಂಟೆಗೆ ? ಆನೊಲ್ಲೆನಿದಂ ಮನ್ನಿಸಿಂ.

ಬಟ್ಟವೊಗದೊಳ್ ನೆಟ್ಟ ನಿಟ್ಟಾಲಿಗಳಂ ಚಲಿಸದೆ ದಟ್ಟಡಿಗಳಂ ಕೀಲಿಸದೆ ಪಡಿನುಡಿದಂ ಅಭಿಮನ್ಯು-ಪಸುಳೆಯೆಂದು ಕಡೆಗಣ್ಚಾದಿರೆನ್ನಂ ಬೇಡರೊಡೆಯ. ಎನ್ನ ಭುಜಬಲಂ ಆವ ಪಿರಿಯರ್ಗಳ್ಗೆ ಕಮ್ಮಿಯಿರ್ಕುಂ ? ನೀಂ ಬೆದರದಿರ್, ಬೇಂಟೆಯುಜ್ಜುಗದ ಬೆಸನಂ ಎನಗಕ್ಕುಂ. ೧೫೦

ಕರ್ವೇಡಂ ಮುಂಬಟ್ಟೆದೋರದೆ ಚಿಂತೆವೆತ್ತವೊಲ್ ಬಿತ್ತರಿಸಿದಂ–ಎಳಯರೊಡೆಯ ! ಎನ್ನಂ ಸಂಕಟದ ಕರ್ಮಡುವಿಂಗೆ ತಳ್ಳದಿರ್. ಈಗಳಾನೆಂತು ನಿನ್ನಂ ಕರೆದೊಯ್ವೆನೈ ? ಮುಂದೆಂದಾದೊಡಂ ಇಂತೆ ಬಂದೊರೆದಪೆಂ ; ಅನ್ನೆಗಂ ಸೈರಿಸು.

ಅಭಿಮನ್ಯು – ಅಹಹ ! ಏಂ ಮಾತೋ ? ನಿನ್ನೊಳ್ ಇಂತಿದೇಂ ಅಳ್ಕು ? ಆನಲ್ತೆ ಈವೊಂದು ಬೇಂಟೆಯುಜ್ಜುಗದ ಧ್ವಯರ್ುಂ ? ಆದರಿಂದೇನಾದೊಡದೆನಗಕ್ಕುಂ. ೧೬೦

ಆಗಳಾ ಗೆಣೆಯರ್– ಅಭಿಮನ್ಯು ! ಈಗಳೇಕಿಂತು ಅವಸರಂ ? ನೀಂ ಮಿಣ್ಣನಿರ್. ಇನ್ನೆಂದಾದೊಡಂ ಪೋಗಲಕ್ಕುಂ, ಎಂದಾಡಿದರ್ ಬೆದರಿ ಕಂಗಾಲಾದವೊಲ್.

ಕರ್ವೇಡಂ ಮೊಗದೊಳ್ ಕಳಕಳಮುಂ ಸೂಸಿ ನುಡಿವುದುಂ– ಅಂತಲ್ತುಒಡೆಯ! ಪೇರಾನೆಗಳ ಬೇಂಟೆಯೆಂದೊಡೆ ಸಾಮಾನ್ಯಮೆ? ಆಂ ಬಿಲ್ಲಾಳ್ತನದೊಳ್ ಬಿಜ್ಜೋದರಂ. ಆದೊಡಂ ಪೇರಾನೆಗಳ ಪಿಂಡಂ ಕಂಡೊಡನೆ ಎರ್ದೆಯುಳ್ಕುಗುಂ. ನೀಂ ಪೇರಾನೆಗಳೊಡನೆ ಸೆಣಸಾಟಮಂ ಸಾಮಾನ್ಯಮೆಂದರಿತಿರ್ದೊಡದು ಅನರ್ಥಂ !

ಇಂತಿಂತು ಎಲ್ಲರದೊಂದುಪದೇಶಮನೊಪ್ಪುಗೊಂಡೊಡಂ ನಗುನಗುತೆ ನಗೆವಾತಿನ ಚಲ್ವಿನೊಂದು ಮಾಳ್ಕೆಯೊಳ್ ಪಲ್ಲಮರಿ ೧೭೦

ಯಂತೆ ತೋರೆವರ್ಪುದುಂ. ತನ್ನ ಮುನ್ನೊಡಲೊಗೆತದ ಸುಕೃತ
ವಿಶೇಷದಿಂ ದೊರೆಕೊಂಡ ಬಿಲ್ಲೋಜೆಯಂ ತೋರಿಸಲ್ವೇಳ್ಕುಮೆಂದು
ಮನದೊಳ್ ಬಗೆದು ತನ್ನೊಂದಿರವಂ ಇಂತು ಕೇಳಿಸಿದಂ–ಲೇಸು
ಲೇಸೈ ಬೇಡ ಬಂಧು ! ನೀಂ ಬಿಲ್ಲೋಜನಿರ್ದು ಇಂತಿಲ್ಲಿಗೆಯ್ತಂದು
ನೆರಂ ಬೇಡುತಿರ್ಪುದೊಂದು ಪೊಚ್ಚಪೊಸ ಸೋಜಿಗಮಲ್ತೆ? ಅಂತು
ಮಲ್ಲದೆಯುಂ ಇಂತೇಂ ತಡೆಯೊಡ್ಡುವೆನ್ನ ಬೇಂಟೆಯುಜ್ಜುಗಕೆ
ಏನೊಂದರಿಯದ ಆವಿಲನೊಲ್ ? ಅಹಹ ! ಏಂ ಬೀರತನಮೊ ?

ಆಗಳಾ ಕರ್ವೇಡಂ ನಲ್ಮೆಯಿಂ ಕೂರ್ಮೆಯಿಂ ಭಯ
ಭಕ್ತಿಯಿಂ ಕೈ ಮುಗಿಯುತುಂ–ಕೇಳಯ್, ರಾಜಕಂಠೀರವ!
ನೀನಿಂತೊಂದು ಹಠಂಗೆಯ್ಯದೆ ಮಿಣ್ಣನಿರ್ಪುದು ಒಳ್ಳಿತೆಂಬೆ. ೧೮೦
ಪೂರ್ವಜನ್ಮದ ವಾಸನಾ ವಿಶೇಷದಿಂ ಅಪೂರ್ವ ಗಡುಸುತನಂ
ಪುಟ್ಟುಗುಂ ಬೀರರ್ಗೆ. ಅದರ ಕತಮರಿಯದೆ ಮುನ್ನುಗ್ಗಿದೊಡೆ
ಬಂಡೆಗೆ ತಲೆಯಂ ಪಾಯ್ದುವೊಲಲ್ತೆ ?

ಇಂತು ನುಡಿದ ಕರ್ವೇಡನ ಎರ್ದೆಯಳ್ಕಂ ಕಾಣುತುಂ
ಅಭಿಮನ್ಯು ಬರಿ ಮುಗುಳ ಸೊಂಪುಗುವ ಕದಪುಗಳ ಚೆಲ್ವನರಳಿಸಿ
ನಲ್ನುಡಿವೊಂದು ಪಾಂಗಿನಿಂದಿಂತು ಕೇಳಿಸಿದಂ–ತೆಗೆ ತೆಗೆ!
ಇಂತೇಕಳ್ಕು ? ಇದೋ ನೋಡೆನ್ನ ಕೂರ್ಗೊಣೆಯ ಕೋಲ್ಗಳಂ!
ಪೇರಾನೆಯ ಕುಂಭಸ್ಥಳಮಂ ಪವ್ವನೆ ಸೀಳ್ದು ಒಳಪುಗುವುದು
ಚಣದೊಳ್. ನೀಂ ನಡೆ, ಮುಂಬಟ್ಟೆವಿಡಿದು. ಅಂ ಬಂದಪೆಂ;
ಎಂದೆಂದು ಗೆಳೆಯರಂ ಪಿಂತಿರ್ಕಿ ಮುನ್ನಡೆದಂ ಕರ್ವೇಡನೊಡಂ. ೧೯೦
ಈರ್ವರುಂ ಮುಂತೆ ಮುಂತೆ ಪಯಣಂಬೋಗೆ ಬೇಂಟೆಯದೊಂದೆ
ಬೆಸನದಿಂ ಕಾಡುಮೇಡುಗಳಂ, ಅಂಜನಗಿರಿಯೆಡೆಯ ಕಂದಕಮಂ
ದಾಂಟಿ, ಕಿಬ್ಬದಿಯ ಪಳುವಿನೊಳ್ ನುಗ್ಗಿ ನೆರೆವೆಟ್ಟಿನ ಬೆಂಗಡೆಯ
ಪಕ್ಕಣದ ತಮ್ಮಾವಾಸದತ್ತಲ್ ಕರ್ವೇಡಂ ಕೈದೋರ್ದು ಕೇಳಿ
ಸಿದಂ–ಇನ್ನುಮಿನ್ನು ಪೇರಾನೆಗಳ್ ಗದ್ದೆ ತೋಂಟಗಳಂ ದಾಂಟ

ಮುಂದೈತರ್ಪುದು ದಿಟಂ. ನವಿಲ್ಮಾ ಪಕ್ಕಣದ ಕುಟಿಗಳ್ ಈಡೇಂ ಪೇರಾನೆಗಳ್ಗೆ ? ಅವು ನುಗ್ಗಿದೊಡೊರ್ವರ್ಗೆ ಅತ್ತಲಿತ್ತ ಕಿತ್ತೊಗೆವುದು ದಿಟಂ, ಎನುತಿರಲ್ಕೆ ತೋಂಟದೆಡೆಯಿಂದೆ ಬೇಡರ್ ಬೊಬ್ಬಿರಿಸಿದ ಮನದಿಂ ಬೆದರಿ ಗಾರ್ಬುಸಿ ದಿಕ್ಕೆಟ್ಟವೊಲ್ ಓಡೋಡಿ ಬರ್ಪುದಂ ಕಂಡು–ಏಂ ಏಂ ಗಾವರಂ ಎನಲ್ಕೆ ಬೇಡರುಂ ಏದುಸಿರಂ ಬಿಡುತ್ತೆ ೨೦೦ ಅಯ್ಯ, ತೋಂಟದೆಡೆಯ ಕರ್ವೆಟ್ಟನಿಂ ಪೇರಾನೆಗಳ್ ಇಳಿತರ್ಪುವುಂ!

ಅಭಿಮನ್ಯು ಅತ್ತಲ್ ಕಣ್ಣೊಳ್ ಕಣ್ಣಿಟ್ಟು ನೋಡುತುಂ–ನಾವೀಗಳ್ ಅತ್ತಳೆ ಪೋಪುದೊಳ್ಳಿತಲ್ತೆ ?

ಕರ್ವೇಡಂ ಭಯದಿಂ ನಡುಗುತುಂ–ಜೀಯಾ, ಈ ಪೊಳ್ತೊಳೆಮ್ಮ ನುಡಿಯುಂ ಮಾನಿಸದಿರ್ದೊಡೆ ನಾಮುಂ ಜವಹುರದ ಪುಳುಗಳಪ್ಪುದು ದಿಟಂ !

ಅಭಿಮನ್ಯು ಕರ್ವೆಟ್ಟನೆಡೆಗೆ ನೆಟ್ಟ ಕಣ್ಣಾಲಿಯಂ ಕೀಲಿಸದೆ–ಈವೊಂದು ಕಟ್ಟಚ್ಚರಿಯ ಗಾವರಮಂ ಇನ್ನೆಬರವೆಲ್ಲಿಯುಂ ಕಂಡೆನಿಲ್ಲಂ. ಆಂ ಮುಂಗಡೆಯೊಳಿರೆ ನಿನಗೇತರ ಭಯಂ ? ಅದೋ, ಆ ಪೆರ್ಬಂಡೆಯನೇರ್ದು ನಿಂದೊಡೆ ಆನೆಗಳೆಂತಲ್ಲಿಗೆ ಬರ್ಕುಂ ? ೨೧೦ ಮಿಣ್ಣನೆ ಬಾರೆನ್ನೊಡಂ. ಬೆದರದಿರ್ ಬೆಚ್ಚದಿರ್. ನೀನೆನ್ನ ಬಳಿಯೊಳಿರ್ದು ಬಿಲ್ ಬಿಜ್ಜೆಯಂ ನೋನೋಡಿ ಕಲ್ತು ಬೀರ ಬಿಲ್ಲೋಜನಾಗೈ !

ಕರ್ವೇಡಂ ಆ ಪೆರ್ಬಂಡೆಯ ಗಾತ್ರಮಂ ಎತ್ತರಮಂ ನೋಡುತುಂ ಅದನೇರ್ದೊಡೆ ಆನೆಗಳಿಂದಪಾಯಮಿಲ್ಲಮೆಂಬುದಂ ಅರಿತು ಕೇಳಿದನಿಂತು–ಅಯ್ಯುತ್ತ, ಎನ್ನೊಡೆಯ ! ಆ ಪೆರ್ಬಂಡೆಯನೇರ್ದೊಡೆ ಸುರಕ್ಷಿತಂ ದಿಟಂ. ಆದೊಡೆ ಅಲ್ಲಿಂದೆಂತು ಆನೆಯ ಬೇಂಟೆ ? ಆನಿತೊಂದು ದೂರಮಂ ಮುಟ್ಟಲಕ್ಕುಮೆ ನಿನ್ನ ಕೋಲ್ಗಳ್ ?

ಈ ಮಾತಿಂಗೆ ನಗುನಗುತುಂ ಬಿಲ್ಲಂ ಬಿಗಿವಿಡಿದು ನೋಡು ೨೨೦
ತಿರು ಎನುತಂ ಕರ್ವೇಡನೊಡನೆ ಪೆರ್ಬಂಡೆಯ ಕೋಳ್ಗಲ್ಲ ತುತ್ತ
ತುದಿಯನೇರ್ದು ನೆಲೆನಿಲ್ವನಿತರೊಳ್ ಪೇರಾನೆಗಳದಂಡು ಸಾಲ್ಗಟ್ಟಿ
ಇಳಿತಂದುದು ಕರ್ವೆಟ್ಟಿನೆಡೆಯಿಂ. ನೋಡೆ, ನೋಡೆ ಪೇರಾನೆಯುಂ
ನಲ್ವೆಂಡಿರಂ ಮೇಣ್ ಕಡುಚಲ್ವಿನ ಚಿಣ್ಣಮರಿಗಳಂ ಕೂಡಿ
ನಡೆತಂದುದು ಸಗ್ಗದೈರಾವತಂ ಧರೆಗಿಳಿತಂದವೊಲ್! ಆಗಳಾ
ಅಭಿಮನ್ಯು ನೂರು ಕೂರ್ಬಾಣಂಗಳನೊಟ್ಟಿಗೆ ಬಿಲ್ಲಕೊಪ್ಪಿಂಗಳ
ವಡಿಸಿ ಆಕರ್ಣಾಂತಂ ಸೆಳೆದುವಿಡಲ್ ಸರಳ್ ರೊಯ್ಯನೆ ಪಾರ್ದು
ಪೇರಾನೆಯ ಕುಂಭಸ್ಥಳವಂ ಬೊಕ್ಕು ಗಾರುಗಿಡಿಸಲದು
ಘೀಳಿಟ್ಟು ಕಡುರೋಷದಿಂ ಮೇಲ್ವಾಯ್ದು ಬಂದು ಬಂಡೆಯಂ
ಅಪ್ಪಳಿಸಿ, ಸೊಂಡಿಲಂ ಚಾಚಿ ದಕ್ಕದಿರಲ್ ಎದುರಾಳಿ, ಮತ್ತೆ ೨೩೦
ಘೀಳಿಡುತುಂ ಕೆಚ್ಚಿನಿಂ ಕಿಚ್ಚಿನಿಂ ಗಂಡಗರ್ವದಿಂ ಬಂಡೆಯುಂ
ಪಾಯ್ದು ನೋವುಂಡು ತಾಳಲಾರದೆ ಪಿಂದಿರುಗುವ ಬಟ್ಟೆಯೊಳ್
ಸರಳ್ ಸೋನೆಗೆ ಸಿಲ್ಕಿ ಕೆನ್ನೆತ್ತರಂ ಕಾರ್ದು ಧರೆಗುರುಳ್ದುದು
ಕರ್ಬಂಡೆಯುರುಳ್ದವೊಲ್! ಮತ್ತದರವಳಗಂ ಬೆದರಿ ಗಾರೆಳ್ದು ದಿಕ್ಕು
ಗೆಟ್ಟು ಓಡಿ ವನಾಂತರಮಂ ಬೊಕ್ಕುದು ದಿಟ್ಟಿಗೆ ನಿಲುಕದವೊಲ್!

ಕರ್ವೇಡಂ ನೋಡುನೋಡುತುಂ ಎರ್ದೆಯೊಳ್ ಆನಂದ
ದಾಗರಮಂ ತುಂಬಿ ಮೇರೆ ಮೀರ್ದೊಂದು ಪುರುಡಿನಿಂ ಪಾರ್ಥನ
ಮುದ್ದು ಕುವರನಂ ಪಾಡಿಕೊಂಡಾಡಿ ಪೊಗಳ್ದು ಕೈಮುಗಿದು
ವಂದಿಸುತ–ಜೀಯ! ಇಂತುಮಿಂತು ಸುಲಭದೊಳ್ ಪೇರಾನೆಯಂ
ಬೇಂಟೆಯಾಡಬಪ್ಪುದೆಂದಾಂ ಮನದೊಳೆಂದುಂ ಬಗೆದೆನಿಲ್ಲಂ. ೨೪೦
ಇಂತೊಂದು ಯಮಗಂಡದಿಂದೆಮ್ಮಂ ಪಾರುಗೈದುಪಕರಿಸಿದುದು
ಸಾಮಾನ್ಯಮಲ್ತು. ಇದಂ ಕಲಿಪಾರ್ಥನೋರ್ವಂ ಬಗೆಹರಿಸಬಲ್ಲ
ನೆಂದಾನಲ್ಲಿಗೆಯ್ತಂದೆಂ. ನಿನ್ನಂತಪ್ಪ ಎಳೆಗುವರಂ ಪಾರುಗೈದಪ
ನೆಂದು ಬಗೆವರಾರ್ ಪೇಳ್? ಈ ಇಳೆಯೊಳದು ಕಟ್ಟಚ್ಚರಿಯ

ಬಿಲ್‌ವಿಜ್ಜೆ....ಕಣಾ ! ನಿನಗೆ ಒಳಿತಕ್ಕೆ ! ಎಂದುವೆಂದು ಬಗೆ ಬಗೆಯೊಳ್ ನುಡಿಸಿ ನಾಲಗೆಯಂ ತಣಿಸಿ ಕರ್ವೇಡಂ ಮತ್ತಂ- ಕೇಳ್ ಒಡೆಯ ! ಈಗಳ್ ನಿನ್ನಂ ಅರಮನೆಯಂ ಮುಟ್ಟಿಸುವ ಮುನ್ನಂ ಎಮ್ಮಯ ಬಳಗಮಂ ಕಂಡು ಪಾಲ್‌ಪಣ್ಗಳನುಂಡು ಪೋಗುವಂತು ಕೃಪೆದೋರವೇಳ್ಕುಮೆಂದು ಬಿನ್ನಯಿಸಿ ಅಭಿಮನ್ಯು ವಿನೊಡಂ ಕರ್ವೇಡಂ ಕರ್ಬಂಡೆಯಿಂದಿಳಿತಂದಂ. ಆಗಳ್, ಬೇಡರ ವಳಗಂ ಸುತ್ತಮುತ್ತಣಿಂ ಕೂಡಿ ಕೋಂಟೆಗಟ್ಟಿ ಕೈಮುಗಿದು ಕಾಲ್ವಿಡಿದು ನಲ್ನುಡಿದು ಒಡೆಯಂಗೆ ಪಾಲ್ಪಣ್ಗಳನಿತ್ತುಪಚರಿಸು ತಿರಲ್, ಪಕ್ಕಣದಿಂ ಅಂಗನೆಯರ್ ಮೇಣ್ ಮಕ್ಕಳ್ ಸಾಲ್ಗಟ್ಟಿ ಬಂದು ಸೂಳಯಿಸೆ ನಲ್ಮಾತಿನ ಗೊಂದಣದ ಗಜಬಜಂ ಒಗ್ಗೂ ಡಿದುದಾ ಗಳಿಗೆಯೊಳ್. ಪೊಸ ಜೋದನಂ ನಿಟ್ಟಿಸಿನೋಳ್ಪ ಸೇವಿಪ ಭಾವಿಪ ಕೈಮುಗಿದು ಕಣ್ಮುಗಿದು ಓಲೈಪ ಬೇಡರ ಸಂಗರಮಂ ಕಣ್ತುಂಬ ಕಂಡು ಸಂತಸಂಬಟ್ಟ ಪಾರ್ಥನ ಪಸುಳೆಗುವರಂ ಮೊಗದೊಳ್ ಎಳನಗೆ ಮುಗುಳಂ ಸೂಸಿ ಮುಂಬರಿಯಲೊಡಂ ಮುತ್ತೈದೆಯರ್ ಪೊತ್ತುರಿವ ನೀರಾಂಜನಂಗಳಂ ತಂದು ಮಂಗ ಳಾರತಿಯಂ ಬೆಳಂಗಿದರ್. ಅಣುಗರ್ ಶಂಖಮನೆತ್ತಿ ಬಾಯೊ ಳಟ್ಟು ಭೂಂ ಭೂಂ ಭೂಂ ಎಂದೂದಿ ಧಳಧಳಧಳಧಳವೆಂದು ಭೇರಿಯಂ ಬಾರಿಸಿ ತುತ್ತುತ್ತುರೆಂದು ತುತ್ತೂರಿಯಂ ಮೊಳಗಿಸಿ ಸಂತಸದ ಬಲ್ಲುಲಿಯೊಳ್ ಮಾಪೂಜೆಯಂ ಸಲ್ಲಿಸಿದರ್ ಸಗ್ಗದ ದೇವರ್ಕಳಿಗಿತ್ತವೊಲ್ ಅಭಿಮನ್ಯುವಿಂಗೆ.

ಅಭಿಮನ್ಯು ಎಲ್ಲರಿಂ ನಲ್ಮೆಯಿಂ ಬೀಳ್ಕೊಂಡು ಅಲ್ಲಿಂದಂ ತಳರ್ದು, ತನ್ನೊಂದು ಮೊತ್ತಮೊದಲ ಪ್ರಯತ್ನದೊಳೆ ಕೈಸಂದ ಗೆಯ್ಮೆಗೆ ಬೀಗದೆ ತನ್ನೆಲ್ಲ ದಮ್ಮಕಮ್ಮದ ಪೊಣೆ ತಮ್ಮಡಿಯೊಳೆಂದು

ಮನದೊಳ್ ಮಾದೇವನಂ ಸ್ಮರಿಸಿ ಕರ್ವೇಡನೊಡನೈತಂದನರ
ಮನೆಯ ಪ್ರಾಂಗಣಕೆ.

ಅನ್ನೆಬರಂ ಕಾದಿರ್ದ ಅಣುಗರ್–ಏನೈ, ಅಭಿಮನ್ಯು ? ೨೭೦
ಬೇಂಟೆಯ ಪಾಡೇನಾಯ್ತು? ಪೇರಾನೆಗಳ್ ಬಂದುವೊ? ಸಗ್ಗಕೆ
ಸಂದುವೊ ? ಬೆದರಿ ಗಾರ್ಬೈಸಿ ತಮ್ಮಾಮಾಸದತ್ತಲ್ ಸಾರ್ದುವೊ?
ಏಂ ಸಮಾಚಾರಂ ? ಏಂಗೆಯ್ದೆ ಪೇಳ್ ? ಪೇರಾನೆಯಂ ಪೊತ್ತು
ತಂದಿರ್ದೊಡಿಲ್ಲಿಗೆ ನಾಮೆಲ್ಲರುಂ ಕಣ್ತುಂಬ ನೋಡುತಿರ್ದೆವಲ್ತೆ ?
ಎಂದು ಹೀಯಾಳಿಸಿದರ್ ಪರಿಹಾಸ್ಯದಿಂ ವೈವೆರ್ಚೆ. ಆಗಳಾ
ಕರ್ವೇಡಂ ಮುಂಬರಿದು ಸಂತಸದಿಂ ವೈಯುರ್ಬೆ–ಜೀಯಾ !
ಇಂತೇಂ ಪರಿಹಾಸ್ಯಂ ? ಎನ್ನೊಡೆಯರ್ ಏಂ ಸಾಮಾನ್ಯರೇಂ ?
ದೇವರ್ಕಳಂತೆ ಲೋಕೋತ್ತರಂ ! ಮಹಾ ಬಿಜ್ಜೋದರಂ ! ಆನೆ
ವಿಂಡು ಗದ್ದೆ ತೋಟಗಳೆಡೆಗೈತಂದೊಡನೆಯೆ ಬೆದರದೆ ಬಾಣಂಗಳ
ಸೊಳ್ಸರಿಯಂ ಕರೆದು ಪೇರಾನೆಯಂ ಕೊಂದು ಮಿಕ್ಕಿನಾನೆಗಳಂ ೨೭೦
ಪಿಂತಿಕ್ಕಿ ಘೋರಾರಣ್ಯಕಟ್ಟಿ ಬಂದಿರ್ಪರ್ ! ಅಹಹ ? ಇಂತಿದು
ನಿಮಗಕ್ಕುಮೆ ? ನಮ್ಮೊಡೆಯ ಧೀರರೊಳ್ ಧೀರಂ ! ಶೂರರೊಳ್
ಶೂರಂ ! ಎಂದೆನಲ್ಕೆ ಎಲ್ಲ ಚಿಣ್ಣರುಂ ಬೆಕ್ಕಸ ಬೆರಗುವಟ್ಟು
ಕಣ್ಣರಳ್ಚಿನೋಡುತುಂ–ಅಹ, ಇದೇಂ ಜೊಳ್ಳಿನ ಕಂತೆಯೊ ?
ಪರಿಹಾಸ್ಯದ ಪುರುಡೊ ? ಏಂ ಸಮಾಚಾರಂ ? ಎಂದುಮೆಂದು
ಮತ್ತೆ ಮತ್ತೆ ಕೇಳಿದರ್ ಕಿರುವಾಯ್ ತೆರೆದು.

ಕರ್ವೇಡಂ ಎಂಟೆರ್ದೆ ಬೀರನೊಲ್ ವೈವೆರ್ಚೆ ಬಿತ್ತರಸಿದಂ–
ಎಲೆಲೆ ! ಚಿಣ್ಣರಪ್ಪ ಕಂದಮ್ಮಗಳಿರಾ ! ಎನ್ನಾಣೆ, ದೇವರ್ಕಳಾಣೆ
ಇದು ಜೊಳ್ಳಿನ ಕುತೆಯಲ್ತು, ಪರಿಹಾಸ್ಯದ ಪುರುಡಲ್ತು ;
ಬಿಲ್‌ಬಿಜ್ಜೆಯ ಪರೀಕ್ಷಣಂ ! ಒಡೆಯರ ಬಿಲ್‌ಬಿಜ್ಜೆ ಗೆಲ್ಲಿಯು ೨೯೦
ಸಾಟಿಯಿಲ್ಲಮೆನೆ ದಿಟಂ. ಆ ಮಾತಂ ಕೇಳ್ದು ಎಲ್ಲರುಂ ಸಡಗರದಿಂ
ಚಪ್ಪಳೆಯಿಕ್ಕಿ ಕುಣಿಕುಣಿದಾಡಿದರ್, ಸಂಭ್ರಮವುಕ್ಕೆ. ಪಾರ್ವ

ಗುವರನಪ್ಪ ಕೃಪಾಳು ಎಂಬೊರ್ವ ಅಣುಗಂ ಮೊಗದೊಳ್
ಬೆಳ್ನಗೆಯಿಂಬರಿಸಿ ಲೇಸು ಲೇಸೈ ಅಭಿಮನ್ಯು! ಇಂತಪ್ಪ
ಬಿಜ್ಜೆಯಂ ಪಿರಿಯರ ತೋಳ್ವಲದಿಂ ಸಂದು ಮೇಣ್ ಜನ್ಮಾಂತರ
ಯೋಗದಿಂ ಕೂಡಿ ಬೆಳ್ಜಸಮಂ ಪಡೆವುದೊಂದಧಿಕ ಪುಣ್ಯಂ.
ಮುನ್ನಂ ಒರ್ದುಡಿಯಿರ್ದುದೀಗಳ್ ಇರ್ಮಡಿಯಾಗಿರ್ಕುಂ.
ಈಗಳ್ ನೀನತಿ ವೀರನೆಂಬುದು ಶತಸಿದ್ಧಂ. ನಾಮೆಲ್ಲರುಂ ಒಕ್ಕೂಡಿ
ನಿನ್ನೊಡನೆ ಕಲ್ತು ಬಲಿಯಲಕ್ಕುಮೆಂದು ಎನ್ನಾಸೆಯಿರ್ಕುಂ.

ಆಗಳಿನ್ನೊರ್ವಂ–ಎಲೆ ಪಾರ್ವ, ಇಂದೇಂ ಇನಿತೊಂದು ೩೦೦
ಬಲ್ಪಿನ ಬೀರತನಂ ? ಬಿಲ್‌ಬಿಜ್ಜೆಯಂ ಕಲ್ತು ಬಲ್ತು ಜುದ್ದಗೈ
ವಂತೆಯುಂ ನುಡಿವೆಯೈ ? ಇದೇಂ ಆಟಮೊ ? ಮಾಟಮೊ ?
ಮೇಣುಂ ಆವುದೆಂಬುದಂ ಕಾಣೆನಾಂ.

ಆವೊಂದು ಮಾತಿನ ಮಾಳ್ಕೆಯಿಂ ಪುರುಡುಮೆತ್ತ ಬಾಲಕ
ದಳಂ ಕೋಗಿಲೆಯಂತೆ ಕೂಯಿಟ್ಟು ಕುಕಿಲ್ವ ದನಿಯೊಳ್ ನಕ್ಕು
ನಲಿದು ಮತ್ತಂಮತ್ತಂ ಪರಿಹಾಸಗೆಯ್ಯುತುಂ ಕುಣಿದಾಡುತ್ತಿರಲ್
ಪಾರ್ವಂ ತನ್ನಂ ತಾನೆ ಬೋಳೈಸುವಂತೆಯುಂ ಸೆಟೆದು ನಿಂತು
ದಿಟ್ಟತನದಿಂ–ಪೋಪೋಗಿರೆ! ಮಾತು ಮಾತೊಳ್ ಪರಿಹಾಸಂ!
ದ್ರೋಣಾಚಾರ್ಯಂ ಪಾರ್ವನಲ್ತೆ? ಪಾರ್ವರೊಳ್ ಕಲಿತುನುರಿತು
ಬಿಜ್ಜೆಯಂ ಕೈಗೂಡಿಸಿ ಮತ್ತೇಂ ಪಾರ್ವರಂ ತೆಗಳುವ ಮಾಳ್ಕೆಯೊ? ೩೧೦
ಅಹಹ, ಪಾರ್ವರಿಂದಲ್ತೆ ಸಗ್ಗಕೆ ದಾರಿ ಲೋಕದ ಲೋಗರ್ಗೆ ?

ಘಟೋತ್ಕಜಂ ಎರ್ದೆಯುಬ್ಬೆ ಎದುರ್ವೆತ್ತು–ಕೇಳ್
ಕೃಪಾಳು! ಜೀವನೋಚಿತಮಾದ ಪಲವು ಬಿಜ್ಜೆಗಳ್ ಅಗತ್ಯ
ಮಿರ್ಪುದೆಲ್ಲರ್ಗೆ. ಪಾರ್ವರೊಳ್ ದ್ರೋಣಾಚಾರ್ಯನಂತಪ್ಪ
ಧೀಮಂತರ್ ಧೀರ ಜೋದರ್ ಅರೆಯೊಳ್ ಅಪೂರ್ವಂ. ನೀನವ
ರಂತೊಪ್ಪೊಡೆ ಭಲೆ ಎನವೇಳ್ಕುಂ!

ಕೃಪಾಳು ಮನವೆರ್ಚೆ ಮೈವೆರ್ಚೆ ಇರ್ಮಡಿ ಪುರುಪಿನಿಂ–
ಅಯ್ಯಾ, ಘಟೋತ್ಕಚ! ಅಕ್ಕೆ, ಎಂದಾದೊಡಂ ಆನಿದರೊಳ್
ಸಲ್ವೆಂ ಎಂದೊಡಂ ಅಂತಪ್ಪ ಜಾಣಂಬರಲ್ಕೆ ಎನಿತೊಂದು
ದೇವರ್ಕಳ ಕೃಪೆವೇಳ್ಕುಮೊ! ಈಗಳ್ ಪ್ರಯತ್ನಿಪೆಂ ಎಂಬು ೩೨೦
ದೊರ್ ಮಾತು ಉಚಿತಂ.

ಅದರ್ಕೆ ಅಭಿಮನ್ಯು ಹರಿಸದಿಂ–ಇಂತು 'ಅಕ್ಕೆ–ಸಲ್ವೆಂ'
ಎಂಬನಿತರೊಳೆ ಮುಗಿಸಿದೊಡೆ ನಾವೆಂತು ನಿನ್ನ ಬಿಲ್ಲಾಳ್ತನಮಂ
ನೋಡಿ ನಿರ್ಣಯಿಪುದು ?

ಕೃಪಾಳು ಪೆರ್ಮೆಯಿಂ ಬಣ್ಣವೆರ್ಚೆ ರಂಗುರಂಗಿನ ಮಾಣಿಕ
ಮೆಂಬಂತೆ ಪೊನ್ನಗೆಯಂಬರಿಸಿ–ಅಕ್ಕೆ, ಅಕ್ಕೆ, ಈಗಳೆಂತೇಂ
ಅವಸರಂ ? ಪದಂ ಬಲಿತೊಡೆಲ್ಲಂ ಕೈಗೂಡುಗುಂ. ಅಂತು
ಮಲ್ಲದೆಯುಂ ಇಂತಪ್ಪ ಬಿಲ್‌ವಿಜ್ಜೆಯ ಚಟಮೇಕ್ಕೆ? ಬೇಂಟೆಯೊ?
ಯುದ್ಧಮೊ ? ಅದಾವ ಪುರ್ಚೆನುಬ್ಬರದಬ್ಬರಂ ನಿಮ್ಮನಿಂತು
ಮುಂದೂಡುತಿರ್ಕುಂ ? ಏಂ ಕೆರ್ಚು ? ಏಂ ಪುರ್ಚು ? ಇದು ೩೩೦
ಚೆಣ್ಣಗಲ್ತು.

ಆಗಳಾ ಅಭಿಮನ್ಯು ನಗುನಗುತೆ–ಇದೇಂ ಮಾತು ? ಕ್ಷಾತ್ರ
ವಂಶಿಕರ್ಗೆ ರಣವಿಜ್ಜೆಯುಂ ಜೀವನೋಚಿತಮಲ್ತೆ ? ಅದು
ಮಾತ್ರಮೇಂ ? ರಣವಿಜ್ಜೆ ಎಲ್ಲರ್ಗಕ್ಕುಂ ಈ ಕಾಲದೊಳ್.

ಘಟೋತ್ಕಚಂ ಮುಂಬರಿದು–ಅಭಿಮನ್ಯು ! ಎಲ್ಲರುಂ
ಮೆಚ್ಚಿರ್ಪರ್ ನಿನ್ನ ಸಾಸದಿರವಂ. ಈಗಳ್ ನಿನ್ನ ಕರಕುಶಲಮಂ
ಎಲ್ಲರ್ಗಂ ತೋರ್ಪೆ.

ಅಭಿಮನ್ಯು–ಆಯ್ತಾಯ್ತು. ಆನಿನ್ನೆಬರಂ ಕಲ್ತು ಕೈಗೂಡಿಸಿ
ಕೊಂಡಿರ್ಪುದೇನೆಂಬುದಂ ತೋರ್ಪೆನೀಗಳ್ ಎಲ್ಲರ್ ಪಿಂಜರಿದು
ನಿಲ್ಲಿಂ ! ೩೪೦

ಆ ಮಾತಿಗೆಲ್ಲರುಂ ಪಿಂಜರಿದು ಕುಡಿನೋಟವಂ ನೆಟ್ಟು ನಿಂದರ್. ಅಭಿಮನ್ಯು ಬಿಲ್ಲಂ ಕೈಕೊಂಡು ನಾರಿಯಂ ಸೆಳೆದೆಳೆದು ಜೇವೊಡೆಸಲ್ ಕಿವಿಯಂ ಕಿಟ್ಟಿ ಮನಮಂ ಮುಟ್ಟಿ ಎರ್ದೆಯಂ ತಟ್ಟಿ ವನವನಾಂತರದೊಳ್ ಪ್ರತಿಧ್ವನಿಸೆ ಜೇಯೆಂದುದು ಬಾಲಕ ನಿಕರಂ. ಮತ್ತಂ ಮತ್ತಂ ಬಿಲ್ಲನಾರಿಯಂ ಜೇವೊಡೆಸಿ ತಾಂ ನಿಚ್ಚಂ ಅಭ್ಯಾಸಂಗೆಯ್ವುದಂ ಮೇಣ್ ಪೇರಾನೆಯ ಸುದ್ದಿಯಂ ಮನ ಮುಟ್ಟಿ ಪೇಳುತುಂ ಬಿಲ್ಲಂ ಕೈಕೊಂಡು ಕೂರ್ಗೋಲುಗಳಂ ಬಡಿ ಗೋಲ್ಗಳಂ ಸರಳ್ಗೋಲ್ಗಳಂ ತೋರಿ ವಿವರಿಸುತುಂ ಬಿಲ್ಲಂ ಹೆದೆ ಯೇರಿಸಿ ಸರಳ್ಗೋಲ್ಗಗಳಂ ಪೂಡಿ ಆಕರ್ಣಾಂತಂ ಸೆಳೆದು ಪೆರ್ಮರನ ನೆತ್ತಿಯೊಳಿರ್ದ ಎಲೆಗೊಂಚಲ್ಗೆ ಗುರಿಯಿಟ್ಟು ಬಿಡಲೊಡಂ ಸರ್ರನೆ ಸಾರ್ದದು ಎಲೆಗೊಂಚಲಂ ಕೆಡವಿದುದು ಧರೆಗೆ ಮಾಂಗಾಯಂ ನುರುಳ್ಚುವಂತೆ. ೩೫೦

ಬಾಲಕನಿಕರಂ–ಭಲೆ ಅಭಿಮನ್ಯು ! ನಲ್ ಹೊ !

ಆಗಳ್ ಚಿಣ್ಣರ ಬಣ್ಣವೊಗದಿಂ ಪರಿದ ಸರಸದ ದನಿಯಿಂ, ಚಪ್ಪಳೆಯ ಸಬುದದಿಂ ನಗೆವಾತಿನಿಂ ತುಂಬಿ ಬಾಲಲೀಲೆಯುಂ ಪೊದಳ್ದು ಘನವೆತ್ತುದು ಕಿವಿಯಂ ಗಡಚಿಕ್ಕುವವೊಲ್. ಘಟೋತ್ಕಚಂ ಪೆರ್ಮೆಯಿಂ ನಲ್ಮೆಯಿಂ ಬೀರತನದ ಸೊಂಗಿನಿಂ ನ್ಯೈವೆಚಿ–ಭಳಿರೆ ! ಅಭಿಮನ್ಯು ! ಇನಿತರೊಳ್ ಇಂತಪ್ಪ ಬಿಲ್ ಬಿಜ್ಜೆಯುಂ ಕೈಗೂಡಿದುದು ಸಾಮಾನ್ಯಮಲ್ತು. ನೀಂ ಬೀರನೆ ವಲಂ ! ನಲ್ ಗುರಿಯಿಟ್ಟೆ. ಅಲ್ಪಕಾಲದೊಳಿಂತಪ್ಪ ಬಿಜ್ಜೆ ಯಾರ್ಜನೆ ಮೆಚ್ಚಲಕ್ಕುಂ. ಇಂತು ಮುಂದೆಯುಂ ಘನವೆತ್ತೊಡೆ ನೀಂ ಬಿಜ್ಜೆಯೊಳ್ ಬಲ್ಪಿನೊಳ್ ನಿನ್ನಯ್ಯನಂ ಮೀರಿ ನಿಲ್ವೆಯ್ ! ಗಾಂಡೀವಿ ಪೆಸರ್ಗೆ ರನ್ನಗಳಸಂ ! ೩೬೦

ಅಭಿಮನ್ಯು–ಏಂ ಇಂತಿದೊಂದು ಪೊಗಳ್ಕೆ ? ಇಂ ಕಣ್ತೆರೆದೆ ನಿಲ್ಲಂ. ಆಗಲ್ತೆ ರನ್ನಗಳಸಂ ! ಇಂತಪ್ಪ ಪೊಗಳ್ಕೆಯಿಂ ಬುದ್ಧಿ ಗೆಡುಗುಂ.

ಕೃಪಾಳು–ಅಹಹ, ಬೀರರ್ಗೆ ಇಂತಪ್ಪ ತಳ್ಳಂಕವೇಕೆ ಮನದೊಳ್ ? ಎಂತಿರ್ದೊಡಂ ನೀಂ ಬೀರನೆಮ್ಮೊಳ್ ಸಂದೆಯ ಮಣಮಿಲ್ಲಂ. ಇಂತಿರಲ್ ಪೊಗಳ್ಕೆ ಎನಲಕ್ಕುಮೆ ?

ಅಭಿಮನ್ಯು–ಆಯ್ತಾಯ್ತು. ನೀಂ ನಿಚ್ಚಂ ಪ್ರಯತ್ನಿಸಿದೊಡೆ ಬಲ್ಪಿನ ಬೀರನಪ್ಪೆ. ಇದೇಂ ಪೆರ್ಚಳಮಲ್ತು. ಕೇಳ್, ಬ್ರಹ್ಮ ಬಂಧು ! ೩೭೦

ಘಟೋತ್ಕಚಂ ಪರಿಹಾಸ್ಯಗೆಯ್ವವೊಲ್ ಪೆರ್ದನಿಯೊಳ್ ನಗು ನಗುತ್ತೆ–ಓ! ಈ ಪಾರ್ವರ ಪಾರ್ವಂ ಎಂದಾದೊಡಂ ಪ್ರಯತ್ನಿಪನೆ? ಜುದ್ದಮೆಂದೊಡೆ ಎದ್ದು ಬಿದ್ದು ಎರ್ದೆಯೊಡೆದು ತಿರೆಗೊರಗುವಂ!

ಆಗಳೆಲ್ಲರುಂ ಮೋದದಿಂ ಪರಿಹಾಸ್ಯದಿಂ ಪಾರ್ವನಿರವಂ ಕಂಡು ಕಾಣುತುಂ ಕೆಣಕಿ ತಿವಿದುಗೋಳ್ಗುಡಿಸಿ ಪಾರದಂ ಸಿದ್ಧರಸ ಮಾದೊಂದು ಪುರುಡಿಂ–ಪಾರ್ವನಾದೊಡಂ ಪೆರ್ಮೆಯೇಂ ಕಮ್ಮಿ ಇಲ್ಲೆಂದಾಡಿದರ್. ಇಂತಿದಂ ಕೇಳ್ದು ತಾಳ್ದು ಲಜ್ಜೆಯಿಂ ಕೆಂಪಡ ರ್ದ್ದೊಡಂ ಪಾರ್ವಕುಮಾರಕಂ ಜಗ್ಗದೆ ಕುಗ್ಗದೆ ಬಿಂಕದ ಬಿನ್ನಣದ ಬಡಿವಾರದ ಮಾತಿನೊಳೆಂಗುಂ–ಕಂಡಿರೇ, ನೀಮಿಂತು ಬಲ್ಗಡ ಸುಗಾರರಿರ್ದು ಅರಿಗಳ ರುಂಡ ಮುಂಡಗಳಂ ದಿಂಡುರುಳ್ಚಿ ಸೆಂಡಾಡಿ ಸಗ್ಗದರಮನೆಗೆ ಕಳಿಸಿದೊಡೆ, ನಾವ್ ಪಾರ್ವರ್ ವೇದ ವೇದಾಂತದ ಜನ್ನಗುದುರೆಯನಡರ್ದು ಕಾದಿ ಮೋದಿ ಸೋಲ್ದು ಗೆಲ್ದು ಸಕ್ಕದದ ಬೊಕ್ಕಸಮಂ ಸೂರೆಗೊಂಡು ಸಗ್ಗದಾಣ್ಮನಡಿಗೆ ಒಯ್ಯುವುದಂ ಕಂಡು ಕಾಣದವೊಲ್ ನುಡಿವುದೇಂ ಫಲಂ ? ೩೮೦

ಅಭಿಮನ್ಯು–ನೀಂ ಚೊಕ್ಕ ಪಾರ್ವನೆ ದಿಟಂ! ದಬ್ಬೆಯೊಳ್ ಕಬ್ಬಮಂ ಕಾಣ್ಬ ಕಬ್ಬಿಗರ ಸಾಸಂ ತೋಳ್ವಲಮುಳ್ಳರ್ಗಂ ಮಿಗಿಲಾರ್ದು ದೆನಲಕ್ಕುಂ. ಮುನಿಋಷಿಗಳ್ ತರುವಲಿಗಳಂ ತರುಂಬಿ ಬಿಜ್ಜೆಯ ನೊರೆದು ಇಹಪರಮಾರ್ಥಮಂ ಗೆಲ್ದೊಂದು ಗೆಲ್ಲಮೆಯೆ ಶ್ರೇಷ್ಠಂ. ೩೯೦

ತೋಳ್ವಲರ್ ಆಳ್ದೊಡಂ ತಲೆಮಣಿಯಲಕ್ಕುಂ ಬಿಜ್ಜೆಯುಳ್ಳರ್ಗೆ.

ಪಾರ್ವ ಸಂತಸಂಬಟ್ಟು–ಈಗಳ್ ನಿನ್ನೆಲ್ಲ ಬಿಲ್‌ಬಿಜ್ಜೆಯ ಪಾಂಡಿತ್ಯಮಂ ತೋರ್ದೈ ಅಭಿಮನ್ಯು! ಮತ್ತಂ ಎಂತದರ ಅಭ್ಯಾಸಂ ವಿವರಿಸಿದೊಡೆ ಒಳ್ಳಿತು.

ತರುವಾಯಿಂ ಅಭಿಮನ್ಯು ಬಿಲ್‌ಬಿಜ್ಜೆಯ ತಂತ್ರಜ್ಞಾನಮಂ ವಿವರಿಸಿ ಮನಮುಟ್ಟೆ ತಿಳಿಪುವುದುಂ. ಮತ್ತಂ ಬಗೆವಗೆಯ ಬಾಣ ಸಂಧಾನಂಗಳಂ ತೋರ್ದು ತಿಳಿಪಿ ವಿವರಿಸುತಿರೆಯಿರೆ ಎಲ್ಲರುಂ ಮಾನ ವೆರ್ಚಿ–ನೀಂ ಇಂತಪ್ಪ ಕಜ್ಜದುಜ್ಜುಗದ ಬೀರನಿರ್ದೆಮ್ಮ ಭಾಗ್ಯಮೆ ಭಾಗ್ಯಂ! ಇಂತೊಂದು ಗುರುತರ ನೆರವಿರೆ ಪೆರತಾವ ಗುರುವೇಳ್ಕುಂ? ಈ ಪರಿಯಿಂ ಗೆಯ್ಮೆಯ ನೋಂಪಿಯೆಸಕ ೪೦೦ ಮೊಡರ್ಚೆ ನಿಚ್ಚಂ ಕಲಿಕೆಯೊಳ್ ಮನವಿಟ್ಟು ಕಲ್ತು ಬಲ್ತು ಜವಂಗೆ ಜವಗಿಡಿಸಲಕ್ಕುಂ, ಎಂದಾಡಿದರ್ ನಿರಯಕ್ಕೆರವಟ್ಟಂತೆ; ಮತ್ತಂ ಗುರುಕುಲದ ಕಿರುಕುಳದರಿಕೆಯಿಲ್ಲದೆ ನಿನ್ನೊಡಂ ಕಲಿಯ ವೇಳ್ಕುಮೆಂದು ಪಡಿನುಡಿದರ್.

ಚಂದನದ್ರುಮದ ಚೆಂದಳಿರ ಪಟ್ಟವೇರ್ದ ಪಂಡಿತವಕ್ಕಿ ಯೊಂದು ಸರಾಗದಿಂದೆ ಕೊರಳ್ದನಿಯಂ ಪರಿಸುತಿರಲ್ ಅಭಿ ಮನ್ಯು–ಅಹಃ ಏಂ ಸರಾಗಂ? ಏಂ ಸರಿಸಂ ಎನಲ್ಕೆ ಆ ಪಂಡಿತ ವಕ್ಕಿ ಪಡಿನುಡಿದುದಿಂತು–ಸರಿಸಮಿಲ್ಲದೊಡೆ ಸರಾಗಂ ಕೆಡುಗುಂ!

ಆ ಮಾತಿಂಗೆ ಎಲ್ಲರುಂ ಕಟ್ಟಚ್ಚರಿಯಿಂ ನೋಡುತಿರೆಯಿರೆ ಪಂಡಿತವಕ್ಕಿ ಎರಂಕೆಯೊದರಿ–ಕಟ್ಟಣಕದ ನುಡಿಯಿಂ ಕಜ್ಜಂ ೪೧೦ ಕೆಡುಗುಂ; ಎಂದೆನಲ್ಕೆ ಎಲ್ಲರುಂ ಚಪ್ಪಳೆಯಿಕ್ಕಿ ಹೋ ಎಂದರ್ ಬಲ್ಲುಲಿಯೊಳ್.

ಅದೇ ವೇಳೆಯೊಳ್ ಪಿತ್ತಿಲೆಡೆಯಿಂದೆ ಏದುಸಿರಿಂ ಓಡಿ ಯೋಡಿ ಬಂದೊಬ್ಬ ಕಾಪಿನವನಂ ಕಂಡು ಅಚ್ಚರಿಯಿಂ ಕಣ್ಣರಳ್ಚಿ

ನೋಡುತ್ತುಂ ಅಭಿಮನ್ಯು–ಇದೇನೈ, ಇಂತು ಕಟ್ಟುಬ್ಬಸಂಬಡುತೆ
ಬರುತಿರ್ಪೆ ? ಏಂ ಬನ್ನಂ ? ಏಂ ಪ್ರಮಾದಂ ?

ಕಾಪಿನವಂ ಕಂಗೆಟ್ಟಂತೆ ಅಸವಸದಿಂ ಕೇಳಿಸಿದಂ–ಜೀಯ !
ಸೊರ್ಕಿದೆಕ್ಕಲಂಗಳ್ ಪಿತ್ತಿಲೊಳ್ ನುರ್ಗಿ ತೋಂಟವಂ ಪಾಳ್ಗೆ
ಯ್ಯುತಿರ್ಕುಂ ! ಆಸ್ಥಾನದೊಳ್ ಒಡೆಯರಾರಿಲ್ಲಂ. ಏಂಗೈವುದೊ
ಕಾಣೆಂ. ಸುದ್ದಿಯಂ ಟೆಬ್ಬುರಿಸಿದ ಮನದಿಂ ಸಾರ್ದು ಬಂದ ಒಟ್ಟೆ ೪೨೦
ಯೊಳ್ ಪಿಂತಿರುಗಲ್ಕೆ ಅಣಗರೆಲ್ಲರುಂ ಎಕ್ಕಲಂಗಳಂ ಕಾಣ್ಬೊಂದು
ಪುರ್ಚಿನಿಂ ಕಾಪಿನವನ ಬೆಂಬಿಡಿದು ಓಡುತಿರ್ದುದಂ ಕಂಡು
ಅಭಿಮನ್ಯು ಕೂಗಿ ತಡೆಯೊಡ್ಡಿ–ಇದೇಂ ಪುರ್ಚು ? ನೀವೆಲ್ಲರೇಕಿಂ
ತಲ್ಲಿಗೆ ಓಡುತಿರ್ಪಿರಿ ಸೊರ್ಕಿದೆಕ್ಕಲಂ ಕಂಡೆಡೆಯೊಳ್ ಮೇಲ್ವಾಯ್ದು
ಬರ್ಕುಂ ! ಕೈಯೊಳಾವ ಅಸ್ತ್ರಶಸ್ತ್ರಮಿಲ್ಲದಿರ್ದೊಡೆ ಅವುಗಳಿಂ
ಬಲ್ ಕೇಡಕ್ಕುಂ ! ಎಚ್ಚರೆಚ್ಚರ !

ಅಣುಗರ್–ನಾಮುಂ ದೂರಮಿರ್ದು ಕಂಡೊಡಾಯ್ತು.
ಪಿತ್ತಿಲಿಗೈತಂದುದಂ ನೋಡದಿರ್ಪುದೆಂತೈ ?

ಅಭಿಮನ್ಯು ಬಿಲ್ಲಂ ಕೈಕೊಂಡು ಮುಂದೋಡುತುಂ–ಆರುಂ
ಮುಂದರಿಯದಿರಿಂ, ಸೊರ್ಕಿದೆಕ್ಕಲಗಳಿಂ ಕೇಡಕ್ಕುಂ ! ೪೩೦

ಇಂತಾಡಿದ ಅಭಿಮನ್ಯುವಿನ ಮಾತಂ ಲೆಕ್ಕಿಸದೆ ಅವನ
ಪಿಂಬಟ್ಟೋಲಯಿಸುತ್ತೋಡಿದರ್ ಕೆಲ ಅಣುಗರ್. ಮುಂದೆಸೆ
ಯೊಳಿರ್ದ ಕಾಪಿನವಂ ದೂರದೊಳ್ ನಿಂತು ಸೂಕರವಳಗಂ
ತೋರ್ದು–ಅದೋ, ಪಿಂಡು ಪಿಂಡೈಸಿ ಬಂದಿರ್ಕುಂ ! ಆರುಂ
ಮುಂದುವರಿಯದಿರಿಂ! ನೀಂ ಅಣುಗರ್ ಅವುಗಳ್ಗೊಂದು ಲೆಕ್ಕಮೆ?
ಆಂ ಪೋಗಿ ಒಡೆಯರೆಲ್ಲಿರ್ಪರೋ ಕಂಡು ಸುದ್ದಿಯಂ ತಿಳಿಪೆಂ.

ಕಾಪಿನವಂ ಆ ಚಣದೊಳ್ ಅಲ್ಲಿಂದೋಡಿ ಮೈಗರೆದಂ.

ಎಲ್ಲರುಂ ಕಟ್ಟೆಚ್ಚರಿಬಟ್ಟು ಅರಳ್ಗಣ್ಗಳಿಂ ಪಿತ್ತಿಲೆಡೆಯ ತೋಂಟವಂ ನಿಟ್ಟಿಸಿನೋಡಲ್ ಅದೇಂ ಒಂದೇ? ಎರಡೇ? ನೂರಾರು ! ಲೆಕ್ಕವಿಲ್ಲದ ತೋರಮೆಯ್ಯ ಸೂರ್ಕಿದೆಕ್ಕಲಂಗಳುಂ ತಂತಮ್ಮ ನಲ್ವೆಂಡಿರಂ ಮಕ್ಕಳಂ ಒಳಗೂಡಿ ಅಧಿಕ ಸಂಖ್ಯೆಯಲಿ ಕೂಡಿರ್ದುವು ಕೋರೆವಲ್ಗಳ ಘೋರ ರೂಪಿಂ. ತೋಂಟದ ನಲ್ ಬೆಳಸಂ ಬಿರ್ದುಂಡು ತೇಗಿ, ಕೆಲವಂ ಅಗೆದು ಮಣ್ಣಾಡಿ ತತ್ತಳ ತುಳಿದು, ಕೆಲವಂ ಕಿತ್ತು ಅಗಿದು ಪುಡಿಪುಡಿಗೆಯ್ದು ಇಡೀ ತೋಂಟವಂ ಪಾಳ್ಗೆಡಿಸಿ ಸೊಗದಿಂ ಬೀಡು ಬಿಟ್ಟಿರ್ದುವಲ್ಲಿ! ಗುರ್ ಗುರ್ರೆಂದು ಮುಲು ಮುಲು ಓಡಾಡುತುಂ ಅಂಕೆಸಂಕೆ ಇನಿತಿಲ್ಲದೆ ಕಡೆಗಾಲದ ಕಡುಕಾಯ್ಪಿನಿಂ ಮಸಕಂಮಸುಗುತಿರ್ದುವು ಜವ ರಾಯನಿಂದೆ ಕರೆಬಂದಿರ್ಪುದೊ ಎನಲ್ಕೆ. ೪೪೦

ಅಭಿಮನ್ಯು ಅಣುಗರಂ ಪಿಂತಿರ್ಕೆ ಕಟ್ಟೆಚ್ಚರಿಯಿಂ ನೋಡುತೆ ಬಿಲ್ಲಂ ಹೆದೆಯೇರಿಸಿ ಕೂರಂಬುವ ಸೆಳೆದುವಿಡೆ ಸೂಕರವಳಗಂ ಬೆದರಿ ಗಾರೆದ್ದು ಚೀರ್ರನೆ ಚೀರಿಡುತಂ ಅತ್ತಲಿತ್ತಲ್ ಭಯದಿಂ ಗಾರುಗೆಟ್ಟು ಓಡಾಡುತಿರಲ್ ಕಾಪಿನವಂ ಪಿಂತಿರುಗಿ ಬಂದು– ಜೀಯ ! ಅರಮನೆಯೊಳ್ ಪಿರಿಯರ್ಕಳಾರಿಲ್ಲಂ. ಎಲ್ಲರುಂ ಪೊರಗೆಯ್ದುದಂ ಕಂಡೀಸೂಕರವಿಂಡು ನುರ್ಗಿದುವೊ ಕಾಣೆಂ. ಎಂತಪ್ಪ ನಲ್ದೋಟಂ ಪಾಳ್ಗೆಡಗಿರ್ಪುವು. ಅಕ್ಕಟಕ್ಕಟಾ! ಪಱುಗೇಂಗೆಯ್ಯಲಕ್ಕುಂ ? ಎನ್ನಳೊಂದು ಕಡಿಗತ್ತಿಯುಮಿಲ್ಲಂ. ೪೫೦

ಅದಕರ್ಾ ಅಭಿಮನ್ಯು ಈಗಳೆಲ್ಲವಂ ಜವಹುರವಂ ಮುಟ್ಟಿಸುವೆಂ ಎನ್ನುತ್ತಲೊಡಂ ಬಾಣ ಸಂಧಾನಗೆಯ್ಕಲ್ ಪುಂಖಾನುಪುಂಖವೆತ್ತುದಾ ಸರಳ್ಸೋನೆ !

ಕಾಪಿನವಂ–ಜೀಯಾ ! ಬೇಡುವೆಂ, ಮುಂದುವರಿಯದಿರಿಂ. ೪೬೦ ಸೊರ್ಕಿದೆಕ್ಕಲಗಳಿಂದೆ ಬಲ್ ಕೇಡಕ್ಕು !

ಅಭಿಮನ್ಯು—ನಿಲ್. ನಿಲ್. ಆನವುಗಳಂ ಕೊಂದು ಕೊಲೆಗೆ ಕೊಳಿಕ್ಕುವೆಂ! ಚಿಂತೆಯೇಕೆ? ಎಂದೆನುತುಂ ಮರಿ ಸಿಂಗನೊಂದಾಟೋಪದಿಂ ನಿಂತೆಡೆಯೊಳ್ ಸಿಡುಗೋಲ್ಗಳ ಸೋನೆಯಂ ಕರೆದು ತಲೆಯೆನ್ನದೆ ಮೈಯೆನ್ನದೆ ಘಾತಿಸಿ ಭೀತಿಸಿ ಚಿರ್ರನೆ ಚೀರಿಸಿ ಕೆನ್ನೆತ್ತರಂ ಚೆಲ್ಲಾಡಲ್ ಸೂಕರಕುಲಂ ಉರುಳ್ದುರುಳ್ದು ಪೊರಳ್ದು ಮಿಲಿಮಿಲಿ ಒದ್ದಾಡಿ ಬಾಯಾರಿ ಗಂಟಲಾರಿ ಮರಣಸಂಕಟಂ ಬಡುತ್ತಿರಲ್ ಕೆಲವು ಪೊಲಂ ಬಿಟ್ಟು, ಕೆಲವು ಜವಪುರವಂ ಮುಟ್ಟೆ, ಇನ್ನು ಕೆಲವುಂ ಬೆಕ್ಕಸಂಗೊಂಡು ದೆಸೆದೆಸೆಗೆ ಚೆದರಿದುವು ನಾಗಾಲೋಟ ದಿಂದೋಡುತುಂ. ಮಿಕ್ಕುಳಿದ ಹಲಕೆಲಂ ಕಕ್ಕಸದನಿಯೊಳೊದರಿ—ಅಯ್ಯನಾಣೆ! ಇನ್ನಿತ್ತ ಬಾರೆಂ ಎಂದೆಂಬವೊಲ್ ತಹತಹಿಸಿ ಮಾರುಗಾಲಿಟ್ಟೋಡುತಿರ್ದೊಡಂ ಬೆಂಬಿಡಿದರ್ಜುನ ಸೂನು ಮತ್ತಂ ಬಡಿಗೋಲ್ಗಳಸೋನೆಯಂ ಕರೆಯುತುಂ ಬೇಂಟೆಯ ಮೋದಂಬೆತ್ತು ಪೊಳ್ತುಪೊಳ್ತಿಗೇಳ್ಗೆವಡೆಯುತುಂ ಬಿಲ್‌ವಿಜ್ಜೆಯ ಪೊಸ ಪುರುಡಿಂ ಬೇಂಟೆಯಾಡಿ ಪಲವಂ ಕಾಲ್ಮುರಿದು, ಪಲವಂ ಗೋಣ್ಮುರಿದು ಪಲವಂ ಗಡಿಯಂ ದಾಂಟಿಸಿ ತಾಂ ಪಿಂತಿರುಗಿದಂ. ೪೭೦

ಅನ್ನೆಗಂ ನಿಂತೆಡೆಯೊಳ್ ನಿಂತು ನೆಚ್ಚಿನ ಗೆಣೆಯನ ಕೆಚ್ಚಿನ ಕಿಚ್ಚಿನ ಸಾಸವಂ ಕಣ್ಮಿಟುಕಿಸದೆ ನೆಟ್ಟಸಿಟ್ಟೋಟವಂ ಕೀಲಿಸದೆ ತಮ್ಮಿರವಂ ಮರೆತು, ಮರವಟ್ಟು, ಜೀಯೆಂದುಂ ಹೋಯೆಂದುಂ ಬಿಟ್ಟ ಬಾಯಂ ಮುಚ್ಚದೆಯುಂ ಚೀರಾಡಿ ಮುಂದೈಸಿ ಮುಂದೈದು ಮುತ್ತಿ ಬಿಗಿದಪ್ಪಿ—ಭಳಿರೆ! ಅಭಿಮನ್ಯು! ಎಂದು ಜಯಧ್ವನಿಗೈದರ್ ಚಿಣ್ಣರೊಗ್ಗಟ್ಟನಿಂ. ೪೮೦

ಕೃಪಾಳು—ಇದೇನೈ, ಅಭಿಮನ್ಯು? ಇಂತಪ್ಪ ನೆತ್ತರ್ ಮಜ್ಜನದೊಳ್ ಕೆಂಗಲಿಸಿ ಬಂದಿರ್ಪೆ? ಎಂತಿಂತು ಗಾಯವಟ್ಟೆ? ಸೂಕರಂ ಮೇಲ್ವಾಯ್ದು ಪಾಯ್ದುದೇಂ? ನೀನೋರ್ವನಿಂತು

ನುಗ್ಗಿದುದು ತಪ್ಪಾಯ್ತು ಕಾಣ್ ! ಪಿರಿಯರ್ಕಳಿಲ್ಲದೆ ಇಂತಪ್ಪ ಆತುರಂಕಾತರಂಬಟ್ಟು ಮುನ್ನುಗ್ಗುವುದು ಎಳೆತನಕೆ ಸಲ್ಲದೆಂದೊಡೆನ್ನಂ ಪಳಿಯದಿರ್ ಮಿತ್ರ !

ಅಭಿಮನ್ಯು ಕುಕಿಲ್ವಸೋಗೆ ನವಿಲೆಂತಂತುಂ ಕಂಠಸ್ವರಮಂ ಏರುನಗೆಯೊಳ್ ಪರಿಸಿ–ಅಯ್ಯ, ಗೆಳೆಯ ! ಕೈಯೊಳ್ ಬಿಲ್ಲು ಬಾಣಂಗಳಿರ್ದೊಡೆ ಭಯಮೆಲ್ಲಿಯದು ? ಆಂ ಬೆನ್ನಿಟ್ಟರೆ ಅವೆಂತು ಮೇಲ್ವಾಯ್ದು ಬರ್ಕುಂ ? ಆಂ ಓಡುವಾತುರದಿಂ ಕಲ್ಮುಳ್ಗಳೊಳ್ ನುಗ್ಗಿ ಗಾಸಿವಟ್ಟೆಂ. ಬೇಂಟೆಯೊಳ್ ಇದು ಸಾಜಂ. ೪೯೦

ಎಲ್ಲರುಂ ಅತ್ತಮಿತ್ತಂ ಮೆಯ್ಯಗಾಯಮಂ ನೋಳ್ಪನಿತರೊಳ್ ಸುದ್ದಿಯುಂ ಮುಟ್ಟಿ ಒಳಗಡೆಯಿಂ ಪೊರಗಡೆಯಿಂ ಸಾಲ್ಗೊಂಡು ಓಡಿವಂದ ಮಾತ್ರಿನಿತು ಬಾಲಕರುಂ ಅಚ್ಚರಿಯಿಂ ಟಿಬ್ಬರಿಸಿದ ಮನದಿಂ ಕೊರಳ್ದನಿಯುಂ ಪರಿಸಿದರ್ ಒಗ್ಗೂಡಿ–ಘೇ ! ಚಂಡ ಪ್ರಚಂಡ ! ಬೀರರ ಬೀರ ! ಶೂರರ ಶೂರ !

ಇಂತಿಂತು ನೆರೆಮುರೆದೊಪ್ಪುತಿರೆ ಅಭಿಮನ್ಯುವಿನ ಕೆಚ್ಚಿನೈಸಿರಿ ಸೋರ್ವ ಮುಖಪದ್ಮಂ ಚಳಚಳಿಸಿ ಬಲ್ಪಿನ ಚೆಲ್ವಿನ ಬಾಳ್ಬಳ್ಳಿಯ ಚೆಂಗುಡಿಯೊಲ್ ಕಣ್ಗೆಂಬಾಗೆ ಮನವೆರ್ಚೆ ಮೈವೆರ್ಚೆ ನಗೆ ಮೊಗದಿಂ ನೆರೆಮನೆಯೊಳಗಿಂದೈತಂದ ಮುತ್ತಬ್ಬೆಯುಂ ಮೊಮ್ಮಗನ ಪತ್ತೆಸಾರ್ದು ತಬ್ಬಿಯುಂ ಮುದ್ದಿಸಿಯುಂ ಗಾಸಿಗೊಂಡ ಮೈಯ್ಯಂ ನಿಳುಪಿ ತಳ್ಕೈಸಿ ಮನಂ ಮರುಗಿ ಕೇಳಿಸಿದಳ್–ಮುಳ್ಳುಕಂಟಿಯ ನಿಡುಬಲ್ಲೆಯೊಳ್ ನುಗ್ಗಿ ಗಾಸಿವಡುವರೇಂ ಕಂದ ! ಇನಿತೊಂದು ಪಿರಿಯರ್ಕಳಿರೆ ನಿನಗಿದೇಂ ಪುರ್ಚೆ ? ತೇರಿರ್ದು ತೇಜಿಯಿರ್ದು ಕಾಪಿನವರಿರ್ದು ತೋಳ್ಬಲ್ಪಿನ ಕೀಟದಿಂ ಪಗೆಗೆರ್ಚಿನ ಪುರ್ಚಿಂ ಮುನ್ನುಗ್ಗಿದೆಯಲ್ತೆ ? ಮರಿಯಾನೆಯ ಪುರುಡುಂ ಪುರುಪುಂ ಇಂತಪ್ಪ ಗಾಸಿವಡಿಸಿತಲ್ತೆ ? ಏಂ ಕುವರ ? ಸೊರ್ಕಿದೆಕ್ಕಲಂ ೫೦೦

೫೧೦

ರೊಚ್ಚಿನಿಂ ಮೇಲಾಯ್ದು ಬಂದಿರ್ದೊಡೆ ನಿನ್ನಂ ತತ್ತಳದುಳಿದು
ಸೀಳ್ದು ನುಚ್ಚುನುರಿಗೆಯ್ದಿರಲಕ್ಕು. ಅಕ್ಕಟಾ! ಹಸುಗುವರಂ
ಬರ್ದುಂಕಿ ಉಳಿದುದೊರ್ ವಿಶೇಷಮೆನಲಕ್ಕುಂ. ಇಂಮುಂದಾ
ದೊಡಂ ನುಗ್ಗದೆ ನುರಿಯದೆ ನಿನ್ನ ನೀ ಕಾಪಿಡೈ !

ಅಭಿಮನ್ಯು—ಓ ಬಿಡಿ ಬಿಡಿ! ಈ ತೆರನೊಂದು ಕಾತರಮೇಕೆ?
ಆನೆಳಗೂಸಲ್ತು ?

ಕುಂತೀದೇವಿ—ಹಾ, ಈ ಶೌರ್ಯಾಟೋಪಮಲ್ತೆ ನಿನ್ನಂ
ಕೆನ್ನೆತ್ತರಿಂ ಮಜ್ಜನಂಗೆಯ್ಸಿದುದು ? ಉಟ್ಟ ಪಲ್ಲಗಚ್ಚೆ ಉತ್ತರೀ
ಯಂಗಳ್ ಪರಿದಿವೆ ಮುಳ್ಳಿನ ಕಂಟೆಯೊಳ್ ನುಗ್ಗಿ. ಏವೇಳ್ವೆನೊ
ಇಂತೊಂದು ಸಾಸದಿರವಿಂಗೆ ? ೫೨೦

ಅಭಿಮನ್ಯು—ಈಗಣ ಮಾತೇಂ ಬಿಡಿಂ. ಆಗಳ್ ನೀಮಿತ್ತ
ಬಂದಿರ್ದೊಡೆ ಮೂಗಿನೊಳ್ ಬೆರಳಿಟ್ಟು ಇದೇಂ ತೋಂಟಮೇ
ಬೆಸಲೆಯಾದುದೊ ಎಂದಚ್ಚರಿಬಡುವಂತು ಪಿಂಡು ಪಿಡೈಸಿ
ಸೊರ್ಕಿದೆಕ್ಕಲಂ ಕೂಡಿರ್ದುವಿಲ್ಲಿ. ಅವು ಪಾಳುಗೆಯ್ವ
ತೋಂಟಮುಂ ನೀಂ ನೋಡಲಕ್ಕುಂ.

ಕುಂತೀದೇವಿ—ಏಂ ಸೋಜಿಗಂ ಕಂದ ! ಇಂತಪ್ಪ ನಡುವಗ
ಲೊಳ್ ಬೆಚ್ಚದೆ ಬೆದರದೆ ಬೀಡೆಡೆಗೆ ನುಗ್ಗಿ ಬರಲ್ಕೆ ಎಕ್ಕಲಂಗಳ್ಗೆ
ಏಂ ಧೈರ್ಯಸ್ಥೈರ್ಯಂ ? ಏಂ ಪುರುಡು ? ಇದಲ್ತೆಸೊರ್ಕುಂ ?

ಅಭಿಮನ್ಯು—ಈ ಎಡೆಯೊಳ್ ಲೋಗರ ಭಯಮಣಮಿಲ್ಲಂ.
ಮೇಣ್ ಬಿಲ್‌ಬಿಜ್ಜೆಯ ಬಿಜ್ಜೋದರರ್ ತಂತಮ್ಮ ಉಜ್ಜುಗದೊಳ್ ೫೩೦
ಮನವಿಟ್ಟಿಹರ್. ಮತ್ತೆಲ್ಲಿಯ ಭಯಂ ? ಅಷ್ಟು ಮಾತ್ರಮೇಂ
ಅಬ್ಬೆ ? ಉತ್ತರೀ ತಟದ ಪಕ್ಕಣದೆಡೆಯ ಪೊಂಬೆಟ್ಟದುಂಗುಟ
ದೊಳ್ ಮುಂಬೆಳೆದ ಗದ್ದೆತೋಟಂಗಳ್ಗೆ ಪೇರಾನೆಮಿಂಡು ನುಗ್ಗು

ತಿರ್ದುದು ಹಾಡ ಹಗಲೊಳೆ ದಿನದಿನಂ! ಕೇಳ್ ಅಜ್ಜಿ! ಈಗ
ಳೀಗಳ್ ಇಂತಪ್ಪ ಉಪಟಳಂ ಎಲ್ಲೆಡೆಯುಂ ಪೆರ್ಚುತಿರ್ಕುಂ!
ಮತ್ತಾಬೇಡರ್ ಇನ್ನೆಬರಂ ತಾವೆ ಆನೆಗಳಂ ಬಡಿದೋಡಿಸಲ್ಕೆ
ಸಾಸಂಬಟ್ಟೊಡಂ ಕೈಸಾಗದೆ ಬೆದರಿ ಬೆಂಡಾಗಿರಲ್, ಬೇಡ
ರಾಣ್ಮಂ ಭೀತಿಯ ಗಾವರದಿಂದಿಲ್ಲಿಗೆಯ್ತಂದು ವೃತ್ತಾಂತವಂ
ಕಟ್ಟುಬ್ಬಸದಿಂದೊರೆಯೆ ಆನುಂ ಅವನೊಂದಿಗೆಯ್ದಿ ಪೆರ್ಬಂಡೆ
ಗಲ್ಗಳನೇರಿ ಕೂರ್ಬಾಣಗಳಂ ತೆಗೆದೆಚ್ಚು ಪೇರಾನೆಯಂ ಕೊಂದು ೫೪೦
ಮಿಕ್ಕಿನಾನೆಗಳಂ ಪೊಯ್ಯುಬಡಿದು ದೂರ ವನಾಂತರವಂ ಪುಗಿಸಿ
ಇದೀಗ ಪಿಂತಿರುಗಿ ಬಂದೆನಲ್ತೆ? ಈ ಎಕ್ಕಲಂಗಳೇಂ ಪೆರ್ಚು?
ಅವಂ ನರಿಯಂತೆ ನಾಯಂತೆ ಬಡಿದೋಡಿಪುದೊಂದು ಸಾಸ
ಮಲ್ತು; ಸಿಸುತನದೊಂದು ಆಟಕ್ಕೆ ಸರಿಸಮ ಕಾಣ್!

ಅಂತೆಂದ ಮಾತಿಂಗೆ ಕುಂತೀದೇವಿಯುಂ ಕಟ್ಟಚ್ಚರಿಯಿಂ
ಕಣ್ಮಲರಿಸಿ ನೋಡುತುಂ–ಪಸುಳೆ ನೀಂ ಪೇರಾನೆಯ ಬೇಂಟೆ
ಗೆಯ್ದಿಯೇಂ? ಅಹಹ, ಇದು ಸಾಸಮಲ್ತು, ಪುರ್ಚು ಕಾಣ್!
ತೆಗೆ ತೆಗೆ ಇಂತಪ್ಪ ಆತುರಕಾತರಂ ಅಣುಗರ್ಗೆ ಸಲ್ಲದೈ.

ಅಭಿಮನ್ಯು–ಮುತ್ತಜ್ಜೆ ಇಂತೇಂ ಅಸಮಾಧಾನಂ? ಎಮ್ಮಾ
ತೋಂಟದೊಳ್ ನುಗ್ಗಿ ನೋಡಿದೊಡೆ ದಿಂಡುರುಳ್ದ ಸೊರ್ಕಿ ೫೫೦
ದೆಕ್ಕಲಂಗಳಿಂ ಸಂಕೆ ಬುಡಮೇಲಕ್ಕುಂ!

ಆಗಳೆಲ್ಲಣುಗರುಂ ಒಗ್ಗೂಡಿ–ಮುತ್ತಜ್ಜೆ ತೋಂಟದೊಳ್
ದಿಂಡುರುಳ್ದ ಎಕ್ಕಲಂಗಳ್ಗೆ ಲೆಕ್ಕಮಿಲ್ಲಂ!

ಕುಂತೀದೇವಿ–ಅಹ, ಇಂತಪ್ಪ ಬಿಲ್ ಬಿಜ್ಜೆಯುಂ ನಿನ್ನೊಳ್
ಕೈಸಾರ್ದುದೆಂತನಿತರೊಳ್ ಕಂದ?

ಅಭಿಮನ್ಯು ಬಟ್ಟಮೊಗದೊಳ್ ಎಳನಗೆಯ ಚೆಲ್ವಂ ಚೆಲ್ಲಿ–

ನಿಮ್ಮಕ್ಕರೆಯುಂ ಕುಲ ಧರ್ಮಂ, ಕ್ಷಾತ್ರತೇಜಂ ರಣಕಾಳಿಯ ಇಚ್ಛೆಯುಂ ಎನ್ನಂ ಮುನ್ನೂಂಕದೆ ಪಿಂತಿಕ್ಕುಗುಮೆ?

ಕುಂತಿದೇವಿ–ಕೇಳ್ ಮಗನೆ! ಇಂತು ಸಕಲ ಬಿಜ್ಜೆ ಯೇಳ್ಗೆಯಿಂದೆ ಜಗದರಿಕೆಯೊಳ್ ಬಾಳ್ವೊಂದು ಸೈಪಿಂಗೆ ೫೬೦ ಪಿರಿಯರ್ಕಳ ಪರಕೆಯೆ ನಿಜಬಿತ್ತು! ಇನ್ನುಂ ಪಸಿವು ನೀರಳ್ಕೆ ಗಳಂ ಕಡೆಗಣ್ಬುವುದು ಸಾಮಾನ್ಯಂ.

ಅಭಿಮನ್ಯು ಸಂತಸದಿಂ–ಬೀರರ್ಗೆ ಪಸಿವು ನೀರಳ್ಕೆಗಳೇಂ ವಿಶೇಷಮಲ್ತು.

ಕುಂತೀದೇವಿ ಕೆಯ್ಯನಂ ಮುದ್ದಿಟ್ಟು ಮುಂಡಾಡಿ ಕೇಳಿಸಿದಳ್–ಅಮಮ! ಈಗಾಗಳೇ ಏಂ ಧೈರ್ಯಸ್ಥೈರ್ಯಮೊ? ಏಂ ಕೆರ್ಚಿನ ಪುರ್ಚೊ? ಈಯೊಂದು ಹಮ್ಮಿನೊಳ್ ಮುಂತೇಂ ಬವಣೆಯೊ....ಇಂತಪ್ಪ ಪುರ್ಚುಂ ಗತಿಗೆಡಿಸುಗುಂ ಎಚ್ಚರಿರು ಕಂದ!

ಅನಿತರೊಳ್ ಅಲ್ಲಿಗೈತಂದ ಸುಭದ್ರೆ, ನಿಬ್ಬೆರಗಿನ ಕಣ್ನೋಟ ದಿಂ ನಿಟ್ಟಿಸುತುಂ–ಇದೇಂ ವತ್ಸ! ಆವಾವ ಗಂಡರ ಗಂಡರಂ ೫೭೦ ಬೆಂಬಿಡಿದು ಪೋಗಿ ಮಾರಾಂತು ಪೋಣರ್ದು ಗಾಸಿವಟ್ಟು ಬಳಲಿ ಬೆಂಡಾಗಿ ಬಂದಿರ್ಪಯ್. ನಿನ್ನಂತೆಳಯರ್ಗೆತ್ತಣ ಪೋಣರ್ಕೆ ಪೇಳ್? ಪಾಲೋಗರಮುಂಬ ಕಂದಂ ಇಂತುಟು ಗಾಸಿವಡುವರೇಂ? ಆರ ಕೈಯ ಕೂರಂಬಿಂತು ನಿನ್ನಂ ಪೊಯ್ದುದೊ ಕಂದ! ಆರಿಂತು ಕಠಿಣಮನಮುಳ್ಳರ್ ಪಲ್ಲಮುರಿಯುಂ ಪೊಯ್ಯಲ್ಕೆ? ಎಂದೆನುತೆ ತಟ್ಟಿ ಮುದ್ದಾಡುವನಿತರೊಳ್ ಕುಂತಿ–ಕೇಳ್ ಸುಭದ್ರೆ, ನರರೊಡ ನಲ್ತು ಕಾಳೆಗಂ; ಬೇಂಟೆಯ ಪುರುಡಿನೊಳ್ ಕಂದನ ಕಾಯರ್ಾ ಟೋಪಂ! ಸುಭದ್ರೆ ಆ ಮಾತಂ ಕೇಳ್ದು ಅಚ್ಚರಿಯಿಂ ಕಣ್ಣರಳ್ಚಿ– ಅಂತಪ್ಪೊಡೆ ಮತ್ತಿದೇಂ ಗಾಯಂ ಮೈಯೊಳ್?

ಕುಂತಿದೇವಿ–ಪೇರಾನೆಗಳಂ ಸೂಕರಂಗಳಂ ಬೆನ್ನಟ್ಟಿ ಗಿಡ ೫೮೦

ಗೆಂಟಿಗಳೊಳ್ ನುಗ್ಗಿ ಜುದ್ದಮಂಗೆಯ್ದು ಪಲವಂ ಕೊಂದು ಪಲವಂ ಬೀಡಿನ ಗಡಿಯಂ ದಾಂಟಿಸಿ ಬಂದ ಪರಿಯಿದು ಕಾಣ್!

ಅಭಿಮನ್ಯು–ಕಟ್ಟೆರುವೆಗಳ್ ಬಿಸಿನೆತ್ತರಂ ಬಿರ್ದುಂಡು ನಲಿಯುತಿರಲಕ್ಕುಂ, ಬೇಂಟೆಯಾ ಕಣದೊಳ್.

ಕುಂತೀದೇವಿ– ಲಾಲಿಸು ಕಂದ! ಈ ಪುಡುಗಿನೊಳ್ ಪೊಡರ್ಪಿನ ಪರ್ಮರಿಕೆಯು ರೊಚ್ಚಿನ ಕೆಚ್ಚಿನ ಸಾಸಮಿರ್ದೊಡೇಂ? ಜವನ ಜಂಗುಳಿಯ ಶೂಲದ ಪಾಶಮಿರ್ಕುದೆತ್ತೆತ್ತಲುಮೆಂಬುದಂ ಏಗಳುಂ ನೆನವರಿಕೆಯೊಳಿರಿಸಲಕ್ಕುಂ.

ಅದರ್ಕಾ ಅಭಿಮನ್ಯು ಸಂಭ್ರಮದಿಂ– ಎನ್ನೀ ಬಿಲ್ ಬಿಜ್ಜೆಯಭ್ಯಾಸಂ ಬೀರದೇಳ್ಗೆಗೆ ಗುಡಿಯಕ್ಕುಂ. ಅಂತೊಂದು ಮಾಳ್ಕೆಯೊಳ್ ಸಾಸವೆಸಗುವೆನಲ್ಲದೆ ಬೇರಿಲ್ಲಂ. ೫೯೦

ಸುಭದ್ರೆ ಸಂತಸದಿಂ ತಲೆಯಂ ನೇವರಿಸಿ ತಾಯ್ತನದ ಹುಮ್ಮನಿಂ ಕಂದಂಗೆಂದಳ್–ಬರ್ದುಂಕಿನೊಳ್ ಬೀರವೇಳ್ಗೆಯು ಆಧ್ಯಮಕ್ಕುಂ ಕ್ಷಾತ್ರಕುಲಜರ್ಗೆ. ಪಣಮಂ ಸುಖಮಂ ಕಡೆಗಣ್ಚಿ ಸತ್ಯಮಂ ಧರ್ಮಮಂ ಸಂರಕ್ಷಿಸಲಕ್ಕುಂ. ಧರ್ಮಕರ್ಮಂಗಳಂ ನೀತಿ ನ್ಯಾಯಂಗಳಂ ಪಗೆದು ಇಹಕಂ ಪರಕಂ ಬೆನ್ನಾಗದಿರ್. ಇದಂ ನಿಚ್ಚಂ ಬಗೆಯೊಳೂರೆದು ಕಜ್ಜಮಂ ಕೈಕೊಳ್ವುದು ಕಂದ!

# ಚತುರ್ಥಾಶ್ವಾಸಂ

ಬೈಗುವೊಳ್ತಿನ ಗರಗರಿಕೆಯಭ್ಯುದಯದಿ ಪಡುವಣೊಡ್ಡೋ
ಲಗಕ್ಕೈತಂದ ದಿನಮಣಿ ಓಕುಳಿಯೊಳ್ ಮಿಂದವೊಲ್ವೆಳಗಿ ಬೆಳ್ಮುಗಿ
ಲ್ವೆಟ್ಟಂಗೆ ಚೆಂಗಾವಿಯನೊರೆದು ಸಿಚ್ಚಪಯಣದ ಮೋದದಿಂ
ಮುಂಬರೆ ಸಂತಸದಿಂ ಇದಿರ್ಗೊಂಡಳಾದಿಗಂಗನೆ ಎರ್ದೆಗುಡಿಯ
ಪೆರ್ಬಾಗಿಲಂ ತೆರೆದು. ಹೇಮಂತರಾಯನುಬ್ಬರಂ ಪೆರ್ಚಿ ಸೊಗ
ಯಿಸಿ ಬೆಳ್ನಗೆಯಂ ಸೂಸಿ ನಾಡುಂ ಬೀಡುಂ ಕಾಡುಂ ತಣಿವಂತೆ
ಸೊಗದ ಸುಧೆಯೊಳಿಕ್ಕಿರ್ದಂ. ಹೇಮಗಿರಿಯುಂಗುಟದಲಿ
ಚಿಮ್ಮಿದವೊಲ್ ಪೊದಳ್ದು ಪರ್ವಿದ ನಿಡುಗೊಳದ ಜಲರಾಶಿಯಂ
ರಂಗು ಮಾಣಿಕದ ಪೊನ್ನವರ್ಣದಿಂ ತಳತ್ತಳಿಸುತಿರ್ದುದು
ಒಯ್ಯೊಯ್ಯನೆ ಸಂಚಲಿಸಿ ದೂರದೂರಮಂ ಸಾರ್ದ ನೀರ್ವಕ್ಕಿಗಳ್ ೧೦
ಬೀಡಂ ನೀಡಂ ಅರಸುತುಂ ಅಲ್ಲಲ್ಲಿ ವರ್ತುಲಾಕಾರದೊಳ್ ಸುಳಿ
ಸುತ್ತುತ್ತೆ ಪಾರಾಡುತಿರ್ದುವು ಮುಗಿಲಗಲಂ.

ಬಕಂಗಳ್ ದಂಡೆಯಂಚಿನ ಕರ್ಗಲ್ಲ ತುತ್ತತುದಿಯೊಳ್
ನಿಂದು ಕಾದಿರ್ದು ಮೀಂಗಳಂ ಪಿಡಿದು ಕಬಳಿಪ ಮಿಂಚಿನ ಸಂಚಿ
ನೊಳ್ ಹೊಂಚಿರ್ದುವು ಇಚ್ಚೆಯಂ ಪಚ್ಚೆಗೆಯ್ಯಲೆಂದು
ನಿಚ್ಚಟದಿಂ. ಆಗಳಾ ಮೀಂಗಳ್ ಸಂಚಿನ ಹೊಂಚಿನ ಪ್ರೇತೋಪ
ಚಾರಮಂ ಅರಿತು ನುರಿತು ಮಾಂಕರಿಸಿ ಅತ್ತ ಸುಳಿಯದಿರಲ್
ಕಾದು ಕಾದು ಬೇಸತ್ತು ಸೋಲ್ತು ಬಕವಳಗಂ ತಮ್ಮೊಂದು ಅಪ
ದೆಶೆಯಿಂ ಮನಂಗೆಟ್ಟು ಮುಂಗಾಣದೆ ಚಿಂತೆವೆತ್ತು ಸುತ್ತುಮುತ್ತಂ
ಮಿಳ್ಮಿಳ್ಳನೆ ನೋಡುತಿರೆಯಿರೆ, ಮುದಿಬಕವೊಂದು ಕರ್ಬಂಡೆಯ ೨೦

ಕೋಳ್ಗಲ್ಲನೇರಿ ತಪಂ ಗೆಯ್ವವೊಲ್ ಒಂಟಿ ಕಾಲೊಳ್ ನಿಂದು,
ಇನ್ನೀ ನಂಟುವೊರೆಯ ಮೀಂಗಳ್ಗೆ ಮುಂತೆ ಮುಂತೆ ಬಟ್ಟೆ ಯೇವು
ದೆಂದಾರ್ಗೆ ಮಗಲ್ಲದೆಂದೆನುತುಂ ಯೋಚನೆಯಭಾರದೊಳ್ ತಲೆಯಂ
ತೂಗುತಿರ್ದುದು, ಮತ್ತಂ ಪಾರಾಡುತಿರ್ದ ಮೀಂಚುಳ್ಳಿ ಯಾವೆಡೆ
ಯೊಳ್ ಮೀಂಗಳ ಸುಳಿವಂ ಕಂಡೊಡಂ ಬೋಂಕನೆ ಬಂದೆರಗು
ತಿರೆ ಭಯದಿಂದಳ್ಕಿ ಚಿಣ್ಣ ಚಿಣ್ಣ ಮೀಂಗಳ್ ಚಕ್ಕನೆ ನೀರೊಳ
ಗೊಳಗೆ ನುಸುಳ್ದು ಮೈಗರೆದು, ಕಿರುದೊರೆಯಂ ಮೀರ್ದು ಮುಂಬ
ರಿವ ಕೋಡಿಯೊಳ್ ನುಗ್ಗಿ ಪಾರಾಗುತಿರ್ದುವು ಪಿಂಡುಪಿಂಡೈಸಿ.
ಅಂತುಮಿಂತು ಒಂದಾದೊಡಂ ದಕ್ಕದಿರೆ ಬಕವಳಗಂ ಕಾದು
ಬೇಸತ್ತು ಬೆಳ್ಳನೆ ಬೆಳರ್ತು ತವೊಮ್ಮೆಂದು ಪಾಪದವೊತ್ತುವೆನೆ ನಿಡು
ಸುಯ್ದುಮಿಣ್ಣನೆ ತಪಂಗೆಯ್ಯುತಿರ್ದುವು ಒಂಟಿಗಾಲೊಳ್ನಿಂದು. ೩೦

ಮುಂಜಾವಿಂ ಬಂಡನುಂಡುಂಡು ಬಾಯಾರಿ ಒಡಲಾರಿ ನೀರಂ
ಬಯಸಿದಲರ್ವಕ್ಕಿಗಳ್ ಜೇಯೆಂದೆರಗಿ ಪದ್ಮಪತ್ರಗಳಂಚಿನೊಳ್
ದಟ್ಟಣಿಸಿ ಕರಿಯಂಚಂ ನೆಯ್ದು, ಕರಿಮಣಿಸಾಲಂ ಪೋಲ್ದು ತಿಳಿ
ನೀರಂ ಪೀರುತಿರ್ದುವು ಮನಂ ದಣಿವನ್ನೆಗಂ. ಬೆಚ್ಚನೆಯ ಬನಗಾ
ಳಿಯ ತೀಟದಿಂ ಕರ್ಮಡುವಿನೊಳೇಳ್ವ ಕಿರುದೆರೆಗಳ ಪೊಳಪಿನಿಂ. ತಿಳಿ
ನೀರ್ಗೆಡೆಯೆಡೆಯೊಳ್, ಪೊದಳ್ದು ಎಲ್ಲೆಡೆಯುಂ ಮೊಗ್ಗೆಯ ಬುಗ್ಗೆ
ಗಳೊಡಂ ಮೇಲೇಳ್ದು ಕರಂಡದಪಾಂಗಿನೊಳರಳ್ದು ರಯ್ಯವೊಪ್ಪುವ
ಕನ್ನೈದಿಲೆಗಳಿಂ, ಪೂವಿಂ ಪೂವಿಗೆ ಪಾರ್ವ ಮರಿಚಿಟ್ಟೆಗಳ ಚೆಲ್ವಿನ ೪೦
ಪಾರಾಟದಿಂ, ಪುರುಪಿಂ ದೂರ ದೂರ ಸಾರ್ದು ಸುತ್ತಾಡಿಬರ್ಪ
ಬಾಲಹಂಸೆಗಳಿಂ, ಬೆಳ್ಳಕ್ಕಿಗಳ ಬಿಗುರ್ಪಿನ ಹೊಂಚಿನ ಸಂಚಿನ
ಮಾಳ್ಕೆಯಿಂ, ನೀರೊಳಗೊಳಗೆ ತಣಕು ಪಣಕೆನ್ನುವ ರಂಗುರಂಗಿನ
ಜಲಚರಂಗಳಿಂ, ಆಗಳಾಗಳುಂ ಮೈ ಮುದ್ದಿಪ ಚೆಂಗಾಳಿಯಲೆತದಿಂ,
ಮನವೆತ್ತು ಚೀಂಕರಿಪ ನೀರ್ವಕ್ಕಿಗಳಿಂ ತಲೆದೂಗುವ ಗಿಡು
ಮರಂಗಳ ಪಾಂಗಿನಿಂ ಪಗಲ್ವೆಣ್ಣ ಕೈ ಪಿಡಿಯೆಂಬಂತಿರೆ ಸೊಗಯಿಸಿ

ದತ್ತು ನಿಡುಗೊಳದ ಪಿರಿವಲಯಂ ನಿಜವಾರ್ಧಿಗೆ ಪ್ರತಿಪಚ್ಚಗಡಲ್
ಎನಲ್ಕೆ ಮುಗಿಲಂ ಮುದ್ದಿಪ ಪೆರ್ಮರಂಗಳೊಳ್ ನೆನೆಯೇಱ ಪೂವ
ರಳ್ದ ಸಿಱಸದಿಂ ಬಕುಳ ಸಂಪಗೆ ಸುರಯಿ ಮುಂತಪ್ಪ ಪೂಗಳಿಂ ೫೦
ಮೊರೆದು ನರುಗಂಪಂ ಸೂಸಿ ಸೊಗಯಿಸಿರ್ಕುಂ. ಫಲವೃಕ್ಷಂಗಳ
ನಿಡುಗೊಂಬೆಗಳ್ ಪಸುರ್ಗಾಯಿ ದೋಱೆವಣ್ ತನಿವಣ್
ಗೊಂಚಲ್ ಗೊಂಚಲ್ಗಳಿಂ ತುಂಬಿರ್ದುವು ಕಣ್ಗೊಂಬಾಗಿ ಚಿಹ್ವೆ
ಯೊಳ್ ನೀರಂ ತರಿಕುವಂತಿರಲ್ ಹಣ್ಗಂಪು ಹೂಗಂಪು ನೀರ್ಗಂಪು
ಮಣ್ಗಂಪುಗಳ ಪದಂಪು ಮಧುರಾತಿಮಧುರಮೆನೆ ಎಡೆಯೆಡೆ
ಯೊಳ್ ಸೊಗವೊಪ್ಪುವ ಸೋಗೆ ನವಿಲುಗಳ್ ತಂತಮ್ಮ ನಲ್ಲೆ
ಯರ್ ಮಕ್ಕಳ್ ಪಿಂಡಿನೊಡಗೂಡಿ ಮೋದದಿಂ ಬೈಗಿನ
ನೋಂಪಿಯಿಂ ನಾಟ್ಯಭಂಗಿಯೊಳ್ ಸುತ್ತಾಡಿ ವೈಮನವೆರ್ಚೆ ನಲಿ
ಯುತಿರ್ದುವು ನಿಡುಗೊಳದಂಗಣದೊಳ್, ಮನೋಜ್ಞಮಪ್ಪಂತೆ.

ಆಗಳುಂ ಉಪಪಾಂಡವರೊಡನೆ ಅಲ್ಲಿಗೆಯ್ತಂದ ಅಭಿಮನ್ಯು ೬೦
ಘಟೋತ್ಕಚರ್ ಪುರುಪಿನಿಂ ನಲ್ವಾತುಗಳ ನುಡಿಮುತ್ತಂ ಚೆಲ್ಲಿ
ಸೂಸೆ ಮರುದನಿ ಪೊಣ್ಮಿದುದು ಕರ್ವೆಟ್ಟಿನೆಡೆಯಿಂದೆ. ಬಲ್ಪಿನಿಂ
ಕೆಚ್ಚಿನಿಂ ಕಲ್ತು ಬೀರವೊಪ್ಪುವ ಆಸೆಯಿಂ ಬಿಲ್‌ಬಿಜ್ಜೆಯಭ್ಯಾಸ
ದೊಳ್ ತೊಡಂಗಿದರ್ ಎಣೆಯಿಲ್ಲದ ಪುರುಪಿನಿಂ. ಅಭಿಮನ್ಯು
ತೊಟ್ಟ ಪೊಂಗರಿಯ ಬಾಣವೊಂದು ವನಾಂತರದೊಳ್ ಪೊಕ್ಕು
ಕಣ್ಮಱೆಯುವಾಗಲ್ಕೆ ಇದೇನೆಂದು ಕಟ್ಟಚ್ಚರಿಯಿಂ ನೋಡುತ್ತೆ
ನಿಂದಂ. ಮಂತ್ರಿತ ಬಾಣಂ ಎಲೆಗೊಂಚಲ್ ಕೆಡವಿದೊಡಂ ಎತ್ತ
ಪೋದುದೆಂಬುದು ತಿಳಿಯದಿರೆ ಮನದೊಳ್ ಕುತೂಹಲಂ ಕುದ್ದು
ಪುಡುಕುವೊಂದು ಯೋಚನೆಯೊಳ್ ವನಪಥಂಬಿಡಿದು ಮುಂತೆ
ಮುಂತೆ ಪೋಪೋದಂ. ವಿಶಿಖಂ ಎಲೆಗೊಂಚಲೊಡನೆ ನೆಲಗಚ್ಚು ೭೦
ವೊಂದು ಬಗೆಯಿಂ ಅಭಿಮಂತ್ರಿಸಿ ಪ್ರಯೋಗಿಸಿರ್ದೊಡಂ ಮುಂತೆ
ಸಾರ್ದುದು ಆವ ಕೇಡಂ ಗೆಯ್ದಪುದೊ ಎನಿಸಿ ಮನಂ ತಳ್ಳಂಕ

ಗೊಳಲ್ಕೆ ಎಲ್ಲೆಡೆಯುಂ ಕಣ್ಗೊಳ್ ಕಣ್ಣಿಟ್ಟು ಪಜ್ಜೆಪಜ್ಜೆಗುಂ
ಮುಂಕೊಳ್ಳುತ್ತರಸುತುಂ ಅಗಳ್ತೆಯಂ ದಾಂಟಿ, ದರಿಯಂ
ಪಾಯ್ದು ತಿಟ್ಟನೇರಿ ತಿಟ್ಟನಿಳಿದು ಅಂಕುಡೊಂಕಿನ ಕುಪಥದೊಳ್
ಸಾರ್ದು ನಿಡುಬಯಲಂಬೊಕ್ಕೊಡನೆ ಮುಂದೆಸೆಯೊಳ್ ವೇದ
ಗುರುವೆ ಮೆಯ್ಗೊಂಡಂತೆವೊಲ್ ಬೆಳ್ಮಡಿಯುಟ್ಟು ನಡೆತರುತಿರ್ದ
ಮುನಿಪುಂಗವನೊರ್ವಂ ಕಣ್ಗೆಸೆದಂ.

ಆಗಳ್ ಅಭಿಮನ್ಯು ಮೈಮನಂ ಪುಳಕಿತನಪ್ಪಿ ಸಂತಸದಿಂ
ಬಳಿಸಾರ್ದು ನಯವಿನಯದಿಂ ಋಷಿಯಡಿಗೆ ಮುಡಿಯಂ ಚಾಚಿ ೮೦
ವಂದನೆಯಂಗೆಯ್ದು ತಲೆವಾಗಿ ನಿಲ್ಲಲ್ ಮುನಿವರ್ಯಂ, ತನ್ನ
ಕೈಯೊಳಿರ್ದೊಂದು ವಿಶಿಖಮಂ ತೋರ್ದು ನಗುಮೊಗ
ದಿಂದಿಂತೆಂಗುಂ—ಎಲೆ ಕಂದ! ಈ ಬಾಣಂ ನಿನ್ನದಲ್ತೆ?

ಅಭಿಮನ್ಯು ಕಟ್ಟಚ್ಚರಿಯಿಂ ಕಣ್ಣರಳ್ಚಿ ನೋಡಿ, ದೈನ್ಯ
ತೆಯಿಂ ಖಿನ್ನತೆಯಿಂ ಕೇಳಿಸಿದಂ—ಅಹುದು ಮುನಿವರ್ಯ!
ಅದೆಂತು ನಿಮ್ಮ ಕೈಸಾರ್ದುದೊ ಕಾಣೆಂ. ಆನದಂ ಅಭಿಮಂತ್ರಿಸಿ
ಎಲೆಗೊಂಚಲ್ಗೆ ಗುರಿಯಿಟ್ಟು ಸೆಳೆದುವಿಟ್ಟೆಂ. ನಿಮ್ಮನದು ತಾಗಿ
ಗಾಸಿಗೊಳಿಸಿರ್ದೊಡೆನ್ನಂ ಮನ್ನಿಪುದು. ನಿಮ್ಮ ಪಯಣಮಾಯೆಡೆ
ಯೊಳಿರ್ಪುದೆಂದರಿತೆನಿಲ್ಲಂ. ಇದು ಖಂಡಿತ ಅಪಚಾರಮಲ್ತು.
ದಯೆಯಿಂ ಮನ್ನಿಸಿಂ, ಎಂದುಮೆಂದು ಮನದೊಳ್ ನೊಂದು ೯೦
ಮನಗುಂದಿದವೊಲ್ ಮೊಗಂ ಬಾಡಿ ಮೈ ನೀರ್ ಬಸಿದು ನಯದಿಂ
ಮತ್ತೆ ಕೇಳಿಸಿದಂ—ಮುನಿವರ್ಯ, ಆನಿದಂ ಪುಡುಪುಡುಕುಲಿತ್ತ
ಲ್ಲೈತಂದೆಂ. ಅನುಜರ್ಗೆ ಕಲಿಪೊಂದು ರೀತಿಯೊಳ್ ಬಾಣ
ಸಂಧಾನಂಗೆಯ್ದೆಂ. ಆದೊಡೆ....

ಮುನಿವರ್ಯ ನಗುನಗುತುಂ ನಲ್ಮಾತಿನೊಳೆಂಗುಂ—ಕಂದ!
ಆನೀ ಬಾಣಮಂ ಮಂತ್ರದಿಂ ಸೆಳೆಕೊಂಡೆಂ. ಅಲ್ಲದೊಡಿದೆನ್ನ ಕೈ
ಗೆಂತು ಬರ್ಕುಂ?

ಅಭಿಮನ್ಯು ಕುತೂಹಲದಿಂ ಮುನಿಯ ಮೆಯ್ಯಂ ನಿಟ್ಟಿಸಿ ನೋಡಿ ಎಲ್ಲಿಯುಂ ಬಾಣಂ ಚೊಕ್ಕ ಗಾಯಂ ತೋರದಿರೆ ಮಂತ್ರ ದುಕ್ತಿಯಿಂ ಪಡೆದುಕೊಂಡುದೆ ವಲಂ ಎಂದು ಸುಮ್ಮನಾಗೆ, ೧೦೦ ಮುನಿಯುಂ ಜಾನಂಬೊಕ್ಕು ಬಾಲನ ಭವಿಷ್ಯಮಂ ಅರಿತು ಮನ ದೊಳ್ ಮರುಕವಟ್ಟಂತೆ ನಲ್ದನಿಯಿಂದಿಂತೆಂಗುಂ–ಕಂದ! ನೀಂ ಬಿಲ್ವಿಜ್ಜೆಯಂ ಮಂತ್ರದುಕ್ತಿಯಿಂ ಆರಂಭಿಸುವವೊಲ್ ಉಪ ಸಂಹಾರಗೊಳಿಪುದೊಂದು ಯುಕ್ತಿಯಿರ್ಕುಂ. ಅದನರಿತಿರ್ದೊಡೆ ಬಿಟ್ಟಬಾಣಂ ಮತ್ತೆ ಕರಗತಮುಕ್ಕುಂ ಕೈದುಗಾರಂ ಬಯಸಿದೊಡೆ.

ಅಭಿಮನ್ಯು ಚಣವೈದು ಮಿಣ್ಣನಿರ್ದು ನುಡಿದಂ–ಮುನಿ ವರ್ಯರ್ ಒರ್ವರ್ ಬಾಣಮಂ ಬಿಟ್ಟೊಡಾವು ಪಿಂತೆಗೆದ ಕತಮೋ ನಿರ್ಕುಂ ?

ಮುನಿವರ್ಯರ್–ಕುವರ! ಜುದ್ದಕ್ಕಿಳಿಯೆ ಮೂಡಿಗೆಯುಂ ಮತ್ತೆ ಮತ್ತೆ ಬರಿದಪ್ಪುದು ಸಾಜಂ. ಆಗಳುಂ ಮಂತ್ರಮಂ ೧೧೦ ಜಪಿಸಿದೊಡೆ ನಿನ್ನ ವಿಶಿಖಂ ಮತ್ತೆ ಕೈಗೂಡುಗುಂ.

ಅಭಿಮನ್ಯು ಮನದೊಳ್ ಸಂತಸವಟ್ಟು ದೈನ್ಯದೊಳಿಂತು ಕೇಳಿಸಿದಂ– ಇಂತೀಯೊಂದು ಬ್ರಹ್ಮವಿದ್ಯೆಯುಂ ಸಮಯ ಸಂದರ್ಭಂಗಳ್ಗೆ ಬಪ್ಪುದುಂ. ನೀಮುಂ ಕಲಿಪಿದೊಡಾಂ ಧನ್ಯನಪ್ಪೆ. ದಯೆಗೆಯ್ದೆನ್ನ ಪರಸಿಂ.

ಮುನಿವರ್ಯರ್ ಮುಂಬರಿದು ಬಾಲನ ತಲೆಯಂ ನಲ್ಮೆಯಿಂ ನೇವರಿಸಿ–ಪಾರ್ಥನಂದನ! ನೀನಹುದು ವೀರಾತಿವೀರಂ! ನಿನ್ನ ಕೀರ್ತಿ ಪರಿಮಳಂ ಆಚಂದ್ರಾರ್ಕಮಿರ್ಪುದು. ಕಲಿಕೆಯೊಳ್ ನೀಂ ನಿಸ್ಸೀಮಂ. ನಿನಗೆಲ್ಲಂ ಸುಲಭದೊಳ್ ಕೈಗೂಡುಗುಂ, ಎಂದು ಮೆಂದು ತನ್ನ ಬಗೆಯೊಳೊಪ್ಪಿದ ಮಂತ್ರಮಂ ಬಾಲಕಂಗೆ ಕಿವಿ ೧೨೦ ಯೊಳುಸುರಿ–ಇದನೆಂದುಂ ಮರೆಯದಿರ್ ಕಂದ! ನಿನಗಿದು ಅಪ

ತತ್ಕಾಲದೊಳ್ ಬೆನ್ನಾಗಿಯುಗ್ಗಂ, ಮತ್ತಂ ಏಗಳುಂ ಸವಿತ್ರವಂ ನೆನೆಯ ದಾವ ಕಜ್ಜಮಂ ಕೈಕೊಳ್ಳದಿರ್ ; ನೀಂ ಗಂಡಮಂ ದಾಂಟುವೊಡೆ ಕಾವನಸಮಂ.

ಆ ಮಾತಿಂಗೆ ತಲೆದೂಗಿದ ಅಭಿಮನ್ಯುವಿನ ಮೊಗದೊಳ್ ಪೊನ್ನೇಸರ್ ಸೋರ್ದ ಎಳವಿಸಿಲ್ ಬೆಂಳ್ಗಪಿನ ಪೆಂಪು ಪಸರಿಸಿ ಮಾಗಿಯ ಬೆಳ್ಮುಗಿಲಂ ಪೋಲ್ವ ಪೊಚ್ಚ ಪೊಸ ರಂಗಿಸಿಂ ವಿರಾಜಿಸೆ ಭಸಿತೋದ್ಧೂಳೀಲಸಿತ ಲಲಾಟದೊಳ್ ತಿಲಕಂ ಕಣ್ಗೆಸೆಯೆ, ಕೊರಳ ಹಾರಂಗಳುಂ ಘಮಘಮನೆ ಪರಿಮಳಿಸೆ ಬಾಲಕಂ ಎಳಯ ಮನ್ಮಥನವೊಲೊಪ್ಪಿದಂ. ಮುನಿವರ್ಯಂ ಮುದ್ದು ಮೊಗದೊಳ್ ಕಣ್ಣಿಟ್ಟು ಮರುವಾತಿನೊಳ್ ಇಂತೆಂಗುಂ— ೧೩೦

ಎಲೆ ಕಂದ ! ನಿನಗಂ ಅನನ್ಯಸಲ್ತು. ಎಲ್ಲ ಮುನಿಋಷಿಗಳಂ ನಿಚ್ಚಂ ಸಜ್ಜನರ್ಗೆ ಬಂಧುಗಳಲ್ತೆ? ಪಯೋಷ್ಣೀತಟಿಯಟವಿಯೊಳ್ ಪರ್ಣಕುಟಿಗಳಂ ನಿರ್ಮಿಸಿ ನಾಡೆನೆ ಎಲ್ಲರೊಂದಿಗೆ ಬಾಳ್ದು ತಪಶ್ಚರ್ಯದಿಂ ಆತ್ಮೋದ್ಧಾರಗೈವೊಂದು ಸಾಧನೆಯಿರ್ದೊಡಂ ಮಿಕ್ಕಿನ ತಕ್ಕಿನ ಪೊಳ್ತಿನೊಳ್ ಲೋಗರ್ಗೆ ಬಿಜ್ಜೆಯಂ ಕಲಿಸಿ ಲೋಕೋದ್ಧಾರಂಗೆಯ್ವ ನಿಚ್ಚದುಜ್ಜುಗಂ ನಮಗಿರ್ಕುಮೆಂಬುದು ನೀನರಿತಿರ್ಪೆಯಲ್ತೆ ?

ಅಭಿಮನ್ಯು—ಅಹುದು ಗುರುವರ್ಯ.

ಮುನಿವರ್ಯ—ಈಯೆಡೆಯೊಳ್ ದುಷ್ಟಮೃಗಂಗಳ್ ಋಷ್ಯಾ ೧೪೦ ಶ್ರಮಂಗಳ ಪುಣ್ಯಪ್ರಭಾವದಿಂ ನಿರ್ವೈರದೊಳ್ ಬರ್ದುಕುವುದಂ ನೀಂ ಕ್ಷಾತ್ರಕುಲಜರ್ ಕಂಡು ಕಾಣುತುಂ ಜೀವನಮುಚಿತಮಾದ ಗುಣಧರ್ಮಂಗಳನರಿತುಂ ಸ್ನೇಹದಿಂ ಬಾಳ್ದೊಡೆ ಈಯೊಂದು ಬಿಲ್ಬಿಜ್ಜೆಯ ಪುರ್ಚುಂ, ರಾಜ್ಯದ ಗೀಳುಂ, ಯೌವನ ಮದಂ ರಾಜಾಧಿರಾಜರ ಬುದ್ಧಿಯಂ ಕೆಡಿಸಲಕ್ಕುಮೆ ? ಎಲ್ಲರ್ ನಿಚ್ಚಂ ಹದನರಿತು ಲೋಕೋಚಿತಮಾಗಿ ನಡೆದೊಡೆ ದ್ವೇಷಮಿಲ್ಲಂ; ಜುದ್ಧಮಿಲ್ಲಂ ; ಏಗಳುಂ ಸತ್‌ಶಾಂತಿಯೊಳಿರ್ಕುಂ ಜೀವನಂ.

ಅಭಿಮನ್ಯು–ಮುನಿವರ್ಯ ಇದನೊಬ್ಬಿಬ್ಬರ್ ಅರಿತೊಡೆ ಸಾಲ್ಗುಮೆ ? ಎಲ್ಲರುಂ ಧರ್ಮ ಕರ್ಮಂ ಪಾಲಿಸಿದೊಡೆ ಒಳ್ಳಿತಕ್ಕುಂ ಅಂತಲ್ಲದೊಡೆಲ್ಲಿಯ ಶಾಂತಿ ? ೧೫೦

ಮುನಿವರ್ಯ–ಅಹುದು ಕಂದ ! ಲೋಕದೊಳ್ ಏನಾಗಲಕ್ಕುಮೊ ಅದಂ ತಪ್ಪಿಸಲಾರಿಗಳವುಂ ? ಇಂತಿದೆಲ್ಲಂ ಬಿದಿಯ ಪೊಲ್ಲಾಟಮಲ್ತೆ ?

ತರುವಾಯೊಳ್ ಈರ್ವರಲ್ಲಿಂದಂ ತಂತಮ್ಮ ಹಾದಿಯಂ ಪಿಡಿದರ್, ಪರಸ್ಪರಂ ನಲ್ಮೆಯಿಂ ಬೀಳ್ಕೊಂಡು. ಅಭಿಮನ್ಯು ಬೀಡಿನಂಗಣಕ್ಕೈದಿ ಓರಗೆಯವರಂ ಕಂಡು ತನಗೊದವಿದ ಮುನಿವರ್ಯನ ಅಪೂರ್ವಮಪ್ಪ ಭೇಟಿಯಂ ತಿಳುಪಿದನಂತರಂ ಘಟೋತ್ಕಚಂಗೆ ಬಿಲ್ಲನಾರಿಯಂ ಸೆಳೆವುದುಂ ತೋರುತುಂ--ಬಿಲ್ವಿಜ್ಜೆ ಬಲ್ ಸೂಕ್ಷ್ಮಂ, ಗದೆಯಂತಲು ಕಣಾ ! ೧೬೦

ಕೃಪಾಳು–ಬೀರಂಗೆ ತಿಳಿಪಿಕುಡುವ ಕತಮಿಲ್ಲಂ. ನೋಳ್ಪನಿತರೊಳ್ ಮನಗೊಳ್ವಂ.

ಘಟೋತ್ಕಚಂ–ಅಂ ಗದಾಯುದ್ಧದೊಳ್ ಮನವಿಟ್ಟೊಡಂ ನಿಮ್ಮೊಳ್ ಕಲೆತು ಆವುದಾವುದೋ ವಿದ್ಯೆ ಕರಗತವಾಗಿ ಗದಾಭ್ಯಾಸದ ಪುಚರ್ಚ ಕೋಳುವೋಯ್ತು !

ಆ ಮಾತಿಂಗೆಲ್ಲರುಂ ಮೊಗದೊಳ್ ಪರಿಹಾಸ್ಯದ ನಗೆಯಂ ಸೂಸಿ ಸೂಟಿಯಿಂ ಪಾಟಿಯಿಂ ಕೀವಿಯಿಂ–ಎಲೆಲೆ, ಘಟೋತ್ಕಚ ! ಮತ್ತೇಂ ಬಿಲ್ ಬಿಜ್ಜೆಯೊಳ್ ಪಿಂದುಳಿದೆ ?

ಘಟೋತ್ಕಚ-ಈಯೊಂದು ನಿಮಿತ್ತಮೆ ಸಾಕಾಯ್ತೆ ? ಪೆಂಬೇಡಿಯಂತೇತು ಪಳಯೆ. ಬಿಡಿ, ಬಿಡಿಂ. ಆನಾವುದಂ ಕೈಕೊಂಡೊಡಂ ಪಿಂದುಳಿಯೆಂ. ಇದೋ ತೋರ್ಪೆನೆನ್ನ ಶಕ್ತಿಯಂ. ಎಲ್ಲರ್ ಸರಿದು ನಿಲ್ಲಿರೈ. ೧೭೦

ಅಭಿಮನ್ಯು—ಎಲ್ಲರೆಂದುದು ಪರಿಹಾಸದಿಂದಲ್ತೆ ? ಅದಕ್ಕೇ ಕಿಂತು ಉಬ್ಬೆಗಂ, ಸಾಸಂ !

ಘಟೋತ್ಕಚಂ—ಇರಿರ್. ಇದುಬ್ಬೆಗಮಲ್ತು. ಇಂದೆನ್ನ ಭುಜಬಲಮಂ ತೋರಲ್ ಸಂದುದೀ ಅವಕಾಶಂ. ಇದನೇಕಾಂ ಕಳೆಕೊಳ್ವೆಂ ? ಎಂದಬಳಿಕ್ಕಂ ಘಟೋತ್ಕಚಂ ಬಿಲ್ಲನಾರಿಯಂ ಜೇವೊಡೆಸಲ್ ದಶದಿಶೆಗಳುಂ ಭೋಂಕನೆ ಮೊರೆದನಿಗೈದುವು ಬೆರ್ಚಿ ಗಾರೆಲ್ದವೊಲ್. ಎಲ್ಲರುಂ ಕಟ್ಟಚ್ಚರಿಯಿಂ ಕಣ್ಮಿಟುಕಿಸದೆ ನೋಡುತಿರೆಯಿರೆ ಆಕರ್ಣಾಂತಂ ಸೆಳೆದುವಿಟ್ಟ ಬಾಣಂ ಗುರಿ ೧೮೦ ಮುಟ್ಟೆ ಗರಿಗೊಂಡಂತೆ ಮುಗಿಲೊಟ್ಟೆಯಂ ಬೊಕ್ಕು ಕಣ್ಮಾಯಮಾದುದು ಚಣದೊಳ್. ಮತ್ತಂ ಬೇರೆಬೇರೆ ಆಯುಧಂಗಳಂ ಕೈಕೊಂಡು ಪುರುಪಿನಿಂ ಪುರುಡಿನಿಂ ತೋಳ್ವಲವಂ ತೋರ್ದು ಜಯಭೇರಿಯಂ ಬಾರಿಸಿ ಮತ್ತಂ ಗದೆಯಂ ಕೈಕೊಂಡು ಗಿರಗಿರನೆ ತಿರುಗಿಸುತಂ ಪೆರ್ಮರನಂ ಪೊಯ್ದು, ಕದಳಿಯಂ ಅಪ್ಪಳಿಸಿ, ಕರ್ಬಂಡೆಯಂ ತಾಗಿ ದಶದಿಶೆಗಳಿಂಗೆ ದಾಳಿಯಿಟ್ಟು ಕೆಚ್ಚಿನಿಂ ಪುರ್ಚಿನಿಂ ಜಿಗಿದಾಡಿ ಚೆರ್ಚುವನಿತು ಚೆರ್ಚಿ ಸರ್ವ ಸಾಹಸಮಂ ತೋರ್ದು ಗೆಳೆಯರ್ ನಿಂದೆಡೆಯೊಳ್ ಬರಸಿಡಿಲ್ ಬಂದೆರಗಿದಂತೆ ಭೋಂಕನೆ ದುಮ್ಮಿಕ್ಕಿ ಗದೆಯನಪ್ಪಳಿಸಿದಂ ಕಿರೆಗೆ.

ಎಲ್ಲರುಂ ಸಂತಸವಟ್ಟು ಚಪ್ಪಳೆಯಿಕ್ಕುತುಂ—ಭಲೆ ! ಭಲೆ ! ೧೯೦ ಘಟೋತ್ಕಚ !

ಕೃಪಾಳು—ನಲ್ ಹೋ ! ನಲ್ ಹೋ !

ಅಭಿಮನ್ಯು—ಭಳಿರೆ ! ಘಟೋತ್ಕಚ ! ನಿಚ್ಚಮಭ್ಯಾಸಮಿಲ್ಲದೆ ರಣವಿಜ್ಜೆಯುಂ ಇಂತೊಂದು ಕುಂದಿಲ್ಲದೊಲ್ ತೋರ್ದುದು ಸಾಮಾನ್ಯಮಲ್ತು. ನೀನಹುದು ಭೀಮರ ಭೀಮಂ ! ಭೂಮರ ಭೂಮಂ !

ಘಟೋತ್ಕಚಂ ಆ ಮಾತಿಂಗೆ ಪುರುಪುಗೊಂಡು ಮೊಗ
ದೊಳ್ ತಿಳಿನಗೆಯುಂ ತೀವಿ-ಅಹಹ! ಎನ್ನಂ ಏನುಮೇನೆಂದು
ಭಾವಿಸಿರ್ದಿರ್ರೈ ಅಣ್ಣಗಳಿರಾ! ಇವಂ ಬರೀ ಪುಡುಗು ಬುದ್ಧಿಯ
ಹುಲು ಮನುಜನೆಂದಲ್ತೆ? ಇದೊ, ಆನೊರ್ಮೆ ಗದೆಯುನೆತ್ತಿ ೨೦೦
ದೊಡೆ ನೂರ್ವರನೊಟ್ಟಗೆ ದಿಂಡುರುಳ್ಚುವೆಂ ಕಾಣ್! ಕಡಿ
ಗತ್ತಿಯುಂ ಕೈಕೊಂಡೆನಾದೊಡೆ ಪುಲ್ಲಂ ಕೊಯ್ವಂತೆ ಅರಿಗಳ
ತಲೆಯುಂ ತರಿದೀಡಾಡುವೆಂ! ಬಿಲ್ಲಂ ಕೈಕೊಂಡೊಡೆ ಬಿಲ್ಗೋಜರಂ
ಲಟಲಟನೆ ಒಣಕಡ್ಡಿಯೊಲ್ ಮುರಿದಿಕ್ಕುವೆಂ! ಎಲ್ಲರುಮಿದಂ
ಮನದೊಳ್ ತಿಳಿದಿರ್ಕುಂ!

ಕೃಪಾಳು—ನಿನ್ನ ಬೀರತನಮಾರ್ಗೆ ತಿಳಿಯದೈ ಘಟೋತ್ಕಚ!

ಅಭಿಮನ್ಯು—ನೀಂ ವೀರಾತಿವೀರನೆಂಬುದರೊಳ್ ಸಂದೆಯ
ಮಣಮಿಲ್ಲೈ.

ಆ ವೇಳೆಯೊಳ್ ಭೀಮಸೇನನುಂ ಅಲ್ಲಿಗೆಯ್ತಂದು ಎಲ್ಲರಂ
ಸಂತಸದಿಂ ಕಣ್ತುಂಬ ನೋಡುತುಂ ಪೊಚ್ಚ ಪುರುಡಿಂ ನಲ್ಮೆಯಿಂ ೨೧೦
ಬಲ್ಮೆಯಿಂ ಇಂತಿದೇಂ ಈಯೊಂದು ಕೂಟಂ ಬೇಟಂ? ಎಂದೆನುತ್ತೆ
ಗದೆಯಂ ಭುಜದಿಂದಿಳುಪಿ ಮತ್ತಿಂತೆಂಗುಂ—ಎಲೆ, ಕುಲಪ್ರದೀಪಂ
ಗಳಿರಾ! ಇಂತಿದೇಂ ಕಡುಸಡಗರದ ರಣಬಿಜ್ಜೆಯುಜ್ಜುಗದ ಬಡಿ
ವಾರಂ? ಇಂತಪ್ಪ ಮೋದದಿಂ ನೆರೆಮೆರೆದೊಪ್ಪುವ ಎಳತನದೊಳ್
ರಣವಿಜ್ಜೆಯುಂ ಕೈಕೊಳ್ವುದು ಕ್ಷಾತ್ರಧರ್ಮಂ ಗಡ! ಪೆರ್ಮೆಯುಂ
ಗಡ! ನಿಮ್ಮೆಲ್ಲ ಬಿಜ್ಜೆ ಯುಜ್ಜುಗಕ್ಕೆ ಶುಭಮಕ್ಕೆ, ಜಯಮಕ್ಕೆ!

ಘಟೋತ್ಕಚಂ ಪೆರ್ಮೆಯಿಂದುರ್ಬಿ—ಆಂ ಸಕಲ ರಣ
ಬಿಜ್ಜೆಯುಂ ಬಲ್ಲೆಂ ಅಯ್ಯ!

ಭೀಮಸೇನಂ—ಭಲೆ! ಭಲೆ!

ಒಡನೆ ಪುರುಡುಪೆತ್ತ ಘಟೋತ್ಕಚಂ ತನ್ನಯ್ಯನ ಗದೆಯುಂ ೨೨೦
ಗಿರಗಿರ್ರನೆ ತಿರುವುತುಂ ಸುತ್ತಲೆಲ್ಲೆಡೆಯುಂ ಜಗಿದಾಡಿ ಶತ್ರುವಂ

ಪೊಯ್ವಂತೆ ಗಾಳಿಯಂ ಪೊಯ್ದು ಚೆರ್ಚಿ ಪರ್ದಿಂಗೆ ಬಿರ್ದಿಕ್ಕುವ ಸಾಸವಂ ತೋರ್ದು ಅಟ್ಟಹಾಸದಿಂ ತಂದೆಯಂ ಕುರಿತೀತೆಂಗುಂ–ಅಯ್ಯ, ಕೇಳ್! ಇನ್ನುಂ ಎನಿತೆನಿತು ಪಗೆಗಳುಂ ಕೂಳರುಂ ದುಷ್ಟರುಂ ಬಂದೊದವಿದೊಡಂ ಕೊಚ್ಚಿ ಕಂಡರಿಸದೆ ಬಿಡೆಂ. ಇಂತಪ್ಪ ಪೆರ್ ಗದೆಯುಂ ಭಾರಮಲ್ತು. ಪುಲ್ಕಣೆಯಂ ಕೈಕೊಂಡ ವೊಲ್ ಜುದ್ದಮೆಸಗುವೆಂ. ಬೊಮ್ಮರಕ್ಕಸರ್ ಸಾಯಿರ ಸಾಯಿರ ಸಂಖ್ಯೆಯೊಳ್ ಬಂದಿದಿರ್ಚಿದೊಡಂ ಪಿಂಜರಿಯದೆ ಮುಂಡೆಯಂ ದಿಂಡುರುಳ್ಚುವನಿತು ಬಲ್ಪಂ ಸಾಸಂ ಧೈರ್ಯಂ ಎನ್ನ ಟೆಯೊಳಿರ್ಕುಂ!

ಭೀಮಸೇನಂ–ಭಲೆ ! ಕುವರ ! ೨೩೦

ಆಣುಗರ್–ಓಹೋಹೋ ! ಭೀಮ ಶಕ್ತಿಯ ಭೂಪ !

ಅಭಿಮನ್ಯು–ಇಂತಪ್ಪ ಶಕ್ತಿ ಸಾಮಾನ್ಯಮಲ್ತು.

ಭೀಮಸೇನಂ ತಲೆಯಂ ತೂಗುತ್ತೆ, ಪೆರ್ಮೆಯಿಂ–ದಿಟಂ. ಈ ಪೆರ್ ಗದೆಯಂ ನಿನ್ನಂತೆಳೆಯರ್ಗೆ ಕೈಕೊಂಡೆತ್ತಿ ಪ್ರಯೋಗಿಪುದು ಕಡು ಕಷ್ಟಂ. ಇಂತು ಲೀಲಾಜಾಲದೊಳೆತ್ತಿರೆ ನೀಂ ಪಿರಿಯರ್ಗೆ ಸಮಂ; ಸರಿಸಮಂ.

ಘಟೋತ್ಕಚಂ–ನಾವೆಲ್ಲರುಂ ಕೂಡಿ ಪಗೆಗಳಂ ಕೂಳ ರಕ್ಕಸರಂ ಕಾಳ್ಕಿರ್ಚಿನೊಲ್ ತಾಗಿ ಕಾದಿ ಮೋದಿ ಎದುರ್ಚಲಕ್ಕುಂ. ಎಲ್ಲರುಂ ತೋಳ್ವಲರಿರ್ದೊಡೆ ಸೊರ್ಕಿನ ಕೊರ್ವಿನ ಅರಿ ಕುಲಜರ್ ಎದುರ್ ನಿಲ್ವರೇಂ ? ೨೪೦

ಭೀಮಸೇನಂ–ಸಾಧು ! ಸಾಧು !

ಅನಂತರಮಾ ಭೀಮಸೇನಂ ಚಿಣ್ಣರ ಮುಂಡೆಯಂ ನೇವರಿಸಿ ಬೆರೀಳ್ಕೈಸಿ ಪುರುಪಿತ್ತು ಮುದದಿಂ ನಲ್ಮೆಯಿಂ–ಎಲ್ಲರುಂ ನಿಚ್ಚಂ ಕಟ್ಟ

ಭ್ಯಾಸಂಗೈದು ಬೀರರಕ್ಕೆ ! ಸಿಂಗನೆಂತಂತು ಕಾಡಾನೆಯೆಂತಂತು ಬಲ್ಪುಳ್ಳರಕ್ಕೆ !

ಭೀಮಸೇನಂ ಮುದ್ದಿನಿಂ ಪೆರ್ಮೆಯಿಂ ಅಭಿಮನ್ಯುವಿನ ತಲೆಯೊಳ್ ಕೈಯಿಕ್ಕಿ–ಕಂದ! ನಿನ್ನ ಮುಂದಾಳ್ತನದಿಂ ಬಲಿತುಂ ಎಲ್ಲರ್ ಬಲ್ಪಿನ ಬಿಜ್ಜೆಯುಜ್ಜುಗದೊಳ್ ಇಂ ನುರಿತುಂ ಬಲಿತುಂ ಸಿಸ್ಸಿಮರಕ್ಕುಂ!

ಅಭಿಮನ್ಯು ಮೈವೆರ್ಚಿ ಪುಳಕಿತನಾಗಿ ಪುರುಪುಗೊಂಡು ಮೂಡಿಗೆಯುಂ ಬಗೆವಗೆಯ ವಿಶಿಖಾವಲಿಯುಂ ಕೈಕೊಂಡು ೨೫೦
ಬಿಲ್ಗೋಜೆಯುಂ ದಿಟ್ಟತನದಿಂ ತೋರುತಿರಲೊಡಂ ಭೀಮಸೇನಂ ಮನದುಂಬಿ ಒಡಲ್ದುಂಬಿ ಸಂತಸಂವೆರ್ಚಿ ಇಂತೆಂದಂ–ವತ್ಸ ! ಮೆಚ್ಚಿದೆಂ ? ಇಂತಿರ್ಕುಂ ಬಿಲ್ಲಾಳ್ತನದ ಬೀರರ್! ನೀನಪ್ಪೆ ಅರಿರಕ್ಕಸರ ಗಂಡಂ! ನಿನ್ನ ಬಲ್ಪು ಧೈರ್ಯಮೆರಡುಂ ಲೋಕೋತ್ತರಂ !

ಅಭಿಮನ್ಯು–ನಿಮ್ಮ ಪಡೆಯೊಳ್ ಎಲ್ಲರಕ್ಕುಂ ಬಲ್ಪಿನ ಬೀರರ್ !

ಭೀಮಸೇನಂ–ಇನ್ನೇಂ ಕುರುಕ್ಷೇತ್ರಂ ರಣಬೆಂಕೆಯೊಳ್ ರಣರಣಿಸಲಕ್ಕುಂ. ಅನಿತರೊಳ್ ನೀಮೆಲ್ಲಂ ಬಲ್ಪಿನ ಬಿಜ್ಜೆಯುಜ್ಜಗದೊಳ್ ಸಜ್ಜುಗೊಂಡಿರ್ದೊಡೆ ಭಾರತ ಕಥಾವಳಿ ಇರ್ಪನ್ನೆಗಂ ೨೬೦
ನಿಮ್ಮ ವಂಶ ಕೀರ್ತಿ ಕಳಸಂ ಬೆಳಗುಗುಂ, ಮೂಲೋಕದೊಳ್.

ಆಗಳ್ ಘಟೋತ್ಕಚಂ ಕಡುಕೆಚ್ಚಿನಿಂ ಕಣ್ಣೊಳ್ ಕಿಚ್ಚಿನ ಕಿಡಿಗಳಂ ಕಾರ್ದು–ನಿಶ್ಚಯಂ! ಆಂ ಅರಿಗಂಡರ ರುಂಡಮಂ ಕೊಚ್ಚಿ ಕಂಡರಿಸಿ ಸೆಂಡಾಡದಿರ್ದೊಡೆ ಘಟೋತ್ಕಚನೆಂಬ ಪೆಸರಂ ಸುಡಲಕ್ಕುಂ !

ಎಲ್ಲರುಂ ಚಪ್ಪಳೆಯಿಕ್ಕಿ ಒಕ್ಕೊರಲಿಂ–ಭಳಿರೆ! ಘಟೋತ್ಕಚ!

ಭೀಮಸೇನಂ–ಮಕ್ಕಳಿರಾ ! ಇದರೊಳ್ ಎನಗಂ ಸಂದೆಯ ಮಣಮಿಲ್ಲಂ. ಶುಭಮಕ್ಕೆ ಎಲ್ಲರ್ಗೆ !

ಅಭಿಮನ್ಯು–ನಿಮ್ಮ ಪರಕೆಯಿಂ ಸಲ್ವುದೆಮ್ಮ ಬಲ್ಪಂ ಕುರುಕ್ಷೇತ್ರಕ್ಕೆ. ೨೭೦

ಭೀಮಸೇನಂ–ಕಟ್ಟುರದ ಕಟ್ಟಾಳಿರ್ಕ್ಕುಂ, ಸಿಡಿಲ ಪೊಡರ್ಪು ತೆಕ್ಕುವಂತು ಕಾಣ್ ! ಪಗೆಗಳ ಕಿಚ್ಚಿಗಂ ಚಲಕಂ ಬಲಕಂ ಬೀರಕಂ ಗಂಡುಗಲಿತನಕಂ ಕಪಡು ಬಿಜ್ಜೆಗಂ ಕಾಳ್ಗಿಚ್ಚಿರ್ಕೆ ಎಳತನಂ ಸಲ್ಲದು ಕಾಣ್. ಎಳತನದ ಪುರುಡುಂ ಪುರ್ಚುಂ ನಿಚ್ಚ ನಿಜ ಬಲ್ಪಿನೊಳಕ್ಕುಂ. ನೀಮುಂ ಕಾಣದಾ ಮಾಯದಾವು ಎನಿತೆಸಿತೊ ಇರ್ಕು ಈ ತಿರೆಯೊಳ್. ಶಕ್ತಿಯಿಂದಾಗದುದಂ ಯುಕ್ತಿಯೊಳ್ ಮೋಸದೊಳ್ ಅಧರ್ಮದೊಳ್ ಕೈಗೂಡಿಪರ್ ದುಷ್ಟರ್. ಜುದ್ದಂ ಬರಿದೆ ಪುಟ್ಟುಗುಮೆ ? ದುಷ್ಟರ್ ದುರುದುಂಬಿಗಳ್ ಅತಿ ಸುಖ ಭೋಗಂಗಳಿಗಾಸೆಬಡುತುಂ ಆನ್‌ತಾನೆಂಬೊಂದು ಜಿಮೆಯಿಂ ಕಟ್ಟುರದ ನಿಟ್ಟುರವ ಕಡುಕಾಯ್ಪಿನಿಂ ಕಳ್ವ ಕೊಲ್ವ ಕೀಳ್ತನದ ಕೀಳರಿಮೆಯೊಳ್ ಕೆಟ್ಟು ಕೋಳುವೋಪುದಂ ಅರಿಯದವರಾರ್ ? ಧರ್ಮಮಂ ಕಡೆಗಣ್ಚಿ ಬಿಸಿನೆತ್ತರುಬ್ಬಟೆಯಿಂ ಮುನ್ನುಗ್ಗಿದೊಡೆ ಹರಣಂ ನಷ್ಟಂ. ಎಂದಿರ್ದೊಡಂ ಸತ್ಯಕಿರ್ಕುಂ ಜಯಂ. ಸತ್ಯಮೊಂದೆ ಗೆಲ್ಗುಂ ಲೋಕದೊಳ್. ೨೮೦

ಘಟೋತ್ಕಚಂ–ಆಯ್ತು, ನಮ್ಮಾ ಬಿಜ್ಜೆಯುಂ ನಿಚ್ಚಂ, ನಮ್ಮಾ ಅಭ್ಯಾಸಂ ನಿಚ್ಚಂ, ನಮ್ಮಾ ಪುರುಡುಂ ನಿಚ್ಚಂ !

ಎಲ್ಲರುಂ–ಫೇ ! ಘಟೋತ್ಕಚ !

ಅಭಿಮನ್ಯು–ನಾವಿನ್ನು ಕಿರುಮೆರಳ ಚಲಕಮಂ ತೋರ್ದೆವಿಲ್ಲಂ, ಆಗಳೆ ಸಂಭ್ರಮಂ !

ನಸುದೂರದೊಳ್ ಬನಗಾಳಿಯು ಸುಯ್ಗೊರಲ್ ಸೋರ್ದು ೨೯೦

ಪೊದಳ್ದುದೊ ಎನೆ ಕಿವಿಯಂ ಕಿಟ್ಟಿದುದು 'ನಾರಾಯಣ ! ನಾರಾಯಣ !' ಎಂದೆಂಬ ಚೆನ್ನುಡಿ. ಒಡನೆಲ್ಲರ್ ಪಿಂತಿರುಗಿ ಬೆಂಗಡೆಯ ವನಪಥದೊಳ್ ಕಣ್ಣಿಟ್ಟು ನೋಡಲ್ಕೆ ಮೆಲ್ಲನೈತರುತಿರ್ದ ದೇವಮಹರ್ಷಿ ನಾರದಂ ಕಣ್ಗೆಸೆದಂ. ತೇಜಃಪುಂಜ ಮೊಗದೊಳ್ ಸಂತಸದ ಬೆಳ್ನಗೆಯುಂ ಪರಿದುದು ಬೆಳದಿಂಗಳ ವೊಲ್.

ಭೀಮಸೇನಂ ತಲೆವಾಗಿ ಭಕ್ತಿಗೌರವದಿಂ-ನಮಿಸುವೆಂ ಗುರುವರ್ಯ.

ನಾರದ ಮಹರ್ಷಿ-ನಾರಾಯಣ ! ನಾರಾಯಣ !

ಕಿರಿಯರ್ ಒಗ್ಗೂಡಿ ತಲೆವಾಗಿ ಗೌರವಂತೋರ್ದು-ಶ್ರೀ ಗುರುಭ್ಯೋನಮಃ ! ೩೦೦

ನಾರದ ಮಹರ್ಷಿ-ನಾರಾಯಣ ! ನಾರಾಯಣ ! ಎಲ್ಲರ್ಗಂ ಶುಭಮಕ್ಕೆ ! ಜಯಮಕ್ಕೆ !

ಭೀಮಸೇನಂ-ಕುಶಲಮೆ ಗುರುವರ್ಯ ?

ನಾರದ ಮಹರ್ಷಿ-ಕುಶಲಂ.

ಕಿರಿಯರ್-ತಾವಿಗಳಿಲ್ಲಿಗೆಯ್ತಂದುದೆಮ್ಮ ಮಹಾಭಾಗ್ಯಂ.

ನಾರದ ಮಹರ್ಷಿ-ನಾರಾಯಣ! ನಾರಾಯಣ! ನಾರಾಯಣ!

ಕಿರಿಯರ್- ತಮ್ಮಾಶೀರ್ವಾದವೇಳ್ಕುಂ. ನಾವೆಲ್ಲರ್ ಬಿಜ್ಜೆಯಾರ್ಜನೆ ಕೈಕೊಂಡ ಪದದೊಳ್ ತಮ್ಮ ಸಂದರ್ಶನಮಂ ಪಡೆಕೊಂಡುದೆಮ್ಮ ಪುಣ್ಯಂ. ೩೧೦

ನಾರದ ಮಹರ್ಷಿ-ನಲ್ಮಕ್ಕಳೇ ! ಪಾಂಡುಕುಲಪ್ರದೀಪಕರೇ! ನೀವೆಲ್ಲರ್ಗಂ ಮೇಲಕ್ಕೆ ! ಕಲಿತನದಿಂ ಜಾಣ್ಮೆಯಿಂ ಬಿಜ್ಜೆಮಂ

ಕಲ್ತು ಜಗಜಟ್ಟಿಗಳಕ್ಕೆ! ತ್ರಿಲೋಕ ಬೀರರಕ್ಕೆ! ಕುಲ ಕಳಸಮುಂ ಬೆಳಗಲಕ್ಕೆ !

ಕಿರಿಯರೆಲ್ಲರುಂ ತಲೆವಾಗಿ ಅಡ್ಡಬಿಳ್ದು—ತಮ್ಮಹಾರೈಕೆಯುಂ ಫಲಿಸುವಂತೆಮ್ಮಂ ಪರಸಿಂ.

ನಾರದ ಮಹರ್ಷಿ—ನಾರಾಯಣ! ನಾರಾಯಣ! ಒಳ್ಳಿತಕ್ಕೆ! ಶುಭಮಕ್ಕೆ !

ಭೀಮಸೇನಂ—ಮುನಿವರ್ಯ, ಎಲ್ಲಿಂದಿತ್ತ ನಿಮ್ಮ ಪಯಣಂ?

ನಾರದ ಮಹರ್ಷಿ—ಮಥುರಾ ನಗರಿಯಿಂ. ३२०

ಭೀಮಸೇನಂ—ಮಥುರಾನಗರಿಯೊಳೆಲ್ಲರುಂ ಕುಶಲಮೇಂ ?

ನಾರದ ಮಹರ್ಷಿ—ಅಹುದು ಭಾರತ ! ಇನಿತರೊಳೆ ಶ್ರೀ ಬಲರಾಮಂ ವಿಶ್ವಪರ್ಯಟನೆಯಂ ತೀರ್ಚಿ ಪಿಂತಿರುಗಲಿರ್ಪ ನೆಂದು ಸುದ್ದಿಯುಂ ಪರ್ವಿ ಎಲ್ಲರುಂ ಆನಂದಾಬ್ಧಿಯೊಳ್ ಮುಳುಂಗಿ ಓಲಾಡುತಿರ್ಪರ್.

ಭೀಮಸೇನಂ—ಓ ಅಂತೇಂ ?

ನಾರದ ಮಹರ್ಷಿ—ಅಪ್ಪುದು. ಶ್ರೀಕೃಷ್ಣ ಪರಮಾತ್ಮಂ ಅಗ್ರಜನ ಆಗಮನದಾಂಕ್ಷೆಯಿಂದೆ ಪುರ ಶೃಂಗಾರದೊಳ್ ಮನ ವಿಟ್ಟಿಹನ್. ಅನಂತರಮಾ ಶ್ರಿಕೃಷ್ಣ ಪರಮಾತ್ಮಂ ಇತ್ತಲುಂ ಪಯಣಿಸಲಿರ್ಪಂ. ३३०

ಭೀಮಸೇನಂ—ಮುನಿವರ್ಯ, ಇತ್ತಣ ಮತಿಗೆಟ್ಟ ಬಾರ್ತೆಯುಂ ಏನೇಳ್ವೆನೊ, ಕುರುಕುಲಜರ್ ಒಡಲ್ಗಿಚ್ಚಿನ ರೊಚ್ಚಿನ ಕೋಪಾ ಟೋಪಮಂ?ನಾವಿನ್ನುಂ ಯುದ್ಧದೊಳೆ ರಾಜ್ಯಮಂ ಪಡೆವುದಲ್ಲದೆ ತಲೆವಾಗಿ ಸಂಧಾನದ ಸೊಲ್ಲೆತ್ತಿದೊಡೆ ಎಮಗಕ್ಕುಂ ಲಜ್ಜೆಗೇಡು !

ನಾರದ ಮಹರ್ಷಿ—ಕೇಳ್ ಭೀಮಸೇನ! ಅಂತೆಂದೊಡೆಂತೈ! ಪ್ರಜಾರಕ್ಷೆಗಂ ಲಜ್ಜೆಯಂ ತೊರೆಯವೇಳ್ಕುಂ. ಶಾಂತಿಯಿಲ್ಲದೆ ಪ್ರಜಾರಕ್ಷೆ ಎಂತಪ್ಪುದು ?

ಭೀಮಸೇನಂ ಬಗೆಗೆಟ್ಟೊಡಂ ನೆಚ್ಚುಗೆಡದೆ ಏರುದನಿಯೊಳ್—ಮುನಿವರ್ಯ, ನೋಡೆನ್ನೀ ತೋಳ್ವಲಂ! ಇಂತಪ್ಪ ಬಲ್ಪಿರ್ದು, ನೀತಿಧರ್ಮಂಗಳಿರ್ದು, ಬಾಧ್ಯತೆಯಿರ್ದು ಕೂಳರೊಳ್ ಪಾತಕಿಗಳೊಳ್ ಕೈಯೊಡ್ಡಿ ಬೇಡಿಕೊಂಬ ಪಾಡಿದೇಂ ? ಚಂಡಾಲರಂ ಕೊರ್ಚಿ ಕಂಡರಿಸಿ ಮುಕ್ಕಡಿಗೆಯ್ದು ಮೂದೆಸೆಯ ಜಕ್ಕಿಣಿ ಗುಳಕಂಗಳ್ಗೆ ಬಿರ್ದಿಕ್ಕಿದನಂತರಂ ಪ್ರಜಾರಕ್ಷೆಗೆಯ್ವೆಂ ; ಧರ್ಮರಕ್ಷೆಗೆಯ್ವೆಂ. ೩೪೦

ನಾರದ ಮಹರ್ಷಿ—ಏವೇಳ್ವೆನೊ, ನಿನ್ನ ಕೋಪಾಟೋಪದ ಜಂಕಣೆಗಂ! ಇಂತಪ್ಪ ರೊಚ್ಚಿರೆ ಶಾಂತಿಯೆಲ್ಲಿರ್ಕುಂ ? ಸಂತಸವೆಲ್ಲಿರ್ಕುಂ ? ನಿನ್ನ ಬಲ್ಪುಮಂ ಶೌರ್ಯ ಸಾಸಮಂ ಬಲ್ಲೆಂ, ಭೀಮಸೇನ! ರೊಚ್ಚಿನ ಕೆಚ್ಚಿನ ರಣಕೇಳಿಯುಂ ಎನಿತೊಂದು ಮುಂದಿಗೆ ಮರಣ ಶಾಸನಂ ಎಂಬುದಂ ನೀಂ ಪರ್ಯಾಲೋಚಿಸಲಕ್ಕುಂ. ೩೫೦

ಭೀಮಸೇನಂ—ಅದಂ ಕುರುಕುಲಜರ್ ಅರಿಯಲಕ್ಕುಂ.

ನಾರದ ಮಹರ್ಷಿ—ಧರ್ಮಜನೊಲವು ಶಾಂತಿಯತ್ತಲ್ತೆ ? ಶ್ರೀಕೃಷ್ಣಪರಮಾತ್ಮನುಂ ಶಾಂತಿಪ್ರಿಯಂ. ಎಲ್ಲರ್ ಅದಂ ಮನಗೊಂಡೊಡೆ ದೇಶ ಕ್ಷೇಮ ಮಕ್ಕುಂ.

ಭೀಮಸೇನಂ—ಅಂತೆಂದೊಡೆಂತೈ ಮುನಿವರ್ಯ? ಜುದ್ದಕ್ಕೆ ಮೊದಲ್ ಕಾರಣಂ, ಕುರುಕುಲಜರ್ ಮಣಿಯರ್ ಶಾಂತಿಸಂಧಾನಂಗಳ್ಗೆ, ಎರಡನೆಯ ಕಾರಣಂ ಇಲ್ಲದ ಸಲ್ಲದ ಶಾಂತಿಯಿಂ. ಇಂತಪ್ಪ ಪರಿಸ್ಥಿತಿಯರಿಕೆ ನಿಮಗಿರ್ಕುಂ.

ನಾರದ ಮಹರ್ಷಿ ತನ್ನೊಳ್ ಯೋಚಿಸಿ ಬಿದಿಯಾಟವಂ ನೆನೆದು–ಭೀಮಸೇನ, ಇದೆಲ್ಲಂ ದೈವದಾಣ್ಮೆಯಲ್ಲದೆ ಬೇರಲ್ಲಂ. ೩೬೦ ನೀನಿದರೊಳ್ ನಿಮಿತ್ತ ಮಾತ್ರಂ.

ಭೀಮಸೇನಂ–ನಿಕ್ಕುವಂ, ಮುನಿವರ್ಯ.

ನಾರದ ಮಹರ್ಷಿ–ನೀನೆಲ್ಲಮರಿತಿರ್ದೊಡಂ, ನಿನ್ನಂ ನೀನರಿಯಲಿಲ್ಲಂ.

ಭೀಮಸೇನಂ–ಎನ್ನರಿಕೆ ಈ ಗದೆಯೊಳ್ ಮುನಿವರ್ಯ ! ಗದೆಯಿರ್ದೊಡಾಂ, ಆನಿರ್ದೊಡೆ ಗದೆಯುಂ. ಒಂದನುಳಿದೊಂದಿರ್ದೊಡೆ ವ್ಯರ್ಥಂ. ಆರಾದೊಡಂ ಒರ್ಮೆಗೆ ನುಚ್ಚುನುರಿಯಾಗಿ ನೋಯದೆ ಬೇಯದೆ ಸಗ್ಗಮಡರವೇಳ್ಕುಮೊ ಅವರ್ಗಿದು ಶಾಂತಿ ಮಂತ್ರಂ !

ನಾರದ ಮಹರ್ಷಿ– ಬಿಡು, ಬಿಡು. ಎಂತಾದೊಡಂ ೩೭೦ ಸಾಯ್ವರ್ ಸಾಯಲಕ್ಕುಂ. ಬದುಂಕುವರ್ ಬದುಂಕಲಕ್ಕುಂ. ಬಿದಿಯಾಣತಿಗಾರೇಂಗೆಯ್ದಪರ್ !

ಆ ವೇಳೆಯೊಳ್ ಅಣುಗರ್ ತಂತಮ್ಮ ಮುಂಡಿಗೆಯಂ ಬಿಗಿದು ಬಿಲ್ಲಂ ಕೈಕೊಂಡು ಬೀಡಿಗೆಯ್ದರ್. ಕುಂತೀದೇವಿ ಕಂದರ ಪತ್ತೆ ಸಾರ್ದು ಮುದ್ದಿಟ್ಟು ಮುಂಡಾಡುತಿಂತೆಂಗುಂ–ಇನ್ನೆಬರಂ ಎಲ್ಲಿಗೈಯ್ದಿರ್ದಿರ್ಕೈ ಕಂದಂಗಳಿರಾ ? ಇಲ್ಲಾರಿಲ್ಲದೆ ಬೇಸತ್ತಿರ್ದೆಂ.

ಘಟೋತ್ಕಚಂ–ಕೇಳ್ ಮುತ್ತಬ್ಬೆ ! ನಾರದ ಮಹರ್ಷಿಗಳ್ ಐತಂದಿಹರಿಲ್ಲಿಗೆ. ನಾವೆಲ್ಲರ್ ಅವರಿಂದೆ ಆಶೀರ್ವಚನವಂ ಪಡೆದುದೊರ್ ವಿಶೇಷಂ !

ಕುಂತೀದೇವಿ–ಓ, ಎಲ್ಲಿಹರ್ ಮಗನೆ ? ೩೮೦

ಘಟೋತ್ಕಚಂ-ಎನ್ನಯ್ಯನೊಡಂ ಮಾತುಕತೆ ನಡೆಸಿಹರ್ ಕೊಳದಂಗಣದೊಳ್.

ಕುಂತೀದೇವಿ ಚಚ್ಚರದಿಂದತ್ತ ನಡೆದು ಮುನಿವರ್ಯನ ಪತ್ತೆ ಸಾರ್ದು ಭಕ್ತಿ ಗೌರವದಿಂ ತಲೆವಣಿದು ನಲ್ದನಿಯೊಳ್-ಮುನಿ ವರ್ಯ ! ಇದೇನಿಲ್ಲಿ ಮಾತಿನ ಕಜ್ಜಂ ? ಬೀಡಿಗುಯ್ಯದೆ ಅಂಗಣ ದೊಳಿರ್ಪುದು ತರವೇಂ ? ಈಗಳ್ ಬೀಡಿಗುಯ್ವುದ ಅರ್ಘ್ಯ ಪಾದ್ಯಂಗಳಂ ಸ್ವೀಕರಿಸಿದನಂತರಂ ಮಾತಿನ ಕಜ್ಜಂ. ಮುನಿ ವರ್ಯ ! ನಿಮ್ಮ ಪಾದಧೂಳಿಯಿಂದೆಮ್ಮ ಬೀಡುಂ ಪಾವನ ಮಕ್ಕುಂ, ಪದುಳಮಕ್ಕುಂ.

ನಾರದ ಮಹರ್ಷಿ ಸಂತಸದಿಂ ಪಡಿನುಡಿದನಿಂತು--ತಾಯೆ ! ೩೯೦ ಭೀಮಸೇನನಂ ಕಂಡಿಲ್ಲಿ ನಿಂದೆಂ. ಈಗಳ್ ನಿಮ್ಮೊಡನೆ ಬೀಡಿಂಗೆ ಬಂದಪೆಂ ಧರ್ಮಜನಂ ಕಾಣಲ್ಕೆ.

ಕುಂತೀದೇವಿ-ಅಕ್ಕೆ, ಮುನಿವರ್ಯ, ನಾಡಿಂ ನಾಡಿಂಗೆ ಪಯಣಂಬಂದ ಗತಿಯೊಳ್ ಎನಿತೆನಿತು ಬಳಲ್ಕೆಯಿರ್ಕುವೊ ಬೀಡಿ ನೊಳ್ ಮೂದಿನವಿರ್ದು ದಣಿವಾರಿಸಿಕೊಳ್ಳುವನಿತು ಕೃಪೆದೋರ್ಪೆ.

ಭೀಮಸೇನಂ ಪರಿಹಾಸ್ಯದಿಂ ಕಿರುನಗುಸೂಸಿ-ಇಂದು ಮೂಗಳಿಗೆಯಿರ್ದು ದಣಿವಾರಿಸಿಕೊಂಡೊಡೆ ಸಾಲ್ಗುಂ. ಅನಂತರಮಾ ಮೂದಿನಗಳ ವಿಚಾರಂ !

ನಾರದ ಮಹರ್ಷಿ-ತ್ರಿಲೋಕಸಂಚಾರಿಗಳಿಗೆಲ್ಲಿಯು ವಿಶ್ರಾಂತಿ?

ಆಗಳುಂ ಭೀಮಸೇನ ಕುಂತೀದೇವಿಯರೊಡಂ ಬೀಡಿನ ಬಟ್ಟೆ ೪೦೦ ವಿಡಿದಂ ನಾರದ ಮಹರ್ಷಿ. ಪಜ್ಜೆಪಜ್ಜೆಗುಂ ನಾರಾಯಣ ! ನಾರಾಯಣ! ಎನುತಂ ನೆಲೆವನೆಯ ಪಡಸಾಲೆಯಂ ಪುಗುತಂದಂ. ಮುನಿಯಂ ಕಂಡು ಧರ್ಮಜಂ ಪೀಠದಿಂ ದಿಗ್ಗನೆಳ್ದು ತಲೆವಾಗಿ ನಮಿಸಿ ಗೌರವದಿಂ ನಯಂ ಬೇಳ್ದು ಉಪಚರಿಸಿ ನಲ್ನುಡಿಯಿಂ-

ಇಂದೆಮ್ಮ ಭಾಗ್ಯಮೆ ಭಾಗ್ಯಂ. ಗುರುವರ್ಯ! ತಮ್ಮ ಪಾದ ಧೂಳಿಯಿಂದೆಮ್ಮ ಬಾಳ್ ಪವಿತ್ರವಾಯ್ತು; ಪಾವನವಾಯ್ತು.

ಕುಂತೀದೇವಿ ಅಹುದೆಂಬುವೊಲ್ ತಲೆಯಂ ತೊನೆದು ಧರ್ಮಜನಂ ನೋಡುತುಂ—ಈ ಕರ್ಮಗತಿಯೊಳ್ ಇಂದು ಸಿರಿ ವೊಳ್ತು ಎನಲಕ್ಕುಂ.

ಅನಿತರೊಳ್ ದ್ರೌಪದಿ ಸುಭದ್ರೆಯರ್ ಅರ್ಘ್ಯಪಾದ್ಯಂಗಳಂ ತಂದು ಮುನಿಯಂ ಉಪಚರಿಸಿ ಸತ್ಕರಿಸಿದರ್. ೪೧೦

ಕುಂತೀದೇವಿ—ನಮ್ಮಾ ಕರ್ಮಗತಿಯೇನಪಾರವೊ? ಏಂ ವಿರಿದೊ? ಅನುಗಾಲಂ ನವೆದೊಡಂ ಸವೆಯದೈ ಮುನಿವರ್ಯ. ಪಂಜರದ ಪಕ್ಕಿ ತನ್ನ ಮುನ್ನಿನ ವನರಾಜ್ಯದ ನಿಚ್ಚಸೊಗದ ಬಾಳ್ಕೆಯಂ ಮರೆತು, ದಿನದಿನಂ ಕೈಗೂಡಿದನಿತು ಪಾಲ್ಪಣ್ಗಳ ನಿಸಿದಿನಿದಾಗಿ ಸವಿದು ಸೊಗಂಬಡುತಿರ್ಪಂತೆ ಈ ಬಾಳ್ಕೆಗಡ!

ಧರ್ಮರಾಯಂ—ದುರಾಸೆ ದುರ್ಬುದ್ಧಿಗಳ್ಗೆ ಇದೊಂದು ತಡೆಗಟ್ಟೆಯಲ್ತೆ? ಜುದ್ಧಂ ಎನಿತು ದೂರವೊ ಅನಿತು ಶಾಂತಿಯಲ್ತೆ ಬರ್ದುಕಿಂಗೆ?

ಭೀಮಸೇನಂ—ಇಂತು ನಮ್ಮಿರವಂ ಲೆಕ್ಕಿಪರಾರ್ ಅಬ್ಬೆ? ೪೨೦ ಕುರುಕುಲಜರ ಮಾನಸ ಪ್ರಪಂಚಂ ಮಾಯದಾವಿಂ ತುಂಬಿ ಬಗೆವಗೆಯ ಭೋಗಭಾಗ್ಯಕ್ಕಾಸೆವಟ್ಟು ತನ್ನವರ ಸೊಪ್ಪುಸೊಗಡಂ ಅಪಹರಿಸಿ ಧರ್ಮದ್ರೋಹದಿಂ ದೈವದ್ರೋಹದಿಂ ಅಟ್ಟಹಾಸ ದಿಂದಿರ್ಪರ್. ಅಹಃ ಲೋಗರ ಲೋಕತೃಷ್ಣೆಗೆ ಅಡೆತಡೆಯುಂಟೆ? ಬಾಳ್ ಮುಗಿದೊಡಂ ಹೇರಾಸೆ ಅಳಿಯದೈ.

ನಾರದ ಮಹರ್ಷಿ— ಪ್ರಪಂಚಮೆ ಬಯಲಾಸೆಯೊಳ್ ಮುಳುಂಗಿರ್ಕುಂ. ಅದನರಿತುಂ ತಂತಮ್ಮ ಭಾಗ್ಯದೊಳ್ ಎಖೋಪವಿಷ್ಟನಪ್ಪುದೆ ಲೇಸಲ್ತೆ?

ಭೀಮಸೇನಂ ನಗುಮೊಗದೊಳ್–ಇಂತಪ್ಪ ವ್ರತದಿಂ ಇನಿತು ಗಾಲ ನವೆದು ನೋವುಂಡು ಸೋತು ಸುಣ್ಣವಾಗಿರ್ಪುದುಂ ತ್ರಿಲೋಕದರಿಕೆಯೊಳಿರ್ಕುಂ. ೪೩೦

ಧರ್ಮರಾಯಂ–ನಾಮುಂ ವನವಾಸಮಂ ಮುಗಿರ್ಚಿ ಬಂದೊಡಂ ಕುರುಕುಲಜರ್ಗೆ ಸಂತೃಪ್ತಿ ಇಲ್ಲದಿರ್ಪುದೊರ್ ದುಕ್ಕಂ. ಪಿರಿಯರ್ಕಳ್ ಕಣ್ಣಿರ್ದು ಕುರುಡರಂತಿರ್ಕೆ ಕೌರವರ್ ಮರುಳ್ಗಳಂತೆ ವೈರಮಂ ಸಾಧಿಪರ್.

ನಾರದ ಮಹರ್ಷಿ–ಲಾಲಿಸು ಧರ್ಮಜ ! ದೇಶದೊಳ್ ಅನೀತಿ ಅಧರ್ಮಂ ಮುಂಜೆಳೆದು, ಮಳೆ ಬೆಳೆಯುಂ ನಶಿಸಿ ಎಣೆಯಿಲ್ಲದಾದಿವ್ಯಾಧಿಕ್ಷಾಮಡಾಮರಂಗಳ್ಗೆ ಕೋಳುವೋಯ್ತು ಜೀವನಂ. ಈಗಳ್ತೆ ಕಲಿಕಾಲವೊದವಿದೊಲ್ ಮಕ್ಕಳ್ ಪಿರಿಯರಂ ಲೆಕ್ಕಿಸರ್ ; ಪೆಂಡಿರ್ ಹದಿಬದೆಯ ಧರ್ಮಮಂ ಕಡೆಗಣ್ಚಿಹರ್ ; ಆಳುಕಾಳುಂ ದುರುದುಂಬಿತನದಿಂ ಧಣಿಗಳಂ ತಲೆಗಿಡಿಸಿಹರ್. ಇಂತಿರವೊಂದು ಮಾಳ್ಕೆಯಿಂ ಎಲ್ಲಂ ಹದಗೆಟ್ಟಿರಲ್ ಏಂಗೈಯ್ಯಲಕ್ಕುಮೊ ಹರಿಹರಿ ! ಆನರಿಯೆಂ. ೪೪೦

ದ್ರೌಪದಿ–ಈಯೊಂದು ಗತಿಗೆಟ್ಟ ಮಾಳ್ಕೆಯಿಂ ರಾಜ್ಯಂ ಸಜ್ಜನರ ಕೈಯೊಳಿರಲಕ್ಕುಂ ಮುನಿವರ್ಯ.

ನಾರದ ಮಹರ್ಷಿ–ಲೇಸು, ಲೇಸು.

ಭೀಮಸೇನಂ–ದುರ್ಜನರಂ ಕೊಚ್ಚಿ ಕಂಡರಿಸದಿರ್ದೊಡೆ ರಾಜ್ಯಂ ಸಜ್ಜನರ ಕೈ ಸೇರ್ವುದೆಂತೈ ?

ಕುಂತೀದೇವಿ–ಇನ್ನೆಬರಂ ಭಂಗ ಬನ್ನಗಳಂ ನೋಂತು ನೋಂತು ತನುತವಿಯೆ ಗೋಳುಂಡು ನೆರೆಯುಪವಾಸವಿರ್ದು ೪೫೦

ದಾಯ್ತು. ಇನ್ನೇಂ ನಾಯವೊ ಇನ್ನೇಂ ಪ್ರಾಪ್ತಿಯೊ ಅದೆಮ
ಗಕ್ಕುಂ.

ಧರ್ಮರಾಯಂ ಖಿನ್ನಮುಖದೊಳಿಂತೆಂಗುಂ–ಸಂಧಾನದೊ
ಳೆಲ್ಲಮಂ ಪರಿಹರಿಕುಂ ತಮ್ಮಾ! ರೋಷದೊಳ್ ರಣರಂಗಕ್ಕಿಳಿ
ದೊಡೆ ಕಷ್ಟನಷ್ಟಂಗಳ್ ಇಕ್ಕೆಡೆಗುಂ ಸಲ್ವುದು ಕಾಣ್.

ನಾರದ ಮಹರ್ಷಿ–ಅಹುದಹುದು.

ಧರ್ಮರಾಯಂ–ಆನುಂ ಶ್ರೀಕೃಷ್ಣ ಪರಮಾತ್ಮನಂ ಕಂಡು
ಮುಂದಿನ ನಿರ್ಣಯಮೆಂದಿರ್ಪೆಂ.

ಕುಂತೀದೇವಿ–ಅದೊಳ್ಳಿತು. ಅವನಿಲ್ಲದಾವ ಕಾರ್ಯಭಾರಂ
ಇಲ್ಲಿಯುಂ ಸಲ್ಲದು ; ಎಲ್ಲಿಯುಂ ಸಲ್ಲದು. ೪೬೦

ಆಗಳ್ ನಡುವೆಟ್ಟಗಿಳಿತಂದ ಸೆಗಳಿಗದಿರಂ ನಿಜತೇಜದಿಂ
ಪೆರ್ಚಿದವೊಲ್ ಕೆಂಗಲಿಸಿ ಕೆಂಗಾಂತಿಯಿಂ ರಾರಾಜಿಸಿ ಸಿರಿಮೊಗದ
ಚೆಲ್ವಿನ ಚೆಲುವಂ ಸೂಸಿ, ಒಯ್ಯೊಯ್ಯನೆ ಮುಳುಂಗಿದಂ ಯಥೋ
ಚಿತಮಪ್ಪ ಕಾಲಗತಿಯೊಳ್ ಸಿಲ್ಕಿ.

# ಪಂಚಮಾಶ್ವಾಸಂ

ನಾಡಿನ ಬೀಡಿನ ಪೊಱವಲಯದ ನಲ್ದಾಣದೊಳ್ ನಿಡು ಪಟ್ಟಿಯ ಪುಲ್ಲಾಸಿನ ವಿಸ್ತರಣಂ ಸಮತಟ್ಟಿನ ಬಟ್ಟ ಬಯಲ ಪಾಂಗಿನಿಂ ಕಣ್ಗೆಸೆವುದು, ದೂರ ತೆಂಕಣ ಸೀಮೆಯಂಚಲ ಕರ್ವೆಟ್ಟಿನ ಚಿತ್ರಣಮುಂ ಒಳಗೊಂಡು. ಮಂಜು ಮುಗಿಲಿನ ತೆಳ್ದೆರೆಯುಂ ಸೀಳ್ದು ಮೇಲೇರ್ದು ತಂಗಾಳಿಯಲೆಯೊಳ್ ಒಯ್ಯೊಯ್ಯನೆ ತೇಲ್ದು ಕುಕಿಲ್ವ ಕೋಗಿಲೆಯುಂ, ಕೊಳದೆಡೆ ಪುರ್ರನೆ ಪಾರ್ದು ಕೇಂಕರಿಪ ನೀರ್ವಕ್ಕಿಯುಂ, ಪ್ರಕೃತಿಯೈಸಿರಿಯುಂ ಪೆರ್ಚಿಸಲ್ ಪಾರಾಡುತಿರ್ದುವೊ ಎನೆ ರಮ್ಯಮೊಪ್ಪುವ ಸಲ್ಲಕ್ಷಣಂ ಎಲ್ಲೆಡೆಯುಂ; ಅಂತಪ್ಪುದುಮಾಗಳುರ್ಕಿ ಪರ್ವಿದ ಚೆಲ್ವಿನೊಳ್ ಕಡು ಚೆಲ್ವಾದ ಪೊಳ್ತಿನೊಳ್ ಅಭಿಮನ್ಯು ಬಲ್ಪಿನ ಬಂಟನೆನೆ ತೇಜಿಯನೇರ್ದು ಕೂರ್ವಾಳಂ ಕೈಕೊಂಡು ಜಳಪಿಸುತುಂ ಕೈಕಾಳೆಗದೊರಸೆಯ ನಿಜ ಅಭ್ಯಸನದೊಳ್ ಮುಳುಂಗಿ ನೈಮಱೆತಿರೆ ರಣಕೇಳಿಯುಂ ಕಾವಳಿಸಿದುದು ಸೊರ್ಕಾಳ್ತನದಿಂದುರ್ಕೆ. ತೇಜಿಯುಂ ಚಕ್ಕನೇರ್ವ ತೆಕ್ಕನಿಳಿವ ವಾಯುವೇಗದಿಂ ಚರಿಸುವ ಕುಮಾರ್ಗಳಿಂ ಭೋಂಕನಿರಿವ ಬಗೆಬಗೆಯ ಕೈ ಚಳಕಮುಂ ತಂತ್ರದಿಂ ಮಂತ್ರದಿಂ ಯುಕ್ತಿಯಿಂ ಕೈಗೂಡಿಸಿ ಮನಂಗೂಡಿಸಿ ಅತ್ತಮಿತ್ತಂ ಜಗಿದಾಡುತುಂ ಬೀರದೇಳ್ಗೆಗೆ ಜಾಣ್ಮೆಯಿಂ ಬಲ್ಪಿನಿಂ ಶತಪ್ರಯತ್ನದಿಂ ಸಾಸಂಬಡುತಿರೆ ನೋಳ್ಪ ಕಣ್ಗಳ್ ತಣಿವಂತು, ಸಂತಸಂಬಡುವ ಮನಂ ದಣಿವಂತು ಮರಿಯಾನೆಯ ಸರಸ ಸಡಗರಮುಂ ನೂರ್ಮಡಿ ಮೀಱರ್ದುದು ಗಳಿಗೆ ಗಳಿಗೆಗೇಳ್ಗೆವೆತ್ತು. ೧೦ ೨೦

ಇತೊಂದು ಜಾಣ್ಮೆಯಿಂ ಕಣ್ಣಿಂದಲೀಕ್ಷಿಸಲೆಂದಲ್ಲಿಗೆಯ್ತಂದ ಸುಭದ್ರೆ ಸುತನ ಸಾಸಕ್ಕೆ ಸಂತಸಂಬಟ್ಟು ನೆಟ್ಟ ಕಣ್ ಮಿಟುಕಿಸದೆ ನೋಡುತಿರೆಯಿರೆ ಅಭಿಮನ್ಯು ತೇಜಯಿಂದಿಳಿದು ಬಿಲ್ಲಂಕೈಕೊಂಡು ಬಾಣಮಂ ಪೂಡಿ ಬಿಲ್ಲನಾರಿಯಂ ಚೆಚ್ಚರದಿಂ ಸೆಳೆದುವಿಡೆ ಪುಂಖಾನುಪುಂಖನೆತ್ತ ವಿಶಿಖಾವಲಿ ಎಲ್ಲೆಡೆಯುಂ ಭಲ್ಲೂಕತೊವಲಂ ಪರಿಡಿದಂತೆಯುಂ ಮೂಲೋಕಮಂ ನುಂಗಲ್ಕೆತಂದ ಮಂದೇಹರಾಕ್ಷಸನ ಪೊದರ್ದಲೆ ಕವಿದಂತೆಯುಂ ಪರ್ವಿ ಮುಸುಂಕಿ ಕೆನ್ನೀಲಿಯ ಕಳ್ತಲೆ ಕಾವಳಿಸಿದುದು; ನಾಡಿದು–ಬೀಡಿದು, ಬೆಟ್ಟದು–ತಿಟ್ಟದು, ಪೊಲನಿದು–ನೆಲನಿದು, ಮನೆಯಿದು–ನೆಲೆಯಿದು, ಪಳುವಿದು ಪುಳುವಿದು, ಸದೆಯಿದು–ಮೊದೆಯಿದು ಎಂದುವೊಂದು ಬಗೆಯಲ್ಬಾರದಂತಾಗೆ ಸುಭದ್ರೆ ಬಿಟ್ಟ ಬಾಯ್ಮುಚ್ಚದೆ ನೆಟ್ಟಕಣ್ ಕೀಲಿಸದೆ ಮೈಮರವಟ್ಟು ಅಚ್ಚರಿಬಡುತಿರೆಯಿರೆ, ಅಭಿಮನ್ಯು ಮತ್ತಮಾಚಣದೊಳ್ ಬಿಲ್ಲಕೊಪ್ಪಿಂಗೆ ಮಾರಕಾಸ್ತ್ರಮಂ ತೊಟ್ಟು ಬಿಲ್ಲನಾರಿಯಂ ಬಿಗಿವಿಡಿದು ಬಿಡೆ ರೊಯ್ಯನೆ ಪಾರ್ದು ದಟ್ಟಣಿಸಿರ್ದ ನಿಡುಗೋಲ್ಗಳ ತೆರೆಯಿಂ ಪವ್ವನೆ ಕಳ್ತರಿಸಿ ತೂರ್ದುದು ದಸದಿಸೆಗಂ. ಒರ್ಮೆಗೆ ಮುಂಬೆಳಕು ಮೂಡಿದೊಲ್ ನೆಲೆ ಬಯಲಾಯ್ತು. ೩೦

ಅಂತಿರವಂ ಕಂಡು ಮನವೆರ್ಚಿ ಮೈನೆರ್ಚಿ ನವಿರ್ ನಿಮಿರ್ದು ಉಸಿರ್ನಿಡಿದ ಸುಭದ್ರೆ ಕುವರನ ಬಳಿಸಾರ್ದು ಬಲ್ಮೆಯಿಂ ನಲ್ಮೆಯಿಂ ಬಿಗಿದಪ್ಪಿ ಮುದ್ದಿಕ್ಕಿ ಮುಂಡಾಡಿ ಮಂಡೆಯಂ ಮೂಸಿ ನೇವಂಸಿ ಬೆನ್ನೊಳ್ ಕೈಯಿಕ್ಕಿ ಬೋಳೈಸುತುಂ–ಕಂದ ಇಂದೆನ್ನೊಡಲ್ ತಣಿದುದು ಮನದಿಚ್ಚೆ ಕೊನರ್ದು ಪೆರ್ಚಳಿಸಿ. ನೀನಿಂತೀಗಳೆ ನೆಗಳ್ತೆವಡೆದುದು ಪಾಂಡುಕುಲದೈಸಿರಿಯಲ್ತೆ? ಇನ್ನೀಕೀರ್ತಿ ಕಳಸಂ ಅಚ್ಚಳಿಯದೆ ಬೆಳಗಲಕ್ಕುಂ! ಭುವನಂ ಬೆರಗುವಡುವಂತು ಸಗ್ಗದಾಣ್ಮಂ ಬಾಯೊಳ್ ಬೆರಳಿಡುವಂತು ಶ್ರೀಕೃಷ್ಣಂ ಮೆಚ್ಚಿ ಸಂತಸಂಬಡುವಂತು ಲೋಕಂ ಚೆಚ್ಚರದಿಂ ಅಚ್ಚರಿಗೊಳ್ವಂತು ಕಲಿಪಾರ್ಥನ ಕುವರಂ ನಿಜದಿಂ ಕಲ್ಕಿಯೇ ತಾನಾಗಲಕ್ಕುಂ! ಸಾಗರಂ ಸಾಗರೋ ೪೦

ಪಮಂ ಎಂಬರಲ್ತೆ? ನೀನಿಂದು ಕುವರಂ ಲೋಕೋತ್ತರಂ ಎನಿಸಿದೈ ಮಗನೆ ! ನೀಂ ಬಾಳ್ನೂರ್ಕಾಲಂ !

ಅಭಿಮನ್ಯು ಎಳವೊಗದೊಳ್ ತಿಳಿನಗೆಯಂ ಪಸರಿಸಿ– ಅಹಾ, ಈಯೊಂದು ಬಿಲ್‌ವಿಜ್ಜೆ ಸಾಲ್ಗುಮೆ? ಏಂ ವಿಚಾರವೊ? ಇನ್ನುಮಿನ್ನುಂ ಎನಿತೊಂದು ಬಜ್ಜೆಯಂ ಕಲಿಯುವೇಳ್ಕುಮೊ ? ೫೦

ಸುಭದ್ರೆ-ಇರುಮಿರು ಮಗನೆ! ಇಂತೇಂ ಆತುರ ಕಾತುರಂ? ಎಲ್ಲ ಬಿಜ್ಜೆಯುಂ ನಿನಗಕ್ಕುಂ. ಈಗಳೇ ಬಾಲೋಚಿತ ಶಕ್ತಿಯಂ ಮೀರ್ದೆಯಲ್ತೆ? ಇದೇ ಬೀರದೇಳ್ಗೆಯ ಮುನ್ನೂಚನೆ ಎನಲಕ್ಕುಂ. ಇಂತೆಯೆ ನಿಚ್ಚಂ ಅಭ್ಯಾಸಂಗೆಯ್ದು ಆತುರ ಕಾತರಂಗಳಿಂ ಮನಂ ಗೆಡಿಸದೆ ಎಲ್ಲಂ ಸಾವಧಾನದೊಳ್ ಕಲಿಯೈ ಪುತ್ರ? ಬಿಜ್ಜೆಯು ಜ್ಜುಗಕೆ ಅಣುಗತನಂ ಲೇಸೆಂದೊಂಡಂ ತಾಳ್ಮೆಗೆ ಪಿರಿತನ ಲೇಸು ಕಂದ !

ಅಭಿಮನ್ಯು ಇಂತಪ್ಪ ಹಿತವಚನಂಗಳಂ ಮನದೊಳಿಟ್ಟವೊಲ್ ಆಯ್ತಾಯ್ತೆನುತುಂ ಸೊರ್ಕಿನುರ್ಕಿನ ಬೀರದ ಬಿನ್ನಣದ ಬಲ್ಪಿನ ಬಾಹುಜದ ಬಿಜ್ಜೆಯುಜ್ಜುಗದೈಸಿರಿಯಿಂ ಬೆಳಂಗಿ ಕ್ಷಾತ್ರಲಕ್ಷ್ಮಿ ಮೆಯ್ಯನಾವರಿಸಿದಳೆನೆ ಕ್ಷಾತ್ರಲೀಲಾವಿನೋದದಿಂ ಜಕ್ಕಳಿಸಿ ಪೆರ್ಚ ಳಿಸಿ ಪೊಂದಾವರೆಯಂ ಪೋಲ್ವ ಮುಖಕಮಲವಂ ಅರಳ್ಚಿ ನಗು ನಗುತುಂ–ತಾಯೆ! ಇಂತು ಸಂತಸ ಬಡುವಂತು ಏಳ್ಗೆವೆತ್ತಿಲ್ಲೆನ್ನ ಬಿಲ್‌ವಿಜ್ಜೆಯುಂ. ಈವೊಂದೆಳತನಮಂ ಕಂಡಚ್ಚರಿ ಬಡುವರೇಂ? ೬೦

ಸುಭದ್ರೆ–ಕಂದ! ಇಂತಪ್ಪ ಬಲ್ಪಿನ ಬಿಜ್ಜೆಯುಂ ಪೆರ್ಚಲ್ತೆ ನಿನ್ನ ಕೌಮಾರ್ಯಕ್ಕೆ ?

ಅಭಿಮನ್ಯು–ಆನೆಳಯನಾದೊಡಂ ಕೋಲ್ಗಳೊಳ್ ಎಳವೆ ಯಿರ್ಕುಮೆ? ಬಲ್ಗೋಲ್ಗಳೆಂದೆಂದು ಬಲ್ಗೋಲ್ಗಳೆ ಮತ್ತೇಂ ಪೆರ್ಚಳಮೆನ್ನೊಳ್ ? ೭೦

ಸುಭದ್ರೆ--ನಿಕ್ಕುವಂ ಎಂದೊಡಂ, ನಿನ್ನ ಕೈಚಳಕವಂ ಮೆಚ್ಚಿದೆಂ ಕಾಣ್ !

ಅಭಿಮನ್ಯು-ಅಬ್ಬೆ! ಆನುಮಿನ್ನುಂ ಪೆರ್ಬ್ಬಾಣಂಗಳಂ, ಬಡಿಗೋಲ್ಗಳಂ, ಬಿಡಿಸರಳಂ ತರತರದ ವಿಶಿಖಾವಲಿಯಂ ಪೂಡಿ ಗುರಿಯಿಡುವ, ಗುರಿಯಿಟ್ಟು ತಪ್ಪದಿರುವ ಕೈಚಳಕವಂ ಅರಿಯುವೇಳ್ಕುಂ ಮತ್ತಂ ಕೂರ್ವಾಳಂ, ಮುಸುಂಡಿಯಂ, ಇಟ್ಟಿಯಂ, ಕಡಿಗತ್ತಿಯಂ, ಗದೆಯಂ, ಸುರಗಿಯಂ, ಕೊಡಲಿಯಂ, ಬಟ್ಟಿಗೈದಂ ಕೈಗೊಂಡು ರಥದೊಳ್ ನೆಲದೊಳ್ ದಿಟ್ಟತನದಿಂ ನಿಂದು ಬೊಮ್ಮರಕ್ಕಸರಂ ಎದುರ್ಚಿ ಸಾಟಿಯಿಂ ಸೂಟಿಯಿಂ ಕೆಚ್ಚಿನಿಂ ಪೋರ್ವನಿತು ಕಲ್ತು ಬಲ್ತು ಸಾಸಂಬಟ್ಟು ನೆಗಳ್ತೆವಡೆದು ಕಡು ಕಾಯ್ಪಿನ ನಿಜರಣದೊಳ್ ರಣವಿಜ್ಜೆಯುಜ್ಜುಗವಂ ಕೈಗೊಳ್ಳಲಕ್ಕುಂ. ೮೦

ಸುಭದ್ರೆ-ಅಕ್ಕೆ, ಕುವರ! ಪಿಂತೆ ನಿನ್ನಯ್ಯಂಗೆ ದ್ರೋಣಾಚಾರ್ಯರ್ ಗುರುವಿರ್ದರ್. ಈಗಳಿತ್ತಲ್ ಅಂತಪ್ಪ ಗುರುಗಳ್ ಆರಿರ್ಪರ್? ನೀನೆಲ್ಲಂ ನಿನ್ನಯ್ಯರ್ಕಳಿಂ ಕಲಿಯಲಕ್ಕುಂವೆಂದೊಡೆ ಇನ್ನೆತ್ತಣ ಪೆರ್ಚಳಂ ಕಂದ ?

ಅಭಿಮನ್ಯು-ಅಯ್ಯಂ ಕಲಿಪುದೊಂದಾದೊಡೆ ಆನಾರ್ಜಿಪುದು ಪತ್ತಲ್ತೆ? ಎನಗಂ ಬೇರೆನೇರೆ ಗುರುವಿನಾವಶ್ಯವಿಲ್ಲಂ. ಈವೊಂದು ನಿಚ್ಚಟದಭ್ಯಾಸದೊಳ್ ಎಲ್ಲಂ ಕರಗತಮುಕ್ಕುಂ.

ಸುಭದ್ರೆ-ನೀಂ ಮಿಾರ್ದಪೆ ಆರ್ಯಪುತ್ರನಂ !

ಬಳಿಕ್ಕಂ ಅಭಿಮನ್ಯು ಮುಸಂಡಿಯಂ ಕೈಗೊಂಡು ಎದುರಾಳಿಯನೊಡನೆಂತಂತು ತಣ್ಗಾಳಿಯೊಳ್ ಸೆಣಸಿ ತಾಗಿ ಪೊಣರ್ದು ಗೆಲ್ವ ಅಭ್ಯಾಸದೊಳ್ ಮನವಿಟ್ಟಂ. ತೆಕ್ಕನೆ ಪೊಯ್ವ ಕೈಚಳಕದಿಂ ಬಲ್ಪಿನ ಬಿಜ್ಜೆಯುಜ್ಜುಗದಿಂ ಇಮ್ಮಡಿಯ ಮುಮ್ಮಡಿಯ ಸಾಸದಿಂ ೯೦

ಮನಮುಬ್ಬಸಬಡುವಂತಿರಲವಂ ನೆಟ್ಟ ಕಣ್ಣಾಲಿಯಂ ಕೀಲಿಸದೆ
ನೋಡುತಿರ್ದ ಸುಭದ್ರೆ ನಿಚ್ಚಟದಿಂ ಕರ್ಬಂಡೆಯ ಪೀಠದೊಳ್
ಕುಳ್ಳಿರ್ದಳ್ ಮನಮಂ ದೀಕ್ಷೆಯೊಳಿಕ್ಕಿದಂತೆ. ಅಭಿಮನ್ಯು ಮತ್ತಂ
ಮತ್ತಂ ಬಗೆವಗೆಯ ಶಸ್ತ್ರಂಗಳೊಳ್ ಕೈಯಂ ತೊಡರ್ಚಿ ಮಿಂಚಿ
ನಂತೆಯುಂ, ಸಿಡಿಲಂತೆಯುಂ, ಸಿಂಗನಂತೆಯುಂ, ಪೆರ್ಬುಲಿ
ಯಂತೆಯುಂ, ಪೊಯ್ದಾಡಿ ಪಾರಾಡಿ ಸೆಣಸುವಂತೆಯುಂ,
ಜಿಗಿದುಂ ನೆಗೆದುಂ ನಿಗುರ್ದುಂ ಜಡಿದುಂ ಬಡಿದುಂ ಕಡಿದು ೧೦೦
ಕೊಚ್ಚಿ ಕಂಡರಿಸಿ ಗೆಲ್ದವೊಲ್ ನಟಿಸಿದಂ.

ತರುವಾಯೊಳ್, ತೇಜಿಯನೇರ್ದು ವಾಗೆಯಂ ಕೈಯೊ
ಳೇಳ್ದು ಬಿಗಿವಿಡಿದು ಮೆಯ್ಯಂ ಚಪ್ಪರಿಸಿ ಪುರಿದುಂಬಿಸಿ ಮಿಂಚಿನ
ವೇಗದೊಳ್ ಅಲ್ಲಿಂದೆ ಪೊರಮಟ್ಟಂ. ಸೆಳೆಮಿಂಚೊಂದು ಮಿಂಚಿ
ಮಾಯವಾದುದೊ ಎನೆ ತೆಕ್ಕನೆ ಮೈಗರೆದು ಅತ್ತಮಿತ್ತಂ ಸಂಚರಿಸಿ
ಮೇಣ್ ಪಿಂತಿರುಗಿ ನೆಲದೊಳ್ ಪೊಲದೊಳ್ ತಣ್ಗಾಳಿವಟ್ಟೆ
ಯೊಳ್ ತೇಜಿಯಂ ಕೊಂಡೊಯ್ದು ಸುತ್ತಾಡಿ ಪಾರಾಡಿ ನಲಿ
ದಾಡಿ ರಣಕೇಳಿಯುಂ ನಿಜ ಕಾಯ್ಪೇರಿಸಿ ಒರ್ಮೆ ಜಿಗಿದೋಡುತುಂ
ಇನ್ನೊರ್ಮೆ ಎದುರಾಗುತುಂ ಮೊಗಂ ಕೆಂಪಡರ್ದು ಕೆಂಗಲಿಸಿ
ಪೊಂಜುರಿಗೆಯಂತೆಯುಂ ಪೊಳೆ ಪೊಳೆಯುತುಂ ನಿರ್ಮೋಕ ೧೧೦
ನಿರ್ಮುಕ್ತ ನಿರ್ಮಲನಿರ್ಪ ರಿಸಿವಟುವೆಂತಂತು ಚಂಗನೆ ಬನಗ
ತ್ತಲೆಯ ನಿಡುಪಟ್ಟೆಯೊಳ್ ಸುಗ್ಗಿ ಕಣ್ಮಾಯವಾದಂ !

ಆಗಳುಂ ಸುಭದ್ರೆ ಮನವೆರ್ಚಿ ಮೈವೆರ್ಚಿ ಆನಂದಾಶ್ರುವಿಲು
ಳಿತ ಕಮಲಲೋಚನಗಳಿಂ ಎವೆಯಿಕ್ಕದೀಕ್ಷಿಸುತುಂ ಸರ್ವಾಂಗ
ಪುಳಕಿತಳಾದಳ್ ಕುವರನ ಬಿಲ್‌ಬಿಜ್ಜೆಯೇಳ್ಗೆಯಿಂ. ಅನಂತರಂ
ಒಯ್ಯನೊಯ್ಯನೆ ಪದಮೂರುಳ್ದು ನೇಸರ್ ನಡುನೆತ್ತಿಯಿಂದಿಳಿಮೊಗ
ವಾದೊಡಂ ಕಂದನುಂ ಪಿಂತಿರುಗಿ ಬಾರದಿರೆ ಪೆತ್ತೊಡಲುಂ ತಳ
ಮಳಿಸಿ ಚಿಂತೆಯುಂ ಪೆರ್ಚಿ ಕಾತರಿಸಿದಳ್ ಕುವರನ ಸಂದರ್ಶನೋ

ತ್ಕಂಠೆಯಾಗಿ. ಸುಡುಬಿಸಿಲ ಬಿಸುಪು ದಗೆದಾವರವಂ ಮೂಡಿಸಿ
ದೊಡಂ ಸುಭದ್ರೆ ಕುಳಿತೆಡೆಯಿಂ ಸರಿದಳಿಲ್ಲಂ. ಕಾದು ಕಾದು ೧೨೦
ಬೇಸತ್ತು ಮನಂ ಪರಿತಪಿಸಿ ಹಣ್ಣಾಗಿ ಕಳಿತು ನೋರ್ದೊಡಂ
ಕುವರಂ ಆ ದಿಶೆಯೊಳ್ ಕಂಡನಿಲ್ಲಂ. ಈಗಳೀಗಂ ಪಿಂತಿರುಗಿ
ಬಂದಪನೆಂದು ಕಾದಿರ್ದ ಮಾತೆ ಆತುರಕಾತರಂಗಳಿಂ ಪಳಯಿಸಿದ
ಳಿಂತು–ಹಾ, ಕುವರ ! ಎನ್ನ ಕುಲರತ್ನಮೆ ! ಏಂ ಭಂಗವೊದ
ವಿತೊ ಆಟವಿಯೊಳ್? ನಿನ್ನೊಂದು ಬೇಸಗಲ್ಲಿ ನೋವರಾರೆಲೆಕಂದ!
ಸೊರ್ಕಿನ ತೇಜಿ ಎಲ್ಲಿ, ಯಾವ ದುರ್ದಾಣದೊಳ್ ನಿನ್ನಂ ಕೆಡ
ವಿದುದೊ, ಗಿರಿಕಂದರಂಗಳೊಳ್ ಉರುಳಿ ಬಿದ್ದು ಬರಲಾಗದೆ
ನೊಂದಿರ್ಪೆಯೊ ಮೋಹ್ ಬಟ್ಟೆದಪ್ಪಿ ತೊಳಲುತಿರ್ಪೆಯೊ ಏನೆಂದು
ತಿಳಿಯಲಿ? ಹಾ, ಕುವರ! ಎಲ್ಲಿರ್ಪೆಯಯ್? ಸುಡುವಿಸಿಲ ಕಾಯ್ಪಂ
ದಗೆದಾವರವಂ ಎಂತು ತಡೆದುಕೊಳ್ವೆಯಯ್ ? ಪುಲಿ ಕರಡಿಗಳಿರ್ಪ ೧೩೦
ಪೇರಡವಿಯೊಳ್ ಆರಿರ್ಪರ್ ನಿನ್ನಂ ಬೆಂಗಾಯ್ದು ರಕ್ಷಿಸಲ್ ?
ಕಾಡ ಬಿಯದರ್ ಬೊಮ್ಮರಕ್ಕಸರ್ ಕಂಡೊಡೆ ನಿನ್ನಂತ ಪಸುಳೆ
ಯಂ ಪಿಡಿದು ಸಿಗಿದು ತಿನ್ನರೆ? ಸೊರ್ಕಿನ ಕೊರ್ವಿನ ಮದ್ದಾನೆಗಳ್
ನಿನ್ನಂ ಕಂಡೊಡೆ ಏಂ ಗೈದಪುವೊ ಕಂದ! ಘೋರ ರೂವಿನ
ಸಿಂಗಂಗಳ್ ಮೇಲ್ವಾಯ್ದು ಬಂದೊಡೇಂ ಗತಿ? ಇನ್ನು ಎಳಯನಿರೆ
ಪಸುಳೆಯಿರೆ ಇಂತಪ್ಪ ಭಂಗವಂ ಏಕೆ ಕೈಕೊಂಡೆಯೊ ಮಗನೆ!
ನಿನ್ನ ಕುಲತಿಲಕರ್–ಪಿರಿಯರ್ಕಳ್ ಬಿಂಕದ ಬೀರದ ಕೊರ್ವಿನ
ಕಟ್ಟಾಳುಗಳಿರೆ ಕೊಳಗುಳದ ಕಜ್ಜಮಂ ಕೈಕೊಳೆ ನಿನಗೆತ್ತಣ
ಸಾಸದ ಪುರ್ಚು ಕಂದ! ಮುದ್ದಿನ ಕುವರನ್ನೈಸೆ ಕಿರಿಯದೊಡಂ
ಆಟದ ಊಟದ ಕೂಟದ ಅಂದಚೆಂದದ ಕುವರನಿರವೇಡಾ? ಇಂತೀ ೧೪೦
ಬವರದ ಬವಣೆ ನಿನಗೇಕೈ? ಪಂಚಾಸ್ಯ ಚಮೂರ ವೃಕ ಸೂಕ
ರಾದಿ ದುಷ್ಟ ಮೃಗಗಳಿರ್ಪ ದಟ್ಟಡವಿಯೊಳ್ ಓರ್ವ ಕಂದನಿರ
ಲಕ್ಕುಮೆ ? ಕುಲಕೀರ್ತಿಗೆಂದು ಎನ್ನೆರ್ದೆಯ ಬೆಳಕಂ ಬೆಳಗಲೆಂದು
ನಿನ್ನಂ ಪೆತ್ತೆನಲ್ತೆ ? ಈಗಳಿಂತು ಪೇರಡವಿಯ ಖಗಮೃಗಂಗಳ್ಗೆ
ತುತ್ತಾದೊಡೇಂ ಗತಿ ? ಏಂ ಗೈಯಲಿ ? ಎಂತು ಸಹಿಸಲಿ ?–ಎಂದು

ಮೊಂದು ಪರಿಪರಿಯೊಳ್ ನಮೆಯುತಿರ್ದ ಪೊಳ್ತಿನೊಳ್ ಮಿಣ್ಣ
ನಲ್ಲಿಗೈತಂದ ಶ್ರೀಕೃಷ್ಣಂ ತಂಗಿಯ ಬೆನ್ನಂ ನಲ್ಮೆಯಿಂ ನೇವರಿಸಿ,
ತಲೆಯೊಳ್ ಹಸ್ತವಿಕ್ಕಿ–ತಂಗಿ, ನಿನ್ನೊಳ್ ನೀಂ ಈ ಪರಿಯೊಳ್
ತಹತಹಿಸುತಿರ್ಪಯ್. ಏಂ ಕಾರಣಂ? ಏಂ ದುಕ್ಕಸಂಕಟಂ?
ಎಂದೆನುತುಂ ಬಲ್ಮೆಯಿಂ ಸಲ್ಗೆಯಿಂ ಮುಖಕಮಲದೊಳ್ ಕಣ್ಣಿಟ್ಟು ೧೩೦
ಮನವಿಟ್ಟು ನುಡಿದಿರಲ್ಕೆ ಸುಭದ್ರೆ ನಸುನಾಣ್ಚಿದೊಡಂ ತೋರ
ದಿನಿತು ಸಂತಸಂಬಡುತೆ ನೋಂಪಿನ ಸೊಂಪಿನ ಸೊಬಗುಗುವ
ಕಣ್ಗಳಿಂ ನೋಡುತುಂ ಮೈಮೆರ್ಚೆ ಮನಮೆರ್ಚೆ ಅಣ್ಣನಡಿದಾವರೆ
ಗಳ್ಗೆರಗಿ ಪಾದಧೂಳಿಯುಂ ಶಿರದೊಳ್ ಧರಿಸಿ ಮೊಗದೊಳ್ ಸರಳ
ಸ್ಮಿತಮಂ ಸೂಸಿ ಆನಂದಾತಿರೇಕದಿಂ ಯಥೋಚಿತಂ ಮಿದು
ನುಡಿಯಿಂ–ಓ ಎನ್ನಣ್ಣಯ್ಯ! ಇಲ್ಲಿಗೆ ಏಪೊಳ್ತು ಬಂದೈ? ಇನ್ನೆ
ಬರಂ ನಿನ್ನ ಪಜ್ಜೆಯ ಸಪ್ಪಳಮಿನಿತು ಕೇಳ್ದಿನಿಲ್ಲಂ. ಎಂತು ಮಿಣ್ಣನೆ
ನಡೆತಂದೈ? ಮಧುರೆಯೊಳ್ ಎಲ್ಲರುಂ ಕ್ಷೇಮದೊಳಿರ್ಪರೇಂ?

ಶ್ರೀಕೃಷ್ಣಂ ತಂಗಿಯ ಭುಜಮೆರಡುಂ ಬಿಗಿವಿಡಿದು ತಬ್ಬಿ
ನೆತ್ತಿಯಂ ಮೂಸಿ ಮಂದಹಾಸದಿಂ–ಭಗಿನಿ, ಆನಾಗಳೆ ಬೀಡಿ ೧೩೫
ಗೆಯ್ತಂದೆಂ. ಅಲ್ಲಿ ನಿನ್ನಂ ಕಂಡೆನಿಲ್ಲದೆ ಇಲ್ಲಿಗೀಗಳೈತಂದೆಂ. ನೀಂ
ತಹತಹಿಸುತಂ ಓರ್ವಳಿಲ್ಲಿರಲ್ಕೇಂ ಕಾರಣಂ ಪೇಳ್? ಏಂ
ವಿಚಾರಂ? ಏಂ ಕಾತರಂ?

ಸುಭದ್ರೆ–ಆಂ ಪೆಂಗಳೆಯರ್ ನಿಮ್ಮಂತಲ್ತು ಅಣ್ಣಯ್ಯ!
ಏವೊಂದು ಕೊರತೆ ಮನದೊಳ್ ತುಂಬಿರ್ಕುಂ. ಏನಿರ್ದೊಡಂ
ಏನಿಲ್ಲದೊಡಂ ಅನುಗಾಲಂ ಚಿಂತೆ.

ಶ್ರೀಕೃಷ್ಣಂ ಎಳನಗುವಂ ಬೀರ್ದು ಗಲ್ಲಮಂ ಪಿಂಡಿ–ಈಗೇಂ
ವಿಚಾರಂ ಪೇಳ್?

ಸುಭದ್ರೆ–ಅಭಿಮನ್ಯು ಬೆಳಗಿನಿಂದಿಲ್ಲಿ ಸಕಲ ಶಸ್ತ್ರಾ
ಭ್ಯಾಸಮಂ ಕೈಕೊಂಡಿರ್ದುದಂ ಕಣ್ತುಂಬ ನೋಡುತಿಲ್ಲಿರ್ದೆಂ. ೧೪೦

ಅಭ್ಯಸನದನಂತರಂ ತೇಜಿಯನೇರ್ದು ಬಾಲಕಂ ಪೊರವಂಟಂ. ೧೭೦
ನಾಡೆನ್ನದೆ ಕಾಡೆನ್ನದೆ ರೊಯ್ಯನೆ ವಾಯುವೇಗದಿಂ ಸಂಚರಿಪ
ಬಾಲಕನಿನ್ನೆವರಂ ಪಿಂತಿರುಗಲಿಲ್ಲಂ. ಆಗಲಿಂದಿಲ್ಲಿ ಕಾದಿರ್ದು
ಏನುಮೇನೆಂದರಿಯದೆ ಎರ್ದೆಗೆಟ್ಟು ಮನಂಗೆಟ್ಟು ತಳ್ಳಂಕದಿಂ
ತಹತಹಿಸುತಿರ್ಪೆಂ. ಬೆಂಬಲಿಗರಿಲ್ಲದೊರ್ವ ಕುಮಾರಂ ದೂರ
ಸಾರ್ದುದು ತಳ್ಳಂಕಮಂ ಮೂಡಿಸಿರ್ಪುದುಂ.

ಶ್ರೀಕೃಷ್ಣ–ಅಹಹ, ನೀನಹುದು ಪೆಣ್ಣಿನೊಳ್ ಪೆಣ್ಣು !
ಅವನೆಲ್ಲಿ ಪೋದಪನೆಂದು ತಳ್ಳಂಕದಿಂ ತಹತಹಿಸುತಿರ್ಪೆಯ್ ?
ಅಭಿಮನ್ಯು ಎಳಗೂಸೆ ಬಟ್ಟೆದಪ್ಪಲ್ ? ಬೊಮ್ಮರಕ್ಕಸರಂ ಬಡಿ
ದಿಕ್ಕುವ ಬಳ್ಳಳ್ಳಂ ! ಬಲ್ಪಿನ ಬೀರರ್ಗೆ ಇದೆತ್ತಣ ಶ್ರಮಂ ಬಿಡು ೧೮೦
ಬಿಡು. ಇಂತಪ್ಪ ತಳ್ಳಂಕಂ ವೀರಸತಿಗೆ ಸಲ್ಲದು ಕಾಣ್ !

ಸುಭದ್ರೆ–ಅಂತೆನಲ್ ಪೆತ್ತೊಡಲ್ ತಾಳ್ವುದೇಂ ?

ಶ್ರೀಕೃಷ್ಣಂ–ಭಗಿನೀ ! ನೀನುಮಾನುಂ ಎಲ್ಲರುಂ ಪೆತ್ತೊಡಲ
ಪುತ್ತಳಿಗಳಲ್ತೆ ? ನಾಮೆನಿತನುಗಾಲಂ ಪೆತ್ತವರ ಮಡಿಲೊಳಿಪ್ಪುದು
ಸಾಧ್ಯಂ ಪೇಳ್ ? ಎಲ್ಲರುಂ ಸೃಷ್ಟಿಕರ್ತನಾಣ್ಣೆಯೊಳಿರಲಕ್ಕುಂ.
ಅಂದಬಳಿಕಂ ಇಂತೊಂದು ತಳ್ಳಂಕಂ ವ್ಯರ್ಥಂ. ಅವುದರೊಳ್ ಆಸೆ
ಯನಿಡದೆ ಮನಮಂ ಹಗುರಗೊಳಿಸಿ ನಿರಾಕುಳದಿಂ ಬಾಳಲಕ್ಕುಂ.

ಸುಭದ್ರೆ–ಏಕೈಕ ಪುತ್ರನೆಂಬ ಮಮ್ಮಳಂ ಒಡಲಿಂಗೆ.

ಶ್ರೀಕೃಷ್ಣಂ ನಗುಮೊಗದಿಂ ನೋಡುತುಂ ಮಿಣ್ಣನೆ ತಲೆಯಂ
ದೂಗಿ–ಎಲೆ ತಂಗೀ ! ಇಂತಿದುಂ ಸರಿಯಲ್ತು. ಕುವರಂ ಓರ್ವನಾ ೧೯೦
ದೊಡಂ ಈರ್ವರಾದೊಡಂ ಎಲ್ಲರುಮೊಂದೆಯಲ್ತೆ ?

ಸುಭದ್ರೆ–ಅಹುದೆಂದೊಪ್ಪಿದೊಡಂ ಕಂದನಿನ್ನುಂ ಪಿಂತಿರುಗ
ಲಿಲ್ಲೆಂಬ ಸಂಕಟಂ ಪೋಪುದೆಂತು ? ನೀಂ ಪುರುಷರ್ ಪಾಷಾಣ

ಕಠಿಣಹೃದಯಿಗಳಲ್ತೆ ನಾವೆಂತುಂ ಅಳ್ಕರೆಯುಂ ತೋರೆಯುಲಕ್ಕುಂ?

ಶ್ರೀಕೃಷ್ಣ–ಕೇಳ್ ಸುಭದ್ರೆ ! ನೀನುಮಾನುಂ ಮತ್ತಾರುಂ ಸ್ಥಿರಮಲ್ಲವಿಸಾತಿರೆಯೊಳ್. ಎಲ್ಲರ ಪುಟ್ಟಿನೊಳ್ ಕಷ್ಟನಷ್ಟಂ ಬೆಂಬಿಡಿದು ಬರ್ಕುಂ. ಸುಕದುಕ್ಕಮೆಲ್ಲಮಂ ಸಮದೃಷ್ಟಿಯಿಂ ಕಾಂಬುದೆ ಬಾಳಿನ ಸೊಗದ ಸುಧೆಯು ಗುಟ್ಟು. ಎಲ್ಲಕ್ಕುಂ ತಳ್ಕಂಕಮೆಂದೊಡೆ ಬರ್ದುಂಕೆ ತಳ್ಕಂಕಮಲ್ತೆ.

ಸುಭದ್ರೆ–ಎಲ್ಲಂಬಲ್ಲೆಂ. ಆದೊಡಂ ಅನುಮಾನೆ; ನೀನುಂ ನೀನೆ! ೨೦೦

ಶ್ರೀಕೃಷ್ಣಂ ಕಮಲನಯನದೊಳ್ ಕರುಣೆಯುಂ ಸೂಸಿ– ಇಂತು ಸೈಗೆಟ್ಟೊಡೇಂಬಹುದು ? ಮನಮಂ ಜಡಿಕುಟ್ಟಿ ಕಟ್ಟಿಟ್ಟೊಡೆ ತಳ್ಕಂಕಮಿಲ್ಲದೆಂದುಮೆಂದುಂ.

ಸುಭದ್ರೆ-ಎಮ್ಮೊಳಲು ಎಮಗಿರ್ಕುಂ ಅಣ್ಣಯ್ಯ !

ಶ್ರೀಕೃಷ್ಣಂ–ಸೋದರೀ, ವ್ಯಾಮೋಹಂ ಪುಟ್ಟುಗುಂ ಮನೋದೌರ್ಬಲ್ಯದಿಂದಂ. ನಿಚ್ಚಂ ನಿಚ್ಚಟದ ಭಕುತಿಯು ಮೋಕ್ಷಮಾರ್ಗಮುಂ ಬಿಟ್ಟು ನಶ್ವರಮಾದೀ ಬಾಳ್ವೆಯ ಮಂಕು ಮಾಯೆಗೊಳಪಟ್ಟು ನರಳ್ದು ಗೋಳಾಡಿ ಕಣ್ಣೀರಿಟ್ಟೊಡೆ ಸುಕದುಕ್ಕಂಗಳಂ ಕಳೆಯುಲಕ್ಕುಮೆ ? ಎಲ್ಲಂ ಮಿಳ್ತುವಿನರಮನೆಯ ಕೈಸಾಲೆಯೊಳ್ ನಿರ್ಣಯುಮೆಂಬುದಂ ಮರೆಯಾದಿರ್. ೨೧೦

ಸುಭದ್ರೆ-ಅಣ್ಣಯ್ಯ ! ನಿನ್ನಿಂದಿನ್ನೆಬರಂ ಎನಿತುಪದೇಶಮಂ ಕೇಳ್ದೆನಿಲ್ಲಂ ? ಆದೊಡಿನ್ನೆಬರಂ ಮನಗೊಂಡಿಲ್ಲಮೆಂದೆನಲ್ ಪಳಿಯದಿರ್ ಅನುಮಿನ್ನುಂ....

ಶ್ರೀಕೃಷ್ಣಂ ಎಲ್ಲಮಿರ್ದುಂ ಯಾವೊಂದು ಗುಣಂ ಕೊರವಾದೊಡಂ ಮಿಕ್ಕುಳಿದೆಲ್ಲಗುಣಂ ವ್ಯರ್ಥ ತಂಗೀ !

ಸುಭದ್ರೆ–ನಸುನಾಣ್ಚಿ ಎಳನಗುವಂ ಮೊಗದೊಳ್ ಮೂಡಿಸಿ– ಅಪ್ಪುದು. ಇಂತಿದಂ ನೇರ್ಪಡಿಸಲ್ ನೀನಿರ್ಕೆ ಎನಗೇಂ ಕೊರತೆ ? ಎಲ್ಲಂ ನಿನ್ನ ಕೈಯೊಳಿರ್ಕುಂ,

ಅಂತಪ್ಪುದುಮಾಗಳುರ್ಕಿದ ಪರಿಹಾಸದ ಕಿರುನಗೆಯೊಳ್ ನಲ್ಮೆಯುಂ ಸೂಸಿ ಬಲ್ಲುಲಿಯುಂ ಮಾಣಿಸಿ ಬಳಿಯಿರ್ದ ಶಿಲಾ ಪೀಠದೊಳ್ ತಂಗಿಯೊಡನೆ ಕುಳ್ಳಿರ್ದು ನಲ್ವಾತಿನಿಂ ತಳ್ಕೈಸುವ ಮಾಳ್ಕೆಯೊಳ್–ಸುಭದ್ರೆ ! ಇದೇಂ ನಿಡುಗಂಬವಾದೆ ? ಎಲ್ಲರುಂ ಇಳೆಗೆ ಬರುವಾಗಳುಂ ಪೋಗುವಾಗಳುಂ ಓರ್ವರಲ್ಲದೀರ್ವರುಂಟೆ? ಮತ್ತೇಕೆ 'ತನ್ನವರ್ ತನ್ನವರ್' ಎಂದೆಂಬ ಗೀಳು ? ಇಂತಪ್ಪ ಸಲ್ಲದ ಆಕರಂ ಮಿಳ್ತು ಮಾಯೆ ಕಣಾ ! ಬರ್ದುಕಿರ್ದನಿತು ಕಾಲಮಾನಂ ಕಾಮಕೀರ್ತಿಗಳ ಗೊಂದಲಮಿಲ್ಲದೆ ಕಳೆವೊಂದು ಸೈಪಿರ್ಕುಂ ಮನದೊಳ್. ನಿನ್ನೀ ಕಡೆಗಣ್ಗಳೊಳ್ ಪೊದಳ್ದೊಂದು ಕಾತರಂ, ತೆಳ್ಗದಂಪುಗಳ ಭಾವವಿಭಾವಂ ಜೀವರೇಖೆಯ ರನ್ನ ಗನ್ನಡಿಗೆ ವಿಧಿಬರೆಹದ ಪಾಂಗಿನೊಳ್ ತೋರ್ಕುಂ. ಇಂತೊಂದು ಆಕರಂ ಮೊನೆಯುಳ್ಳ ಸೂಜಿಯೆಂತೆಂಬವೊಲ್ ಪರಿಣಮಿಕುಂ ಮಿದುಮನಸ್ಸಿಗಂ. ಏಮಂ ಆತುರಕಾತರಂಗಳಿಂ ಮನಂಗೆಟ್ಟು ನಲುಂಗುವುದರಿಂ ನಿರ್ಲಿಪ್ತಭಾವಂ ಲೇಸಲ್ತೆ ? ಲೌಕಿಕ ಬಂಧ ದೊಳ್ ದೊರೆವರ್ಪೀ ಕಾಮುಪೀನ ಪಯೋಧರಂಗಳ ಬಲ್ಸರಿ ಯಿಂದೀ ತೆರನ ದುರ್ಬಲತೆ ಎಂಬುದಂ ಅರಿತೊಡೆ ಈಯೊಂದು ತಳ್ಳಂಕಮಿಲ್ಲಂ ಚಿಂತೆಯುಮಿಲ್ಲಂ. ೨೩೦ ೨೪೦

ಸುಭದ್ರೆ–ನಿನ್ನೆಲ್ಲ ಉಪದೇಶಂ ಬಗೆಯೊಳಿರ್ಕುಂ ಅಣ್ಣಯ್ಯ! ಆದೊಡಂ ಈ ಒಡಲ ಸಂಕಟಮುಂ ಏವೇಳ್ವೆಂ ? ಪೆಂಗರುಳ್ ಕಮಲಕೋಮಲಮೆಂಬುದಂ ನೀನರಿತಿರ್ಪೆ. ಅಂತುಮಿಂತುಂ ಎಂತಾದೊಡಾನು ಈ ಬಾಳ್ಕೆಯ ಗೋಳ್ಗಡಲಂ ಪಾಯ್ದು ದೂರ ತೀರಮಂ ಮುಟ್ಟಿದೊಡೆ ಸಾಲ್ಗುಂ ಅಣ್ಣಯ್ಯ. ೨೫೦

ಶ್ರೀಕೃಷ್ಣಂ–ಅಂತುಮಲ್ಲದೆಯುಂ ಮುಂಗಾಲಂ ವೀರೋಚಿತ ಮಲ್ತು. ದ್ವಾಪರಂ ಕಳೆದು ಕಲಿಯುಂ ಕಾವಳಿಪ ಸಂಧಿಗಾಲಂ ಬರ್ಕುಂ. ಇನ್ನಾವುಂ ಜೀವನದಧ್ಯಾಯಮಂ ಮುಗಿರ್ಚಿ ಸಗ್ಗ ಮನಡರ್ವುದು ಲೇಸು. ದ್ವಾಪರಂಗಳಗಲ್ತು ಕಲಿಗಾಲಂ ಸೋದರಿ.

ಸುಭದ್ರೆ–ಓ, ಅದೊಂದಿರ್ಕುಮಲ್ತೆ? ಇನ್ನುಂ ಎಂತೊ ಏನೊ ಎಲ್ಲರ್ಗಂ ಸೀಮೆ ಬಟ್ಟೆ ತೋರಲಕ್ಕುಂ.

ಆದರ್ಕಾ ಶ್ರೀಕೃಷ್ಣಂ ಗಳಿಗೆಯೊಂದು ಮಿಣ್ಣನಿರ್ದು ಮತ್ತಿದಂ ಕೇಳಿಸಿದಂ–ನೀನಿನ್ನೆಬರಂ ಕಂದನಿನ್ನುಂ ಬನದಿಂ ಪಿಂತಿರುಗ ಲಿಲ್ಲೆಂದು ತಳಮಳವೆರ್ಚಿ ಪಳಯಿಸುತಿರ್ದೆಯಲ್ತೆ ಇಂತಿದಂ ಆನು ಮೇನೆಂದು ಸಂತೈಸುವೆಂ? ಸುಕದುಕ್ಕಂ ಸಿನ್ನೊಳಗಿರ್ಕುಂ. ನೀಂ ಕೈಕೊಂಡುದುದು ನಿನಗಕ್ಕುಂ. ನೀಂ ಸತ್ಕುಲ ಸಂಜಾತೆ ವೀರ ಪತ್ನಿ ವೀರಮಾತೆ. ಎಲ್ಲಂ ವೀರೋಚಿತಮಿರೆ ಪೇಳ್ವುದಿನ್ನೇಂ? ಇಂತು, ಒರ್ಗತೆಯಿರ್ಕುಂ ಕೇಳ್! ಪಿಂದೊರ್ವ ಪುಣ್ಯಾಶ್ರಮ ದೊಳ್ ಮುನಿಜಂಪತಿಗಳ್ ಬಾಳ್ಮೆಯೊಳ್ ಬಲ್ಮೆಯಿಂ ಕೂಡಿ ಸೊಗದಿಂದಿರ್ದರ್. ಕಾಲಕ್ರಮದೊಳವರ್ಗೆ ಕಂದನೊರ್ವಂ ಸಂಜನಿಸೆ ಸಗ್ಗಸಿರಿಯಂ ಕಂಡರಿಳೆಯೊಳಾ ದಂಪತಿಗಳ್. ಪಸುಳೆ ಯುಂ ಅಂದಚೆಂದದಿಂ ಬೆಳೆದು ಚಿನ್ನಾಟವಾಡುತ್ತೆ ಸೊಗದ ಸುಧೆಯಂ ಪರಿಸುತುಂ ಪೆತ್ತರ್ಗೆ ಮೆಚ್ಚಿನಣುಗನೆನಿಸಿದಂ ನನ್ನಿಯುಂ ಬಲ್ಪುಮೊಂದಾಗಿ ಮೆಯ್ಯೆತ್ತವೊಲ್. ೨೬೦

ಒರ್ಮೆ ಬಾಲಕಂ ಗೆಣೆಯರೊಡಂ ಸರಯೂ ನದೀತೀರಮಂ ಸಾರ್ದು ಬಾಲಲೀಲಾವಿನೋದದಿಂ ಅತ್ತಮಿತ್ತ ನೆಗೆಯುತುಂ ಸಾರುತುಂ ಓಡುತುಂ ಕುಣಿಯುತುಂ ಕುಪ್ಪಳಿಸುತುಂ ಬೆಟ್ಟನೇರಿ ಕಿಟ್ಟನಿಳಿದು ಅಗಳ್ತೆಯಂ ದಾಂಟಿ ಮರವನೇರ್ದು ಕಲ್ಲನೆಡವಿ ಮುಳ್ಳನೆಟ್ಟಿ ಎಳ್ದು ಬಿಳ್ದು ಗಾಯಮಟ್ಟು ನೆತ್ತರಂ ಬಸಿದು ೨೭೦

ಹಮ್ಮೃಯಿಸಿ ಸಗುಸಗುತುಂ ಮೈವೆರ್ಚಿ ಮನವೆರ್ಚಿ ಕುಣಿಕುಣಿ
ದಾಡುತಿರಲಾ ಕಾಣದೆ ತುಳಿದನೊಂದು ಕರ್ಪ್ಪಗರವಂ. ಅಗಳದು
ಬುಸ್ಸನೆಳ್ದು ಮಂಡೆಯಂ ಬೀಸಲ್ ತೆಕ್ಕನೆ ಪಿಂಜರಿದು ಬೆಂಗೊ
ಟ್ಟೋಡಿದಂ. ಮುಂಗಾಲಗಾಯದೊಳ್ ಕಂಡ ನೆತ್ತರಕಣಂ ಪಾವಿನ
ಪಲ್ತಾಗಿದುದೆಂಬ ಬೆಮೆಯಿಂದೆ ಭಯಂ ಮನಮಂ ಕಾವಳಿಸೆ
ಆಶ್ರಮದತ್ತಲ್ ಓಡೋಡಿ ಬರುತಿರೆ ಕಲ್ಲೆಡವಿ ಬಿಳ್ದು ಬಸವಳಿದಂ. ೨೮೦
ಆಗಳ್ ಬಳಿಯೊಳಿರ್ದ ವಟುಗಳ್ ಕಂಗೆಟ್ಟು ಸ್ಟೆಗೆಟ್ಟು ಗೋಳಾಡಿ
ಅಳುತಳುತುಂ ಆಶ್ರಮಕುಯ್ದು ಮುನಿಪತ್ನಿಯಂ ಕಂಡು ಪುತ್ತ್ರಂ
ಭೋರನಳುತುಂ–ಓ, ಅಬ್ಬೆ! ಸರಯೂತೀರದೊಳ್ ನಿನ್ನ ಕುವರಂ
ಪಾವಿನದಂಷ್ಟ್ರನದಿಂ ಸ್ಟೆಗೆಟ್ಟು ವಿಷವೇರಿ ಆಶ್ರಮಕೆ ಪಿಂತಿರುಗುವ
ದಾರಿಯೊಳೆ ಬಿಳ್ದು ಸತ್ತಂ ಎಂದೊದರಿದರ್. ಆಗಳ್ ಮುನಿಪಂ
ಕಂದಮೂಲಾದಿಗಳಂ ಪುಡುಕಿತರಲ್ ವನಾಂತರಕ್ಕೈದಿರ್ದು ಮಡದಿ
ಯೋರ್ವಳೆ ಆಶ್ರಮದೊಳಿರ್ದಳ್. ಇಂತಪ್ಪ ಘೋರ ಸುದ್ದಿಯಂ
ಕೇಳ್ದ ಮಡದಿ ಎರ್ದೆಗೆಟ್ಟು ಮನಂಗೆಟ್ಟು ಭಯದಿಂ ದುಕ್ಕದಿಂ
ಪೊರಗೋಡಿ ಮಂಡೆಯಂ ಬಂಡೆಗಪ್ಪಳಿಸಿ ಚೀರ್ಚಿ ಗೋಳಾಡಿ ತಲೆ
ಯೊಡೆದು ನೆತ್ತರ್ ಕಾರಿ ಧರೆಗುರುಳ್ದು ಪ್ರಾಣಸಂಕಟಂಬಡು ೨೯೦
ತಿರ್ದ ಪೊಳ್ತಿನೊಳ್ ಆ ಬಾಲಕಂ ಬಿದ್ದೆಡೆಯೊಳ್ ತಣ್ಣನೆ
ತಂಗಾಳಿ ತಟ್ಟೆ ಮುಚ್ಚೆ ತಿಳಿದೆದ್ದು ಓಡೋಡುತ ನಡೆತಂದಂ.
ಮನದೊಳ್ ತಾಯ್ತಂದೆಯುರನೇಪೊಳ್ತಿಗೆ ಕಾಂಬೆನೋ ಇನ್ನಿಂತೀ
ಪಾವಿನ ಕತೆಯನೊರೆವೆನೊ ಮೇಣೆಂತು ಗೆಣೆಯರಂ ತಾಗಿ ಇಂತೆ
ನ್ನೊರ್ವನೆಯೆ ಬಿಟ್ಟು ಪೋದಿರೆಂದು ಜರ್ವಿ ಜಾಲಾಡುವೆನೊ
ಎಂಬೊಂದು ತವಕದಿಂ ಕುಡಿಕುಡಿದು ಬಿಸಿಲಬೇಗೆಯ ಬಿಸುಪಿನಿಂ
ಜೆವರಂ ಬಸಿದು ಕಾಪಥದೊಳ್ ಪಾವಿನ ಭಯದಿಂ ಅತ್ತಮಿತ್ತ
ನೋಡುತುಂ ಬಳಲ್ಕೆಯಂ ಮರೆತು ಉಲ್ಲಸಗೊಂಡು ಧಾವಿಸಿ
ಬರಲ್ ಆಶ್ರಮದ ಬಾಗಿಲೊಳ್ ವಟುಗಳ್ ನೆರೆದಿರ್ದು ತಾಯಿ
ಯುಂ ಪ್ರಾಣಸಂಕಟದೊಳ್ ಪಳಯಿಸುತಿರ್ದುದಂ ಕಂಡಂ! ೩೦೦

ತಂಗಿ, ಇದನೇನೆಂಬೆಯೊ ಪೇಳ್? ಇಂತಾತುರಂ ಉಬ್ಬೆಗಂ ಮನಂಗೆಡಿಸಿ ಜಾಣಗೆಡಿಸಿ ಬಟ್ಟೆಗೆಡಿಪುದುಂ. ಎಲ್ಲರುಂ ತಾಳ್ದು ಬಾಳ್ಗೆ ಒಳ್ಳಿತು.

ಆಗಳ್ ಸುಭದ್ರೆಯುಂ ಮುಗುಳ್ದು–ನೀಂ ಬಳಿಯೊಳಿರೆ ಆವ ಉಬ್ಬೆಗಮಿಲ್ಲಂ. ಮನಂ ನಿಚ್ಚ ಶಾಂತಿಯೊಳಿರ್ಕುಂ.

ಶ್ರೀಕೃಷ್ಣಂ ಪರಿಹಾಸ್ಯಮುಕ್ಕುವ ದನಿಯೊಳ್-ಇದು ಬಲ್ಸೊಗಂ! ಎನುತ ಕಿರುನಗೆಯಂ ಬೀರ್ದು ಅತ್ತಮಿತ್ತಲ್ ಕಿರುಗಾಡಿ ಶತಪಥಂ ತುಳಿಯುತಿರ್ಪನಿತರೊಳ್ ಅಭಿಮನ್ಯು ಚೆಲ್ವಿನ ತೇಜಿಯ ವಾಘೆಯಂ ಬಿಗಿವಿಡಿದು ದಿಟ್ಟ ರಾವುತನೆನೆ ಬಂದಿಳಿದಂ. ಪೊದರ್ದಲೆಯುಂ ಕೆವಿಮ್ಮೀಸೆಯುಂ ಗಾಳಿಯಲೆಯೊಳ್ ಮಸಗಿ ಮೊಗಮಂ ೩೧೦ ಮುಸುಂಗಿ ನೋಳ್ಪಕಣ್ಗೆ ಭಲ್ಲೂಕದಂತೆಸೆಯೆ ಶ್ರೀಕೃಷ್ಣಂ ವಿನೋದದಿಂ ಅಟ್ಟಹಾಸದಿಂ ಇಂತೆಂಗುಂ- ಭಳಿರೆ! ಅಭಿಮನ್ಯು! ಆವಾವ ಪೊಣರ್ಕೆಯೊಳ್ ಪೊಣರ್ದು ಸವಿರ್ ನಿಮಿರ್ದು ಬಲ್ಪಿನ ಬೀರನೆನಿಸಿ ಬಂದೆಯ್ ? ನಿನ್ನೆದುರಾಳಿಯುಂ ಗಾಳಿಯೇಂ ? ಮರಿಮುಗಿಲೇಂ ? ಪೊಂಬಿಸಿಲೇಂ ? ಆರಂ ತಾಗಿ ಕಾದಿ ಮೋದಿ ಕೆಡವಿ ಮಸಗಿ ಬಂದೆಯ್ ಮರಿಸಿಂಗನವೊಲ್ ?

ಅಭಿಮನ್ಯು ತೇಜಿಯ ವಾಘೆಯಂ ಬಿಟ್ಟು ನಗುಮೊಗದಿಂ ನುಡಿದನಿಂತು–ಮಾವಾ! ನೀಮೆಂತುಂ ಗಾಳಿಯೊಳ್ ಮರಿಮುಗಿಲೊಳ್ ಪೊಂಬಿಸಿಲೊಳ್ ಮಸಗಿ. ಗುರ್ದಿ ಜರ್ವಿ ಜಂಕಿಸಿ ಗೆಲ್ದು ನಿರಾಕುಳದಿಂ ಚಪನ್ನ ದೇಶಂಗಳೊಳ್ ಸಂಚರಿಸುತುಂ ನಾಡೆರೆಯರಿಟ್ಟ ಕೊಟ್ಟಜಮನೊಟ್ಟಯಿಸಿ ತಂದಿರೆಂತಂತು ಆಂ ಗೆಲ್ದು ೩೨೦ ಇಂತೊಂದು ಕಪ್ಪಕಾಣಿಕೆಗಳಂ ತಂದೆಂ ಎನುತಂ, ಉತ್ತರಿಯದಂಚಿನೊಳ್ ಕಟ್ಟಿರ್ದ ಪೂವು ಪಣ್ಗಳಂ ಮುಂದಿಕ್ಕಿ ಅಡ್ಡಬಿಳ್ದಂ. ಆಗಳಾ ಸುಭದ್ರೆಯುಂ ಸಂತಸ ಪೆರ್ಮೆಗಳೊರ್ಮೆಗೇ ಮೈಗೂಡಿದವೊಲ್

ಮೊಗವರಳ್ಚಿ ಮಿಣ್ಣನೆ ನೋಡುತಿರ್ದಳ್ ಬಾಳ್ಬಳ್ಳಿ ಕುಡಿಯ ಸೊಂಪಿನ ನೋಂಪಿನ ಬಲ್ಪಿನ ಬಿನ್ನಣದೇಳ್ಗೆಯಂ.

ಶ್ರೀಕೃಷ್ಣಂ–ಎಲೆಲೆ, ಬಲ್ಪಿನ ಬೀರ! ನಾಡೆರೆಯರ್ ತಲೆಮಣಿದಿಟ್ಟ ಕೊಟ್ಟಜವನೊಟ್ಟಯಿಸಿಯುಂ ಜಸದಗೆಲ್ಲವೆಣ್ಗೆ ಪೊಸಚೊಲ್ಲೆಯಂ ಸೂಡಿಯುಂ ಗೆಲ್ಮೆಯಿಂ ಪೈಭೋಗದಿಂ ಮರಳ್ದ ಬಿಲ್ಲಾಳ್ತನದ ಗಂಡುಗಲಿಯೆ ಕೊಳ್ಳೆ ಎನ್ನೀ ಕೈವೀಳ್ಯಮಂ! ನೀನಿನ್ನುಂ ೩೩೦
ಗಂಡರ ಗಂಡರಂ ಚಂಡರ ಚಂಡರಂ ಕಡಿದು ಕೊಚ್ಚಿ ರಣಕಾಳಿಗೆ ಬಿರ್ದಿಕ್ಕಿ ಬಿಲ್ ಬಿಜ್ಜೆಯೋಜೆಯಂ ಜಗದರಿಕೆಗೆ ತರಲಕ್ಕುಂ!

ನಲ್ಮಾತಿನ ಮೋದದಿಂ ವೀಳ್ಯಮೆನೆ ಎಲೆ ಪೂವಳಿಗಳಂ ಕೈಗಿಟ್ಟು ತಲೆಯೊಳ್ ಕೈಯಿಕ್ಕಿ ಸರಸವಾಡಿದಂ.

ಅಭಿಮನ್ಯು ನಗುನಗುತುಂ ಸಂತಸದ ಮೊಗಸಿರಿಯಿಂ ಸಂಬಂಧದ ಸಲ್ಗೆಯಿಂ ಏಂ ಇಂದೀ ಪೊಳ್ತಿನೊಳ್ ಕಜ್ಜಗಿಜ್ಜದ ಬೆಸನಮಿಲ್ಲದೆ ಸೋದರಿಯೊಡನೆ ವಿರಾಮಂ?

ಶ್ರೀಕೃಷ್ಣ–ನಿನ್ನಿರವು ಸೋದರಿಯ ಸೊಮ್ಮುಗಿಡಿಸಲ್ ಅಂನೆಲೆದಪ್ಪಿದುದು ಸಾಜಂ.

ಅಭಿಮನ್ಯು–ಅಂತೆಂದೊಡೆ ವಿಚಾರಮೇನೆಂದರಿಯಲಕ್ಕುಮೆ? ೩೪೦

ಶ್ರೀಕೃಷ್ಣಂ– ನಿನ್ನೀ ಬೀರತನಂ ನಿನ್ನಬ್ಬೆಯಂ ಕಂಗೆಡಿಸಲ್ ಆನುಮಿಲ್ಲಿದ್ದುರ್ಚಿತೋಕ್ತಿಯಿಂ ತಳ್ಕೈಸುವ ಭಂಗವೊದವಿತ್ತೈ. ಈಗಳ್ ನಿನ್ನ ಪುದುವಾಳ್ಕೆಯಿಂ ಸಂತಸದ್ಪೆಸಿರಿಯುಂ ಪೊದಳ್ದುದೆನ್ನ ಸೋದರಿಯ ಮೊಗದೊಳ್.

ಅಭಿಮನ್ಯು–ಇದೇಂ ರಹಸ್ಯ? ಇನ್ನುಂ ಅರಿಯದಾದೆಂ.

ಸುಭದ್ರೆ–ನೀಂ ಇನ್ನೆಬರಂ ಪಿಂದಿರುಗದಿರ್ದೊಡೆನ್ನ ಸೊಮ್ಮಳಿಯದೇಂ ಕಂದ?

ಅದರ್ಕಾಅಭಿಮನ್ಯು ಮಂದಹಾಸದಿಂ—ಅಯ್ಯಾಯ್ತು! ನೀಂ ನಿಂತಾದೊಡೆ ಮತ್ತಾರ್ಗೆ ಧೈರ್ಯಮಿರ್ಕುಂ ?

ಸುಭದ್ರೆ—ಇಂ ಎಳಯನೆಂಬೊಂದು ತಳ್ಳಂಕಮಿಲ್ಲದೊಡೇಂ ಭಯಂ ? ಅಣುಗತನದ ಆತುರಂ ಜಾನಂಗೆಡಿಪುದೆಂಬ ಚಿಂತೆ ಮಾತ್ರಂ. ಫಲ್ಗುಣ ಕುವರಂ, ಶ್ರೀಕೃಷ್ಣಸೋದರಳಿಯಂ ಬಲ್ಪಿನ ಬೀರನೇ ವಲಂ ಎಂಬುದಂ ಬಲ್ಲೆಂ. ೩೫೦

ಅಭಿಮನ್ಯು—ಓ, ಆನೆಳಯನೇಂ? ಇದೊ ನೋಡೆನ್ನ ತೋಳ್ವಲಮಂ ! ಈಗಳ್ ದೆಸೆದೆಸೆಗೊಡೆಯರ್ ಒಗ್ಗೂಡಿ ಬಂದೊಡಂ ಆಂ ಪಿಂಜರಿಯೆಂ !

ಸುಭದ್ರೆ—ಇದು ಅಣುಗು ಕಣಾ ! ಪುಡುಗು ಕಣಾ !

ಶ್ರೀಕೃಷ್ಣಂ ಆ ಮಾತಿನ ಬಲ್ಮೆಯ ನಲ್ಮೆಯ ಪೆಂಪಿನಲಂಪಿನಿಂ ಮೊಗದೊಳ್ ಸರಸಂಬರಿಸಿ—ಲೇಸು ಲೇಸೈ ಕಂದ! ಬಲ್ಪಿನ ಬಿಲ್ಲಾಳ್ತನದ ಉರ್ಕುಂ ಸೊರ್ಕುಂ ಅಣುಗುಮೆಂದೊಡಹುದುಮೆನಲಕ್ಕುಂ. ಇಂತೇಂ ಆತುರ ಕಾತರಂ? ಎಲ್ಲಂ ಇತಿಮಿತಿಯೊಳಿರ್ಕುಂ. ನಿನ್ನ ಬಲ್ಪಿನ ಬಿಲ್ಲೋಜೆಯುಂ ಕಂಡರಿತು ಆಂ ಪೆರತೇನಂ ಪೇಳ್ವೆಂ? ಬಲ್ಪಿನ ಬೀರರ್ಗೆ ಕ್ಷಾತ್ರ ಧರ್ಮದರಿವಿರ್ಕುಂ. ಕ್ಷಾತ್ರವೀರಂಗೆ ಮೊನೆಯೊಳ್ ಮಾತ್ರಮಲ್ತು ಕಜ್ಜಂ. ಬದ್ಕಿನೊಳ್ ಕಲ್ತು ನುರಿತು ಕುಲರತ್ನಮೆನಿಸಲಕ್ಕುಂ. ಪಿರಿಯರ್ಕಳ್ಗೆ ಪ್ರಿಯಸಿರ್ಕುಂ. ವಿಪ್ರರಂ ಮುನಿಜನಂಗಳಂ ಗೌರವಿಸಲಕ್ಕುಂ. ಸೇವ್ಯರಪ್ಪವರಂ ಎಂದೆಂದು ಕಡೆಗಣ್ಚದಿರ್. ನೊಂದವರಂ ನಡೆಗೆಟ್ಟವರಂ ನೋಯಿಸದಿರ್. ಮೊನೆಯೊಳ್ ನಿರಾಯುಧರಂ ಪಲಾಯಿತರಂ ಮುಚ್ಚಿವೋದರಂ ಪೊಯ್ಯದಿರ್ ಮೇಣ್ ಮರವನೇರ್ದರಂ ನೆಲಂಗಚ್ಚಿದರಂ ಮುಟ್ಟದಿರ್. ವತ್ಸಾ! ಕಡುಮೋಸದ, ಕವಡುಬಿಜ್ಜೆಯ, ಮುಚ್ಚು ೩೭೦

ಮರೆಯ ಕಾಳೆಗಂ ಮತ್ತಮಾ ಪೆರ್ಮ್ಮಲೆಯುಂ ಮಾಣ್. ನಿನ್ನ
ವೈಗಾಪಿನವರಂ ಸಾರಥಿಯುಂ ತೇಜಿಗಳಂ ರಾವುತರಂ ಭಟರಂ
ನಿನ್ನಂತೆ ಕಾಣುತುಂ ಕೈವಿಡದೆ ರಕ್ಷಿಸವೇಳ್ಕುಂ. ಮಾರ್ಮಲೆವರಿ
ರಾಯರಂ ದಿಟ್ಟತನದಿಂದಿದಿರ್ಚಿ ಕೊಚ್ಚಿ ಕಂಡರಿಸಿ ನರಿನಾಯ್ಗಳ್ಗೆ
ಬಿರ್ದಿಕ್ಕಲ್ ಬೆಸ್ನಾಗದಿರ್ ನೋಣ್ ಬೇಂಟೆಯೊಳ್ ಮರಿಗಳಂ
ಮರಿತಾಯ್ಗಳಂ ಗಬ್ಬದ ಪ್ರಾಣಿಗಳಂ ಕೊಲ್ಲದಿರ್ ಘಾತಿಸದಿರ್;
ಮತ್ತಮಾ ಸೊಬಗುಗುವ ಸತ್ ಪ್ರಾಣಿಗಳಂ ಮಾಣ್. ಈ ಮಾಳ್ಕೆ
ಯೊಳ್ ಬಲ್ಪಿನೇಳ್ಗೆಯುಂ ಧವಳಕೀರ್ತಿಯುಂ ನೀಂ ಗಳಿಸಲ್ಕೆ.
ಬರಿಪೆ ಕೆಚ್ಚಿನೊಳ್ ಪುರ್ಚಿನೊಳ್ ಏನುಂ ಪುರುಳಿಲ್ಲೈ. ಜಾನದಿಂ
ಬೀರದಿಂ ಆನ್ ತಾನೆಂಬಾಕೆವಾಳರ ಗೆಲ್ಲಣೆಯುಂ ಗಡಿಬಿಡಿಯುಂ ೩೮೦
ಕೆಮ್ಮನೆ ಮಾಂಜಿಸಿ ಕೊಳುಗುಳದೊಳ್ ನುಗ್ಗಿ ನುಣ್ಚಿಕೊಳ್ವುದಂ
ಅರಿಯಲಕ್ಕುಂ. ತಂತ್ರದಿಂ ಮಂತ್ರದಿಂ ಕೈಚಳಕಮಂ ಪಡೆದು
ಚಣಚಣಂ ಬಾಣಸಂಧಾನಂಗೆಯ್ವುದರೊಳ್ ಮೇಣ್ ಮೇಲ್ವಾ
ಯ್ದುಬರ್ಪ ಕೂರ್ಗಣೆಗಳಂ ನಡುವಟ್ಟೆಯೊಳ್ ತುಂಡರಿಪುದರೊಳ್
ಕಡುಜಾಣನಪ್ಪುದು. ಇದು ರಣ ರಹಸ್ಯಂ. ಕ್ಷಾತ್ರಧರ್ಮಸೂತ್ರಂ.

ಅಭಿಮನ್ಯು—ಆಯ್ತಾಯ್ತು. ನಿಮ್ಮ ಜಾನಂಬಲದೊಳ್
ಪೊಕ್ಕು ಎಲ್ಲವಂ ಅರಿತು ನುರಿತು ಪಕ್ಕಾಗಲ್ ಪರಸೈ.

ಸುಭದ್ರೆ—ಅಹಃ ನನ್ನಿಗವಸುಳೆ! ನೀಂ ಕೊಳುಗುಳದ ಬಿಜ್ಜೆ
ಯುಜ್ಜುಗಮಂ ಕೈಕೊಳ್ವ ಮುನ್ನಂ ಪಿರಿಯರ್ಗೆ ಪಣೆಮಣಿದುಂ,
ಸಜ್ಜನರಂ ಭಾವಿಸಿಯುಂ, ಬೆನಕನಂ ಪರಕೆಗೈದುಂ, ರವಿಯುಂ ೩೯೦
ಪ್ರಾರ್ಥಿಸಿಯುಂ, ಹರನಂ ಧ್ಯಾನಿಸಿಯುಂ, ಬೆಸೆವಳರಂ ಬೇಡಿಯುಂ,
ಸಗ್ಗದಾಣ್ಮನಂ ನಮಿಸಿಯುಂ ಪರಕೆಯಂ ಪೊತ್ತು ಕೊಳ್ಳಲ್
ಎಂದುಂ ಮರೆಯದಿರ್.

ಅಭಿಮನ್ಯು—ಏಗಳುಂ ನಿಮ್ಮುಪದೇಶಮಂ ಮನದೊಳಿಕ್ಕಿ
ಕಜ್ಜಮಂ ಕೈಕೊಳ್ವೆಂ. ಮೊನೆಯೊಳುರುಬಿ ಬರ್ಪ ಕೈದುಕಾರರ

ಜರ್ವಿನ ಕೊರ್ವಿನ ಗೊಂದಣದಗ್ಗಿಯಂ ಬೊಕ್ಕು, ದಿಟ್ಟತನದಿಂ
ನಂದಿಪೊಂದು ಜಾಣ್ಮೆಯಂ ನಿಮ್ಮ ಪರಕೆಯೊಳ್ ಪಡೆದಪೆಂ. ಅರಿ
ಗಳ್ ಪಿಂದುಂ ಮುಂದುಂ ಸಂದಣಿಸಿ ಬಗೆವಗೆಯ ಶಸ್ತ್ರಾಸ್ತ್ರಗಳಂ
ಪೂಡಿ ಮಾರ್ಮಲೆದು ಸಿಡುಗೋಲ್ಸರಿಯಂ ಕರೆದೊಡಂ ಅಂಜದೆ
ಪಿಂಜರಿಯದೆ ಜಗ್ಗದೆ ಕುಗ್ಗದೆ ಮಾರೊಡ್ಡಿ ಅರಿಕುಲಮಂ ಸೆಂಡಾಡಿ ೪೮೦
ಭೂಭಾರಮಂ ಕಳೆವೆಂ.

ಶ್ರೀಕೃಷ್ಣಂ–ಭಲೆ! ಭಲೆ!

ಸುಭದ್ರೆ–ಭಳಿರೆ! ಕುವರ!

ಆಗಳ್ ನಭನೀಲಿಯೊಳಡರ್ದ ರವಿಯ ಸಪ್ತಾಶ್ವಂಗಳ
ಪೊಂದೇರುಂ ನಿಚ್ಚಪಯಣದೊಳ್ ಮುನ್ನಡೆದು ಸಾರ್ದು
ಸೀಮಾಂತರಮುಂ ಸೇರ್ದು ಬಳಲ್ದಶ್ವಸಪ್ತಕಮುಂ ನೀಲ್ಗಡಲಂಚಿ
ನೊಳ್ ಮೆಯ್ಗರ್ಚಿ ನೀರ್ಕುಡಿಸಲ್ಕೆಂದು ಒಯ್ಯೊಯ್ಯನಿಳಿದಂತೆ
ಯುಂ ಪಡುಸೀಮೆಯ ಮುಗಿಲಂಚಿನಿಂ ತಳತ್ತಳಿಸುತ್ತಿಳಿಯುತ್ತಿರ
ಲೊಡಂ ಸೀಮೆಯುಂ ಪೊನ್ನರಾಗದಿಂ ಕೆಂಗಲಿಸಿ ಪೀತಾಂಬರಮ
ನುಟ್ಟ ಮುತ್ತೈದೆಯೊಲ್ ಕಣ್ಗೆಡ್ಡಮಾದುದು. ವಸುಧೂರದ ಸಿರಿ ೪೯೦
ಮೊಗದ ಪಚ್ಚರಾಗದ ಚೆನ್ನುಡೆಯುಟ್ಟು ಬೆಟ್ಟುಗಳೊಡೆಯ
ನಪ್ಪಂತೆಯುಂ, ನಿಮಿರ್ದು ನಿಂತ ಕರ್ವೆಟ್ಟಿನ ಪದತಲದ ಬೆಳ
ರ್ವಣ್ಣ ಪಿರಿಯ ಕಡಾಯದವೊಲ್ ತುಂಬಿರ್ದ ಕರ್ನೀಲ ಇಕ್ಷು
ಗಣೆಯ ತನಿರಸಮೆಂಬಂತಿರೆ ಕಳಿಂದಜೆಯ ಕಮ್ಮಡುವಿನೊಂದು
ಪಾಂಗಿನಿಂ, ಮೆಲ್ಲನೆ ಚಲಿಸುತಿರ್ಪ ತಿಳಿನೀರ್ಗನ್ನಡಿಯೊಳ್ ಪ್ರೈ
ಪೆತ್ತು ಪಸುರೆಲೆಯ ಪಚ್ಚಪೀಠದೊಳ್ ಮಂಡಿಸಿ ಬಂಡೊಸರ್ವ
ಪುಂಡರೀಕಂಗಳಂ ಪೊಂಬಿಸಿಲುಂ ಪೊಂಗಾಂತಿಯೊರೆದು ಮುದ್ದಿಸು
ತಿರೆ, ನೀರ್ವಕ್ಕಿಗಳ್ ವಿಹಾಂಗಳ್ಗೆರೊಯ್ಯನೆರಗೆ ತಿಳಿನೀರುಂ ಚಲಿಸಿ
ಪೊನ್ನೇಸರ ಪ್ರತಿಬಿಂಬಂ ನಲಿನಲಿದು ಕುಣಿಯುತಿಹುದೋ ಎನಲ್ಕೆ
ಪುಂಡರೀಕಂಗಳ ಮಧ್ಯೆ ಕಣ್ಗೆಸೆದುದು ಚಲಿಸಚೆಲ್ವಿನಾಗರಮಾಗಿ. ೫೦೦

ಮಡುವಿನಗಲಂ ಎಡೆಎಡೆಯೊಳ್ ಬಂಡೆಳ್ದಂತೆ ಮೈಯೊಡೆದ ಒಗೆ
ಬಗೆಯ ಬಣ್ಣಬಣ್ಣದಿಂದೊಪ್ಪುವ ನೈದಿಲೆಗಳಿಂದೊಸರ್ವ ನರು
ಗಂಪಿನಾಗರದಿಂ ರೊಯ್ಯನೆ ಪಾರಾಡುತುಂ ಜೇಯೆಂದು ಜೇಂಕರಿ
ಸುತುಂ ಬಳಿಗೊಂಡೆಯ್ತಂದ ಜೇನ್ದುಂಬಿಗಳುಂ ಕಮಲಿನಿಯ
ಕಮಲ ಮುಖದ ಕತ್ತುರಿಯ ಬೊಟ್ಟನನುಕರಿಸಿ ರಯ್ಯಮೊಪ್ಪಿರೆ,
ಅಂಚೆವಿಂಡು ಬಾಯ್ದೆರೆದು ಕೇಂಕರಿಸಿ ಕದುರ್ಂಕಿಸಿಂದಪ್ಪಳಿಸುತ್ತೆ
ಮುಂಬರೆ ಕಂಡು ಬೆದರಿ ನೀರೊಳಗೊಳಗೆ ಪಳಕ್ಕನೆ ಚಿಮ್ಮಿ
ಚಳಕ್ಕನೆ ಮೆಯ್ಗರೆವ ಮೀಂಗಳಿಂ, ಅಲ್ಲಿಂದಿಲ್ಲಿಗಂ ಹೊಂಚಿನಿಂ
ಸಂಚಿನಿಂ ಪಾರಾಡುತಿರ್ದ ನೀರ್ವಕ್ಕಿಗಳಿಂ, ತಿಳಿಗಾಳಿಯಲೆಪದಿಂ,
ಬೈಗಿನ ಪೂಗಂಪಿನಿಂ ನಿಡುಮರವಳ್ಳಿಗಳ ಪಚ್ಚವಣ್ಣದಿಂ, ಮಣ್ಗಂಪಿ ೪೩೦
ನಿಂ, ನೀರ್ಗಂಪಿನಿಂ, ತಣ್ಗಂಪಿನಿಂ ಸಗ್ಗಸೊಗಂ ಪೊದಳ್ದು ಸಂಜೆ
ವೆಣ್ಣ ಕೈಪಿಡಿಯೆಂಬಂತಿರೆ ಕಣ್ಗೆಸೆದತ್ತು ಆ ನಿಡುದಾಣಂ.

# ಷಷ್ಠಾಶ್ವಾಸಂ

ಪೊಡವಿಯೊಳ್ ಪಡಿನಿಂದ ಮೇಗುವೆಟ್ಟಿನ ಪದಸರಂ ನೂರಾರು ಬಗೆಯಿಂದೊಪ್ಪುವ ಗಿಡುಮರವಳ್ಳಿಗಳಿಂ ನೆರೆದುಂಬಿ ನಿಚ್ಚಂ ಪೊಳೆವ ನಿಡುಪಟ್ಟಿಯೊಳ್ ಪೊದಳ್ದು ರಮ್ಯಮಾಗಿ ಬೆಳ್ಳಿಯಂತೆ ಬೆಳಂಗುವ ನೇವಾಳಮೆಂಬಿನಂ ಪೊನಲ್ವರಿದು ಪುಣ್ಯತೀರ್ಥಮಾದ ಪಯೋಷ್ಣೀನದಿಯ ಕೂಲದೊಳ್ ಬೇರಿಟ್ಟು ಮುಗಿಲುದ್ದಂ ಬೆಳೆದ ತೋರಮರಂಗಳಂ ಜಡಿಕುಟ್ಟಿ ನೂಂಕುವ ಪಳಂಚಲೆವೆಲರಿಂ, ಗಿಡುವಳ್ಳಿಗಳ ಪಾರಗೊಂಜೆಯನೇರಿ ಅತ್ತಮಿತ್ತಂ ಪಾರ್ದುರ್ ಎರೆಂಕೆಯೊದರಿ ಕುಕಿಲ್ವ ಕೊಂಚೆವಿಂಡುಗಳಿಂ, ಹಾಡಿ ಪಾಡಿ ಮೊರೆವ ಬಾಸೆವಕ್ಕಿಗಳ ಜಾನದುಲಿಯಿಂ, ಪೊಂಬೆಟ್ಟಿನ ಕೋಲ್ಗಲ್ಲನೇರ್ದುರ್ ಬೆಳಗಿನ ಬೆಚ್ಚನೆಯ ಕೆಂಬಿಸಿಲ ಬೆಳಗಿಂಗೆ ಮಿರುಗುವ ರೂವೆನೆ ಮಿಗದ ೧೦
ಮೆಯ್ಸಿರಿ, ಪರಿವ ನೀರೊಳ್ ತಣಕ್ ಪಣಕೆನ್ನುವ ಜಲ ಚರಂಗಳಂ ನುಂಗುವ ಸಂಚಿನೊಳ್ ಕಾದಿರ್ದ ಧವಳಶ್ರೀ ಸೋರ್ವ ಬನವಕ್ಕಿಗಳಿಂ, ದಟ್ಟಡವಿಯ ಪಸುರ್ವುಲ್ಲುಂಡು ನಿರ್ವೈರದಿಂ ಕೂಡಿ ಬಾಳ್ವ ವಿವಿಧ ಮೃಗಂಗಳ ನಿಚ್ಚಟದ ನೇಹದಿಂ ಎವೊಳ್ತುಂ ಕಣ್ಗೆಡ್ಡಮಾದುದು ನಲ್ ಪ್ರದೇಶಂ.

ನದೀಕೂಲದೊಳ್ ಅಲ್ಲಲ್ಲಿ ಮೊಯ್ಗೊಂಡು ದಿಂಡುರುಳ್ದ ಬಂಡೆಗಳ ಪೇರಾಶಿಯೊಳಿರ್ದ ಕರ್ಬಂಡೆಯನೇರ್ದು ಕೋಡುಗಲ್ಗೆ ಬೆನ್ನಾಂತು ಸತಿಯೊಡನೆ ಕುಳ್ಳಿತಿರ್ದ ಅಭಿಮನ್ಯು ಸುತ್ತಮಿತ್ತಂ ಕಣ್ಣಿಟ್ಟು ದಿಟ್ಟಿಸಿ ನೋಡುತಿರೆ, ರೊಯ್ಯೆಂದುಂ ಗೇಯೆಂದುಂ ಸುಯ್ಯೆಂದುಂ ಸುಯ್ಯುತ್ತೆ ನುಗ್ಗಿ ನೂಂಕುವಂದದೆ ತೀಡಿವರ್ಪ ೨೦

ತಣ್ಣನೆಯ ಬನಗಾಳಿಯಿಂ ಸಂದ ಸಂತೃಪ್ತಿಯಿಂ ಮಡದಿಯಂ
ಮಾಲಿಸುತುಂ ಬೆನ್ನೊಳ್ಕೈಯಿಕ್ಕಿ ನಲ್ಮೆಯಿಂ ನೇವರಿಸಿ–ಓ, ಎನ್ನ
ಪೊನ್ನರಸಿ ! ಇದೇಂ ಮೌನಂ ? ಆವ ಚಿಂತೆ ಕಾವಳಿಸಿದುದು
ನಿನ್ನ ಮನಮಂ ?

ಎಳನೇಸರ ಪೊಸವೆಳಗಿಂಗೆ ರಂಗೊರೆದ ಪೊಂದಾವರೆಯಂತೆ
ಮೊಗವರಳ್ಪ ವನಲಕ್ಷ್ಮಿಯೊಲ್ ಕಣ್ಗೆಸೆವ ಮೋಹದ ಸಖಿ ಉತ್ತ
ರೆಯುಂ ಸರಳಸ್ಮಿತದೊಡನೆ ಪಡಿನುಡಿದಳ್–ಚಿಂತೆಗಿಂತೆ ಏನಿಲ್ಲೈ
ರಮಣ ! ಇಂತು ಸಿರಿಸೊಬಗಿನ ಭೂರಮೆಯುಂ ಮನಮಂ ಸೂಜಿ
ಗಲ್ಲಿನೊಲ್ ಸೆಳೆಯುತಿರೆ ಎಲ್ಲಿಯ ಮಾತು ?

ಅಭಿಮನ್ಯು–ಓ....ಅಂತೇಂ ? ೩೦

ಉತ್ತರೆ–ನೋಡಿದಸಿತುಂ ಸಾಲದೈ ರಮಣ !

ಅಭಿಮನ್ಯು–ಕೇಳಯ್ ನಿಚ್ಚ ಲಚ್ಚಣದ ಸಿಂಗಾರಿಯೆ !
ಎನ್ನ ಮುದ್ದಿನ ಅರಗಿಳಿಯೆ ! ಕಾಲಂ ತೇಜವೆಂತಂತು ನಿಸ್ತೇಜಂ
ಗಡ ! ನಿಚ್ಚಟವೆಂತಂತು ಚಂಚಲಂ ಗಡ ! ನಿರ್ವೈರವೆಂತಂತು
ರೋಷ ಭೀಷಣಂ ಗಡ ! ಸುಕಸಂಪದವೆಂತಂತು ದುಕ್ಕದ
ಗೋಳಕ್ಕುಂ ಗಡ ! ಅಂತಿಂತು ವೇಲೆವೇಲೆಯೊಳ್ ಬಣ್ಣಂಗೆದರಿ
ನಾಡಂ ಬೀಡಂ ಕಾಡಂ ಆಳ್ದ ತೂಳ್ದ ಗುಣಮಣಮಂ ಲೆಕ್ಕಿಸದೆ
ತನ್ನಿರವಂ ಕೇಳಿಸುವನಕ್ಕುಂ ಲೋಕಲೋಕಾಂತರದೊಳ್ !

ಉತ್ತರೆ–ಅರಿತೆಂ ರಮಣ !

ಅಭಿಮನ್ಯು–ಸಾಮಾನ್ಯಮೆಂತಂತು ಗಣನೆಗಿಲ್ಲಂ ಕಾಲಭೈ ೪೦
ರವಂ. ಬರಿದೆ ಕಣ್ಗೆಂಬಾದುದರೊಳ್ ಮನವಿಡುವರ್ ಲೋಕದ
ಲೋಗರ್.

ಉತ್ತರೆ–ಅಪ್ಪುದಪ್ಪುದು ಚೆನ್ನರಸ ! ಕಣ್ಗೆ ಕಂಡುದುದು ಸುಲಭಮಲ್ತೆ ಲೆಕ್ಕಿಸಲ್ ? ಅದೃಶ್ಯ ವಸ್ತುವಂ ಪುಡುಪುಡುಕಿ ಕಾಂಬನಿತು ಸೈಪು ಆರಿಗಿರ್ಕುಂ ?

ಅಭಿಮನ್ಯು–ಸಾಜಂ ರಮಣಿ !

ಉತ್ತರೆ–ನಲ್ದಾಣಂ ಏಂ ಸೊಗಂ ?

ಅಭಿಮನ್ಯು– ನೀನೆಂದುಂ ಇಲ್ಲಿಗೆಯ್ತರಲಿಲ್ಲವೇಂ ಪಿಂತೆ ಕಮಲನಯನೆ ?

ಉತ್ತರೆ–ಈಯೆಡೆಗೆನ್ನ ಭೇಟಿ ಇದೆ ಮೊದಲಲ್ತೆ ? ಬಡಗಣ ತೀರದೊಳಾಂ ಅಜ್ಜಿಯರೊಡಂ ಬುತ್ತಿಯನುಂಡಿರ್ದ್ದುದುಂಟೈ ಪಲವುಂ ಬಾರಿ. ಇಲ್ಲಿಗಿನ್ನೆಬರಂ ಬಂದೆನಿಲ್ಲಂ. ೫೦

ಅಭಿಮನ್ಯು–ರಮಣೀಮಣಿ ! ಅಂತಾದೊಡೆ ನೀನಿಲ್ಲಿ ಸಗ್ಗದ ಸುಧೆಯಂ ಕಾಣ್ಬೆಯಲ್. ಏಗಳುಂ ಆನಿಲ್ಲಿಗೆ ಬೇಂಟೆಗುಯ್ವ ದಾರಿಯೊಳ್ ಬಂದಪೆಂ. ಆದೊಡಂ ಆನಿಲ್ಲೆಂದುಂ ಬೇಂಟೆಯಾಡಿದೆನಿಲ್ಲಂ. ತಪೋವನ ಪ್ರಭಾವದಿಂ ಎಲ್ಲವಗೆಯ ಪ್ರಾಣಿಗಳುಂ ನಿರ್ವೈರದಿಂದಿರ್ಪುಂ ಈ ಎಡೆಯೊಳ್.

ಉತ್ತರೆ–ಅಂತೇಂ ರಮಣ ? ಆಹ, ಏಂ ಶಾಂತಿ ? ಏಂ ತಣ್ಪು ? ಭಾವಿಸಿದನಿತುಂ ತಣಿಯದೈ ಮನಂ. ಎಲ್ಲೆಡೆಯುಂ ಇಂತಿರ್ದೊಡೆ ಏಂ ಆನಂದವೊ ಜಗಂ ? ೬೦

ಅಭಿಮನ್ಯು–ಆಯ್ತಾಯ್ತು. ಇಂತಿರ್ದೊಡೆಲ್ಲಿಯ ನಯಂ ತೃಣಂ ?

ಉತ್ತರೆ ಮನದೊಳ್ ಯೋಚಿಸುತುಂ ನಸುನೊಯ್ತು ಬಿಣ್ಣಿರ್ದು–ಆರ್ಯಪುತ್ರ ! ಇದಾರ ತಪೋವನಂ ?

ಅಭಿಮನ್ಯು–ಕೇಳ್, ಎನ್ನ ರಾಮಾಭಿರಾಮೆ ! ಪಿಂದೊರ್ಮೆ ಅಗಸ್ತ್ಯಮುನಿಪಂ ಸತಿ ಲೋಪಾಮುದ್ರೆಯೊಡನೆ ವಾಸಿಸಿರ್ದ ತಾಣಮಿದು. ಮೃಗಪಕ್ಷಿಗಳ್ ನಿರ್ಭಯದಿಂ ನಿರ್ವೈರದಿಂ ಕೂಡಿ ಬಾಳಿರಲ್ಕೆ ತಪೋವನದ ಸತ್‌ಶಾಂತಿಯುಂ ಕಾರಣಂ.

ಉತ್ತರೆ–ಇಂತಪ್ಪ ಶಾಂತಿಯಿರೆ ಬಾಳೆನಿತು ಧನ್ಯಂ ?

ಅಭಿಮನ್ಯು–ಜನ್ಮಯೋಗಂ.... ೭೦

ಉತ್ತರೆ–ಅಂತೆಂದೊಡಂ ಅರಿತರಿತು ಕಳ್ವ, ಕಳ್ದು ತಿಂಬ ಅತಿಯಾಸೆಯ ತಿಳಿಗೇಡಿ ಲೋಗರ್ಗೆ ಯೋಗದಿಂ ಏಂ ಬಹುದು ? ಎಲ್ಲಂ ಕಿಡಿಗೇಡಿತನಮಲ್ತೆ ? ಮಚ್ಚರಮಲ್ತೆ ? ಅವಿಚಾರಮಲ್ತೆ ಪೇಳ್ ಎನ್ನರಸ ?

ಅಭಿಮನ್ಯು–ಅಂತದುಂ ಜನ್ಮಯೋಗಂ ಕಾಣ್. ಸುಕ ದುಕ್ಕ ಶಾಂತಿಸಂಕಷ್ಟಂ ಎಲ್ಲಂ ಜನ್ಮಯೋಗದಿಂದಲ್ತೆ ಬಪ್ಪುದು ?

ಉತ್ತರೆ–ಈ ವಿಚಾರದೊಳ್ ಮನವಿಟ್ಟರೆ ಎರ್ದೆ ಸುಡುಗುಂ ನಡುಗುಂ ಆರ್ಯಪುತ್ರ !

ಅಭಿಮನ್ಯು–ಅಹ, ಹಅಳ್ಕಿದೊಡೆ ಬರಿ ಪುಡುಗುಂ ಎನಿಸು ಗುಂ ರಮಣಿ! ಇಂತವಿಚಾರಗಳೊಳ್ ಮನವಿಟ್ಟರೆನ್ನ ಬಿಸಿನೆತ್ತರ್ ೮೦ ಕೊತ ಕೊತ ಕುದಿದು ಶೌರ್ಯ ಸಾಸವೆರ್ಚೆ ಯುದ್ಧ ಸನ್ನಣಕ್ಕಣಿ ಯನ್ನಪ್ಪುದೆನ್ನ ಪುತಿ ಚಣದೊಳ್. ಬರಿದೆ ಅಳ್ಕಿದೊಡೆ ಏಂ ಬಹುದು ? ಕ್ಷಾತ್ರಕುಲಜರ್ಗೆ ಕ್ಷಾತ್ರ ಧೈರ್ಯವಿರವೇಳ್ಕುಂ.

ಉತ್ತರೆ–ಅದು ಪುರುಷರ್ಗಕ್ಕುಂ.

ಅಭಿಮನ್ಯು–ಚೆನ್ನರಸಿ ! ನೀಲಕುಂತಳೆ, ಕೇಳ್ ! ಕ್ಷಾತ್ರ ಕುಲದೊಳ್ ಸಂಜನಿಸಿ ಧೀಮಂತೆಯಾಗಿರ್ದು ಇಂತಿದೇಂ ಗಾವರಂ

ಮನದೊಳ್ ? ಎನಗಂ ಕೆಚ್ಚಿನ ಕಿಡಿ ಸುಡುಗುಂ ಮೆಯ್ಯಂ. ಇನ್ನೆಗಂ ಅಬ್ಬೆಯ ಕಾಪು. ಮುತ್ತಬ್ಬೆಯ ಪೆರ್ಮೆಯ ನಲ್ಮೆ, ಪೆತ್ತಯ್ಯನ ಬಲ್ಮೆ, ಅಂತರ್ವತ್ನಿಯ ಆತಂಕಂ ಕಾಯ್ದಿರ್ಪುದೆನ್ನಂ. ಪೋ ! ಇನ್ನಾಂ ಮಣಿಯೆಂ. ಆನೆಳಯನಾದೊಡಂ ಎನ್ನ ಬಿಲ್ ವಿಜ್ಜೆಯೆಳಯದೇಂ ? ನೀನೊರ್ಮೆ ನೋಡಲಕ್ಕುಮೆನ್ನ ಭುಜ ಬಲಮಂ. ಎಳತನಮೆಂಬುದು ಬರಿಯ ಸಂಕೆ ಮಾತ್ರಂ.

ಉತ್ತರೆ–ಆರ್ಯಪುತ್ರ! ಆನರಿಯೆನೇನದಂ ? ಬೀರಂಗೆ ರಣ ಕ್ಷೇತ್ರದಿಂದಲ್ತೆ ಕೀರ್ತಿಲಕ್ಷ್ಮಿಯೊಲಿಪೊಡೆ ? ಆದೊಡಂ ಧರ್ಮ ನೀತಿಗಳಂ ಕಡೆಗಣ್ಚಿ ದಾನವರೆತ್ತ ಕೂಳರೊಳ್ ರಣಮಂ ಕೈಕೊಳೆ ಅನೀತಿ ಅಧರ್ಮಂಗಳೊಳ್ ತಲೆ ತರಿವರೆಂಬುದೊರ್ ತಳಮುಳಂ ಮನದೊಳ್.

ಅಭಿಮನ್ಯು–ಹೆ, ಎನ್ನ ಭಾವನಾಮಣಿ! ಸೈರಿಸು. ಇಂತಪ್ಪ ವಿಚಾರಂ ಇರ್ಕುಂ. ಅಂತೆಂದು ರಣಕೆ ಬೆನ್ನಾಗಲಕ್ಕುಮೆ? ಎಲ್ಲೆಡೆಯುಂ ಧರ್ಮಜ್ಞರಿರೆ ರಣಮೆಲ್ಲಿರ್ಕು? ಕೂಳರ್, ಧೂರ್ತರ್, ರಕ್ಕಸರ್ ಇರ್ಪೆಡೆಯೊಳ್ ರಣಮಿರ್ಕುಂ. ೧೦೦

ಉತ್ತರೆ–ಅದು ಸಾಜಮೆಂದೊಡಂ........

ಅಭಿಮನ್ಯು–ಮತ್ತೇಂ ಅಳ್ಕಿನ ಬಳ್ಕಿನ ಅರೆಮನದುಕ್ತಿ ?

ಉತ್ತರೆ–ಓ, ರಮಣ ! ಕ್ಷಾತ್ರಕುಲ ಪುತ್ರಿಗೆತ್ತಣ ಅಳ್ಕು ? ಕುಲಕೀರ್ತಿಯೇಳ್ಗೆಗೆ ಎರ್ದೆಯ ಸಂಭ್ರಮವುಕ್ಕಿ ಕೋಡಿವರಿದು ತಾಂ ಸಲ್ವುದು ಪಗಲೆಣೆಯಾಗಿ. ಆದೊಡಂ ಈಯೊಂದು ಕೂಳ ರೊಳ್ ರಣಮೆಂದೊಡೆ ನೀತಿ ನ್ಯಾಯಂಗಳೆಲ್ಲಿರ್ಕುಂ ?

ಅಭಿಮನ್ಯು–ಬಿಡು, ಬಿಡು. ನೀತಿ ನ್ಯಾಯಂ ಎಂದೋ ಗತಿ ಗೆಟ್ಟಿರ್ಕುಂ. ಭಾರತ ಯುದ್ಧಂ ಸಾರ್ದು ಕುರುಕ್ಷೇತ್ರಂ ರಣಬೆಂಕೆ

ಯೊಳ್ ಕುದಿಕುದಿದು ಬೆಬ್ಬಳಿಸುತಿರ್ಕುಂ. ಚಂಡ ಭಂಡ ಗಂಡು ೧೧೦
ಗಲಿಗಳ್ ತಂಡತಂಡದಿಂ ಬಂದೆರಗಿ ಗಂಡಗರ್ವದಿಂ ಧನುಷ್ಟಂಕಾರ
ಗೆಯ್ದು ರಣರಂಗಕ್ಕಿಳಿಯೆ ಕೋಪದ ಕಾಯ್ಪೇರಿ ನಾಡುಂ ಕಾಡುಂ
ಬೆರ್ಚಿ ನಡುನಡುಗಿ ಧೀಂಕಿಟ್ಟು ಮಸಣದೊಳ್ ಗಸಣಿಗೆಯ್ವ
ಮಿಳ್ತಿನ ಮಾರಿಯಂತೆ ರಣಕಾಳಿ ತತ್ತಳತುಳಿವಳ್ ಗಂಡರಗಂಡರಂ.
ಇಂತಪ್ಪ ರಣಕೇಳಿಯುಬ್ಬರಮಂ ನೋಡುನೋಡುತುಂ ಎರ್ದೆ
ಗುಂಡಿಗೆಯೊಳ್ ಬಿಸಿನೆತ್ತರ್ ಕುದ್ದುಉಕ್ಕುಕ್ಕಿ ದಿಮ್ಮನೆ ದುಮ್ಮಿಕ್ಕಿ
ಧಮನಿಗಳ್ಗೆ ರಣಕೆಚ್ಚುವೆರ್ಚೆ ಕೆನ್ನೆತ್ತರಂ ಪೀರ್ವ ಪುರ್ಚಿನೊಳ್
ಗದಗದಿಪುದು ಮನಂ. ಪೋ ಇನ್ನಾಂ ಬಿಡೆಂ. ಎಂದಾದೊಡಂ ಪುಗು
ವೆಂ ರಣರಂಗಮಂ. ಸಾಕಿನ್ನು ಎಳತನಮೆಂಬ ಈ ಮುದ್ದಿನ
ಅಕ್ಕರೆಯ ಪೆಣ್ ಬಾಳ್ಕೆ! ಆಂ ಪೆಂಬೇಡಿಯಲ್ತು, ಅಂತಃಪುರದೊಳ್ ೧೨೦
ಅಡಗಿ ಕುಳ್ಳಿರೆ ; ದೇವಿ ಕೇಳ್ ! ನೀಂ ರಣವೀಳ್ಯಮಂ ಕೈಗಿತ್ತು
ತಿಲಕವಿಕ್ಕಿ ಪತಿಯಂ ಪೆರ್ಮೆಯಿಂ ಬೀಳ್ಕೊಳ್ವ ಪದಂ ದೂರಮಿಲ್ಲಂ.
ಆನಿನ್ನು ರಣಗಿಚ್ಚಿನೊಳ್ ಕೆಚ್ಚೆದೆಯಿಂ ನುಗ್ಗಿ, ಪೋರ್ದು ಜಡಿಕುಟ್ಟಿ
ಚೆಚ್ಚಿ ಕೊಚ್ಚಿ, ರಣದೇವಿಗೆ ರುಂಡಮಾಲೆಯಿಕ್ಕಿ ಜಯಭೇರಿಯಂ
ಬಾರಿಸಲಿರ್ಪೆಂ !

ಉತ್ತರೆ–ನಿನಗಂ ರಣಕಾಳಿಯ ರಕ್ಷೆ ಆರ್ಯಪುತ್ರ !

ಅಭಿಮನ್ಯು–ದೇವಿ ಚೆನ್ನರಸೀ! ನೀನಹುದು ವೀರರಮಣಿ!

ಉತ್ತರೆ–ಈಗಳೊಂದು ಪ್ರಶ್ನೆಯಿರ್ಕುಂ ರಮಣ.

ಅಭಿಮನ್ಯು–ಮತ್ತೇಂ ಸಂಕೆ ?

ಉತ್ತರೆ–ಇಂತಪ್ಪ ಪಿರಿಯರ್ಕಳಿರೆ ಇಂತೇಂ ಅವಸರಂ? ೧೩೦
ಈಗಳ್ ನೀಂ ನುಗ್ಗುವ ಕತಮೇನಿರ್ಕು ?

ಅಭಿಮನ್ಯು–ಅಹ, ಎನಿತುಕಾಲ ಸೈರಿಸಲಕ್ಕುಂ ? ಒರ್ಮೆ

ಮುಗುರ್ಚಿದೊಡೆ ಅನಂತರಂ ನಿರ್ಮೂಲಮಲ್ತೆ? ಇನ್ನೆಬರಂ ಪಿರಿಯ
ರ್ಕಳ್ ರಾಜ್ಯಕೋಶಂಗಳಿಂ ದೂರಮಿರ್ದು ಕುಲಗೇಡಿಗಳ ಮಚ್ಚ
ರದಿಂ ಬೆಂದೊಡಂ ನೀತಿಗೆಡದೆ ಕಷ್ಟನಷ್ಟಗಳ ಬಂಡುಂಡು ಬಾಳ್ದರ್
ಮೂಲೋಕಂ ಮೆಚ್ಚಿ ಬೆರ್ಚಿ ತಲೆದೂಗುವವೊಲ್. ಆದೊಡಂ
ಧೂರ್ತರ್ ಮಣಿಯಲಿಲ್ಲಂ. ಇನ್ನುಂ ಸಿಂಗಂ ಸಿಂಗಮನಿದಿರ್ಚು
ವಂತೆ ಕಾರಾನೆಯುಂ ಪೇರಾನೆಯನಿದಿರ್ಚುವಂತೆ ತಾಗಿ ಮೋದಿ
ಪಾಪ ಪಂಕಿಲಯೊಳ್ ಪೊರಳ್ವ ಪಂದಿಗಳಂ ತುಂಡರಿಸಿ ಮುಕ್ಕಡಿ
ಗೆಯ್ದು ಮೂದೆಸೆಗಿಕ್ಕುವುದು ಲೇಸು ; ಕಡುಲೇಸು. ೧೪೦

ಉತ್ತರೆ–ಇದೇಂ ಬರಿದೆ ಕೈಗೂಡಲಕ್ಕುಮೆ? ಸಾಸಂಬಡ
ಲಕ್ಕುಂ. ತಲೆಗುಡಲಕ್ಕುಂ. ಕೊನೆವರಿಯದಾ ಕಜ್ಜಮಿದುಂ. ನೆನೆ
ದೊಡಂ ಮೈನವಿರ್ ನಿಮಿರ್ವುದು ಆರ್ಯಪುತ್ರ !

ಅಭಿಮನ್ಯು–ಅಂತೆಂದೊಡೆ ಈ ಪಾಡುಗೆಟ್ಟ ನಾಡಂ ದೆಸೆ
ಗೆಟ್ಟ ಲೋಗರಂ ರಕ್ಷಿಪುದೆಂತು ಪೇಳ್ ?

ಉತ್ತರೆ–ಎನ್ನರಸ! ಇಂತಪ್ಪ ಕಟ್ಟೊತ್ತಾಯದ ಸಂಗ್ರಾಮ
ಕೋಲಾಹಲಂ ನಲ್ವೆಂಡಿರ ಮಂಡೆಯುಂ ಮುಂಡನಂಗೆಯ್ದು
ಗೋಳಿಂಗೆಡೆಗೊಟ್ಟು ಮನೆಯುಂ ಪಾಳ್ಗಿಡುಗುಂ. ಜುದ್ದಂ
ಘೋರಾತಿಘೋರ ಪಾತಕಮಲ್ತೆ ? ಆ ವಿಚಾರದೊಳ್ ಮನವಿಡಲ್
ಕಂಬನಿಯೊಸರ್ವುದು ಎರ್ದೆ ಕರಂಗಿ ನೀರಾಗಿ. ೧೫೦

ಅಭಿಮನ್ಯು–ಪದ್ಮಗಂಧಿ ! ಎರ್ದೆಗೆಡದಿರ್. ಏನಿರ್ದೊಡಂ
ಸಹಿಸವೇಳ್ಕು, ವೀರ ರಮಣಿಯರ್.

ಉತ್ತರೆಯುಂ ಕಟ್ಟುಸಿರಂಬಿಟ್ಟು–ವೀರರಮಣಿಗೇಂ ಕೋಡಿ
ರ್ಕುಮೆ ? ಸಂಕಷ್ಟಂ ಎಲ್ಲರ್ಗಮೊಂದೆಯಲ್ತೆ ?

ಪೊಳ್ತುರುಳ್ದು ರವಿಬಿಂಬಂ ಕೆಂಗಲಿಸಿ ಕೞ್ತ್ತಳನೆ ಮೇಲೇರ್ದು ಪಗಲ್ ನಡುಬಗೆಯಾಗೆ ಕಡಂಗಿ ಗಿಡುಮರಂಗಳ ನೆರಳ್ ಮೆಯ್ಯು ದುಡಿ ಬುಡಮುಡರ್ದುದು ಬಳಲಿ ಬಸವಳಿದುದೋ ಎನಲ್. ಸುತ್ತ ಮುತ್ತಣ ವನಾಂತರದೊಳ್ ನೆಲೆನಿಂತ ಬಗೆವಗೆಯ ಮೃಗಂಗಳ್ ಪಚ್ಚ ಪಸುರಿನ ಬಿರ್ದುಂಡು ಬಾಯಾರಿ ನೀರಡಿಸಿ ನದೀಪಾತ್ರಕ್ಕಿ ೞಿಯೆ, ಮಿಣ್ಣನೈತರುತ್ತಿರಲ್ ಪದಾಘಾತದಿಂ ಕಲ್ಮುಳ್ಳು ಒಣ ಗಡ್ಡಿ ದರುಗೆಲೆಗಳ್ ನಿಟಿನಿಟಿಲೆಂದುದು ಮೌನರಾಶಿಗವ್ವಳಿಸಿದಂತೆ. ೧೬೦

ಆ ಸದ್ದಂ ಕೇಳ್ದ ಉತ್ತರೆ ಅತ್ತಂ ಮನಂನೆಟ್ಟು ಕಣ್ಣಿಟ್ಟು ಕಿವಿನೆಟ್ಟು ಮೃಗಕುಲವಂ ಕಾಂಬೊಂದು ತವಕದಿಂ ಮಿಣ್ಣನಿರೆ ಮತ್ತೆ ಮತ್ತೆ ಮೇಣ್ಮತ್ತೆ ಪೊದಳ್ದ ಕಿರುವಗೆಯ ಸದ್ದಿನ ದಳವುಳಂ ಸೆರೆವಿಡಿದತ್ತು ಮನಃಪ್ರಾಣಂಗಳಂ.ಮತ್ತಾ ಚಣಂಚಣಂ ಉರುಳ್ದು, ಗಳಿಗೆಗಳಿಗೆಗಳುಂ ಸಾರ್ದು ಕಡೆಯೊಳೊಂದು ಸಿರಿಚಣಂ ಬಂದ ಬಳಿಕ್ಕಂ ಬಗೆವಗೆಯ ಮಿಗಕುಲಂ, ಎಕ್ಕಲವಳಗಂ, ಕರ್ವೆಕ್ಕು ಸಿಂಗಳಿಕಂ ಮುಂಗುಸಿ ಮೊಲಮಿತ್ಯಾದಿ ಮೃಗಂಗಳ್ ಮತ್ತಮಾ ಪೆರ್ಮೆಯ್ಯ ಕಾಡ್ಕೋಣಂಗಳ್ ಅಲ್ಲೊಂದಿಲ್ಲೊಂದೆನೆ ಮೈದೋರಿ ನದೀಕೂಲಕ್ಕೈತಂದು ಕಣ್ಗಿಂಬಾಗಲ್ಕೆ ಉತ್ತರೆ ಸಂತಸವಟ್ಟು, ೧೭೦ ಪುಳಕಿತಳಾಗಿ ನೆಟ್ಟ ಕಣ್ಣಾಲಿಯುಂ ಕೀಲಿಸದೆ ನೋಡುತಿರ್ದುದಂ ಕಂಡ ಅಭಿಮನ್ಯು ಮೊಗದೊಳ್ ಕಿರುಮುಗುಳಂಬರಿಸಿ ಮಡದಿ ಗೆಂದಂ–ಪ್ರಿಯತಮೆ ! ಇಂತೇಂ ಪೊಂಪುಳಿವೋದೈ ! ಪಿಂತೆ ಈವೊಂದು ಮೃಗ ಸಂಕುಲಮಂ ಕಾಣೆಯೇಂ ನೀನೆಂದುಂ ?

ಉತ್ತರೆ–ಆರ್ಯಪುತ್ರ! ಎನಿತು ನೋಡಿದೊಡಂ ಬಗೆ ತಣಿ ವುದೇಂ? ಇನ್ನೀಸುಂ ಕಾಣ್ಬ ಪಂಬಲಂ ಎರ್ದೆಗುಂಡಿಗೆಯೊಳ್ ಉರ್ಕುಗುಂ. ಅಹ, ಎಂತಪ್ಪ ಪಿರುಮೆಯ್ಯ ಶಾಬಕಂ?

ಅಭಿಮನ್ಯು–ಅಹುದು ಪ್ರಿಯೆ! ಇದರೊಳೇಂ ಪೆರ್ಚೞವೊಂದು ಬಾಯ್ಬಿಡುತಿರ್ಪುಯರ್ ? ಇಂತಪ್ಪ ಪುರ್ಚು ಕಿರಿಯರ್ಗಿರ್ಪುದು

ಶಾಜಂ! ನೀನೇಂ ಚಿಣ್ಣರಂ ವಿಾದುರ್ಗ ಪೊಂಪುಳಿಯಾದೆಂ? ೧೭೦

ಉತ್ತರೆ–ಚಿತ್ರವಿಸ್ಮೈ ರಮಣ ! ಅಂದಚೆಂದದ ಮುದ್ದು ಮುದ್ದಿನ ಪಶುಪಕ್ಷಿಗಳಂ ಕಣ್ತುಂಬ ಕಾಣ್ಬೊಂದು ಬಲ್ಮೆ, ಬಲ್ಮೆ ಯಲ್ಲದ ಪುರ್ಚಲ್ತು. ಬಲ್ಮೆ ಎರ್ದೆಯಿಂ ಬರ್ಪುದಲ್ತೆ ? ಪುರ್ಚು ಮನವೆರ್ಚಿದ ಸಿಂಗಳಿಕಂ !

ಅಭಿಮನ್ಯು–ಆಯ್ತಾಯ್ತು. ಈಗಳ್ ಪೊಳ್ತು ವಿಾರ್ದುದು ನಾವಿನ್ನು ಬೀಡಿಗೆಯ್ದುವಂ.

ಉತ್ತರೆ–ಇರಿರ್, ಇಂತೇಂ ಅವಸರಂ? ಇಂತಪ್ಪ ಬಗೆಬಗೆಯ ಪ್ರಾಣಿಗಳ್ ಒಂದೆಡೆಯೊಳ್ ನೀರ್ಕುಡಿವುದಂ ಕಾಂಬೆವೇಂ ಬೀ ಡೊಳ್ ? ಅಹ, ಎನಿತಂದಂ? ಏಂ ಸೊಗಂ ? ಏಂ ಸಡಗರಂ ?

ಅಭಿಮನ್ಯು–ಏಂ ಪೇರಾಸೆಯೋ! ನಿನಗಿದು ಪಿರಿದಾದೊಡಂ ೧೮೦ ಎನಗಂ ಪಿರಿದಲ್ತು. ಅನುದಿನಂ ನೋನೋಡಿ ಕಣ್ಮನಂ ದಣಿದು ಬೇವಸಂ ಬಂದಿರ್ಕುಂ. ಎಲ್ ರಮಣಿ ! ಇನ್ನೆಬರಂ ಕಂಡುದು ಸಾಲದೇಂ? ಪೊರಡಲಕ್ಕುಂ, ಪೊಳ್ತು ವಿಾರುತಿರ್ಪುದು.

ಉತ್ತರೆ ಅವುಗಳತ್ತಲ್ ನೆಟ್ಟದಿಟ್ಟಿಯುಂ ಪಿಂತೆಗೆಯದೆ ನೋ ಡುತ್ತೆ ಸಂತಸಬಡುತುಂ ಸಂಭಾವಿಸುತುಂ ಮಂದಹಾಸಂ ತಳೆದು– ಅದೊ ಆ ಮಿಗಂ ಕತ್ತೆತ್ತಿ ನೋಡುತಿರ್ಪುದಿತ್ತಂ. ಅಹ, ಆ ಕಣ್ಗ ಳೊಳ್ ಏಂ ಪೊಳಪು? ಪೊಂಬಿಸಿಲ್ ಪ್ರತಿಫಲನದಿಂ ಬಜ್ಜರದರ ಲಂತೆ ತೋರ್ಕುಂ. ಏಂ ಲಚ್ಚಣಂ ? ಏಂ ಅಂದ ಚೆದಂ?

ಅಭಿಮನ್ಯು– ಅಹುದು ರಮಣಿ !

ಉತ್ತರೆ–ಮೆಲ್ಲನುಸಿರ್ ಎನ್ನೊಡೆಯ! ಸದ್ದು ಕೇಳ್ದೊಡವು ೧೯೦ ಬೆದರಿ ಪಿಂದಿರುಗಿ ಪೋಕುಂ ! ಕೊಂಚ ಸೈರಿಸು. ಅದೊ, ಆ ಸೊರ್ಕಿದೆಕ್ಕಲಂ ನೋಡು, ಏಂ ತೋರವಿರ್ಕುಂ ?

ಅಭಿಮನ್ಯು—ಅಹ, ಪರ್ಬದ ಬಿರ್ದಿಂಗೆ ಹದಮಿರ್ಕುದಲ್ತೆ? ತೊಡಲೇನೊಂದು ಕೂರ್ಬಾಣಮಂ ?

ಉತ್ತರೆ—ಛೆ! ಛೆ! ಬಾಯಾರಿ ಬಂದಿರ್ಕುಂ. ಉಬ್ಬೆಗಗೊಳ್ಳದಿರ್. ಕಟ್ಟುರದ ಕಾಯ್ಪಿಂಗೆ ಪದಮಲ್ತಿದು. ಹಾ! ಇದೇಂ ಪರಿಹಾಸವೊ? ಬಲ್ಪಿನೇಳ್ಗೆಯ ದುಂದುಗವೊ? ಏಂ ಕಾರಣಂ ?

ಅಭಿಮನ್ಯು—ಕಾಂತಿಮತೀ ! ಬೇಂಟೆಯಭಿರುಚಿ ಕಾಣ್ !

ಉತ್ತರೆ—ಏಂ ಮಾತೋ? ಉತ್ತರೆಯೊಡನಿರ್ಪ ವೇಳೆಯೊಳ್ ಶಸ್ತ್ರನ್ಯಾಸಂ ನಿನಗಕ್ಕುಂ ! ೨೦೦

ಅಭಿಮನ್ಯು ನಗುನಗುತ್ತೆ ಆಮೋದದಿಂ—ಎಲ್ಲಂ ಕಣ್ಣಾರೆ ಕಂಡುದಾಯ್ತಲ್ತೆ? ಇನ್ನುಂ ಮುಂದಣ ವಿಚಾರಂ....

ಆ ಮಾತು ಮುಗಿವನಿತರೊಳ್ ಉತ್ತರೆ ಪತಿಯ ಕೈವಿಡಿದು ನುಡಿದಳ್—ತಾಳ್ಮೆಗೆಡದಿರ್ ರಮಣ !

ಅಭಿಮನ್ಯು ಪರಿಹಾಸದಿಂ—ಭಾರತಿ ! ಈಗಳ್ ಪುಲಿ ಸಿಂಗಗಳ್ ಬಂದೊಡಂ ?

ಉತ್ತರೆ—ಅವಿಂತು ಬರ್ಕುಮೆ ಈ ನಡುವಗಲ್ ?

ಅಭಿಮನ್ಯು—ಕೋಳ್ಮಿಗಗಳುಂ ಕೂರವಲ್ತೆ ?

ಉತ್ತರೆ—ಅವು ನಿರ್ವೈರದಿಂದಿರಲ್ ಬಾಣಮಂ ಪೂಡುವ ಅಗತ್ಯಮಿಲ್ಲ ರಮಣ ! ಈ ಅಪೂರ್ವಮಿರ್ಪ ಬಂಧು—ಜೀವ—ವಲಯಮಂ ನೋಡಲೆನಿತು ಆನಂದಂ ? ಆಂ ಪ್ರಯತ್ನಿಸಿದೊಡಂ ಅಲ್ಲಿಂದೆ ದಿಟ್ಟಿಯಂ ಪಿಂತೆಗೆಯಲ್ಬಾರದೆನಗೆ, ಎನುತ್ತೆ ಪತಿಯ ಹಸ್ತಮಂ ಬಿಗಿವಿಡಿದು ಮತ್ತೆಂದಳ್ ಮಡದಿ—ನಸುಪೊಳ್ತು ಶಾಂತಿ ೨೧೦

ಯಿಂದಿರ್ದು, ಎಲ್ಲಂ ನೀರ್ಸುಡಿದು ಪಿಂತಿರುಗವನ್ನೆಗಂ ಕಣ್ತುಂಬ
ನೋಡಿ ತಣಿಯಲೆನಗೆ ಅವಕಾಶವೀಯೈ ಆರ್ಯಪುತ್ರ !

ಆವೊಳ್ತಿಂಗೆ ಪ್ರಾಣಿ ಸಂಕುಲಂ ತಿಳಿನೀರಿನ ಸುರಾಪಾನಂ
ಗೆಯ್ದು ಬಿರ್ದಣಿಸಿನ ದಗೆದಾವದಮುಂ ಕಳೆದು ಸಿರಿಮೊಗದ
ಚೆಲ್ವಿನಿಂ ಮಿರುಮೆಯ್ಯನುಣ್ಪಿನಿಂ ಅಳ್ಳಿಬಳ್ಳಿ ಮುಂಡುಬಾಲಮುಂ
ಅತ್ತಿತ್ತ ಬೀಸಿವೀಸಿ ಚೆಂಗಿವಿಯುಂ ಪಟಪಟಿಸಿ ನೇರ್ಪಡಿಸುತುಂ ೨೨೦
ನದೀಪಾತ್ರದಿಂ ಪಿಂಜರಿದು ಎಳಗರಿಕೆಯೊಳ್ ಬಾಯಾಡುತುಂ
ಮೇಲ್ಮೈತರಲ್ ಉತ್ತರೆ ಪುಳಕಿತ ಮನದಿಂ ಕಣ್ಣಿಟ್ಟು ನೋಡುತುಂ
ಮ್ಮೈಮರೆತಳ್. ಅಂತಿಂತು ಕೆಲವಾನು ಸಮಯುಂ ಕಳೆಯೆ ಎಳ
ವಳ್ಳಿಯಂತೆ ಮ್ಮೈಗಾಂತು ನಿಂದ ಪೊನ್ನರಸಿಯ ತಲೆಯಂ ನೇವರಿಸಿ
ನಲ್ಮಾತಿನೊಳೆಂದನಭಿಮನ್ಯು– ಈ ಚಿತ್ತಾರ ಅನುಗಾಲಂ ಕಣ್ಗಂ
ಬಾದೊಡಂ ಸಾಲದೆಂಬೊಂದು ಕಟ್ಟಾಸೆಯುಂ ಕಾವಳಿಸಿದಂತೆ
ಮಿಣ್ಣನಿರ್ಪಯ್ ಇದೇಂ ವಿಚಾರಂ ?

ಉತ್ತರೆ–ಇದೊಂದು ಗಳಿಗೆ ಕಾಲಂ ಸೈರಿಪುದೆನ್ನರಸ !
ಆದೋ, ನೋಡಾ ಮರಿಗಳುಬ್ಬೆಗಮುಂ. ಅತ್ತವಿತ್ತಂ ತಿರುತಿರುಗಿ
ನೋಡುತಿರ್ಪವಲ್ತೆ ಭಯಂ ಕಾವಳಿಸಿದಂತೆ ? ೨೩೦

ಅಭಿಮನ್ಯು–ಸಿಂಗದ ಭೀತಿಯಿಂ ಕಾಣ್.

ಉತ್ತರೆ–ರಮಣ ! ಬಿಯದರ ಬಿಲ್ಲಾಳ್ಗಳ ಭೀತಿಯೇಂ
ಕಮ್ಮಿಯಿರ್ಕುಮೆ? ಏಗುಳುಂ ನಮೆದ ನೋವಿನಿಂ ಭೀತಿಯಿಂ
ಮನಂ ಜಾಳಾಗಿರ್ಕುಂ.

ಅಭಿಮನ್ಯು-ಶುಭೆ! ಬರ್ದುಂಕಿನೊಳ್ ಒಗೆತನದ ದುಂದುಗದ
ನೋವಿನ ಬೇನೆಯ ಭಂಗದ ಸೂಡಿಂ ಬೇವರ್, ಜಗಜಾತ್ರೆಯ
ಕೊಲೆಗುತ್ತದ ಸಂಚಿನ ಹೊಂಚಿನ ಕೊಲ್ಲಣದಿಂ ನರಳ್ಪರ್
ಸಂಕಷ್ಟದಿಂ ಸಂಕಟಂಬಡುತಿರೆ ಸಾನಿಂತಿಲ್ಲಿ ಆಡುತಂ ನೋಡುತುಂ
ಕಾಲಮುಂ ಕಳೆವುದೆಂದೊಡೆ ಲಜ್ಜೆಗೇಡಲ್ತೆ?

ಉತ್ತರೆ–ಒಪ್ಪಿದೆಂ, ರಮಣ. ಆದೊಡಿದುಂ ನಿಚ್ಚವಮಲ್ತು. ಆವ ೨೪೦
ದೈವದ ಕರುಣೆಯು ವರವೊ ಇಂತೊಂದು ಸಿಜಬಾಳ್ತೆಯುಂ
ಕಣ್ತುಂಬ ಕಾಂಬ ಸುಯೋಗವಿಂದೊದಗಿದುದು ಕಾಣ್. ಪ್ರಾಣಿ
ಗಳ್ ಪಿಂದಿರುಗಿ ಕಾಡಂ ಸೇರ್ವನ್නೆಗಂ ಸೈರಿಸು ರಮಣ!

ಅಭಿಮನ್ಯು–ಏಂ ಬಯಲಾಸೆಯೋ ಪೋಕೆ ! ನೀನುಮಾ
ನಿಲ್ಲಿ ಪೊಳ್ತಿಳಿವನ್ನೆಗಂ ನೋಟದ ಬೇಟದ ಬೆಸನದೊಳಿರೆ ಅಬ್ಬೆಯು
ರತ್ತಲ್ ಕಾದಿರ್ಪರ್ ಮನಂ ಬೆಬ್ಬಳಿಸಿ.

ಉತ್ತರೆ–ಆಯ್ತು. ಒಂದು ಗಳಿಗೆ ಮಾತ್ರಂ....

ಅಭಿಮನ್ಯು–ಆ ಮಾತಿಂಗೆ ಮನ್ನಣೆಯಿತ್ತು ಪ್ರಾಣಿಗಳ್
ಒಂದೊಂದಾಗಿ ವನಾಂತರಂ ಬೊಕ್ಕು ಕಣ್ಮರೆಯಾದ ಬಳಿಕ್ಕಂ
ಆಲ್ಲಿಂದೆ ಪೊರವಂಟಂ ಮಡದಿಯೊಡಂ. ನದೀಪಾತ್ರದೊಳ್ ೨೫೦
ಮುಂಬರಿದು ಬೆಳ್ಳಿಯ ರಾಶಿಯೆನೆ, ಪೊಳೆಪೊಳೆವ ಉಸುಕಿನಂಗ
ಣಮಂ ದಾಂಟಿ ಮಾತಿನ ಮೋಡಿಯೊಳ್ ಮುನ್ನಡೆದರಾ ವನ
ಪಥಂಬಿಡಿದು. ಮುಂತೆ ನಸುದೂರದೊಳ್ ತೆಂಕಲ್ಗೆ ಮೊಗವಿಟ್ಟು
ನಿಮಿರ್ದು ನಿಂತ ಕೋಳ್ಗಲ್ಲುಂ ಬೀರಬಿಲ್ಲಾಳಿನಂತೆ ಬೀರ ಸಿರಿಯಿಂ
ಪೊದುಳ್ದುದಂ ಮನಮೆಚ್ಚಿ ಕಣ್ತುಂಬ ನೋಡಿ ಬಂಡುಣಿಯೊಲ್
ಆನಂದಬಡುತುಂ ಪಜ್ಜೆ ಪಜ್ಜೆಗುಂ ಮುಂಬರಿಯೆ ಮುಂತೆ ಮುಂತೆ
ನದಿಯೆಡೆರ್ದೆಯೊಳ್ ಹಲಕೆಲ ಬಂಡೆಗಲ್ಲುಗಳುಂ ಒಗ್ಗೂಡಿ ಮೆಯ್ಗೆ
ಮೆಯ್ಯಾಂತು ಬಲ್ಸಲಗೊಂಡು ಎಡೆಎಡೆಯೊಳ್ ಮಣ್ಗೂಡಿ
ಕಲ್ಮರುಳೊತ್ತಿ ಪೆರ್ಮರಂಗಳಿಗಾಶ್ರಯವಿತ್ತು ಚೆಣ್ಣ ದೀವಿಯೊ
ಎನೆ ರಾರಾಜಿಸಿದತ್ತು ಒಗೆವಗೆಯ ಹಕ್ಕಿಪಕ್ಕಿಗಳ್ಗೆ ನಲ್ಮೆಯ ೨೬೦
ಬಲ್ಮೆಯ ಸುಖನೀಡಂ ನೀಡಿ. ದಸದಿಸೆಯ ಪಕ್ಷಿ ಸಂಕುಲಂ
ಸಂದಣಿಸಿ ಸೊಗಯಿಸಿ ಆಡುತಂ ಪಾಡುತಂ ಪಾರಾಡುತುಂ
ಕುಕಿಲ್ದು ನಲಿದಾಡುತುಂ, ಯೋಗದ ಚಾಗದ ಭೋಗದ ಬಾಳ್ತೆ
ಯ ಸಂಗರದಿಂದುರ್ಬಿ ವನಾಂತರಕುಯ್ದು ತನಿವಣ್ಗಳನಾಯ್ದು

ತಂದು ಮರಿವಕ್ಕಿಗಳ್ಗೆ ಮುದ್ದಿನಿಂ ಗುಟುಕು ಗುಟುಕಾಗಿ ಬಿರ್ದಿ ನುಣಿಸಂ ನೀಡುತಂ ತರತರದ ದನಿಯೊಳ್ ಉಲಿಯುತಿರ್ದುವು ರಾಗಾನುರಾಗದಿಂ.

ಅಃ, ಭೋರ್ಗರೆವ ಜಲರಾಶಿಯು ರಾಗತಾನಂ ಎರ್ದೆಯಂ ಮುಟ್ಟೆ ಮನವಂ ಸೊವ್ಮ್ಮರಲ್ ಸುಖಮುಚ್ಚೆಗೆ ಸಂದವೊಲ್ ಮರವಡುತಿರ್ದುದು ಮೆಯ್. ಸಾಲ್ವರಿದು ಪೊನಲ್ವರಿವ ಜಲರಾಶಿ ೨೬೦ ಬಂಡೆ ಬಂಡೆಯಂ ಪಾಯ್ದು ಫೇನ ಪುಂಜವನೊಟ್ಟೆ ಜುಳು ಜುಳಿಸುತುರುಳ್ದು ಬುರುಜಿನ ಬೆಳ್ನಗೆಯಂ ಪರಿಸುತಿರ್ದುದು ಭುವಿಯೈಸಿರಿವೊಲ್. ಇಂತೊಂದು ಹೂನ್ಯದ ಮಾನ್ಯದ ಜೆಂಗಟ್ಟು ಬಿಗಿಯುತಲಿರೆ ಮಾನಸಲೋಕಮಂ, ಜಂಪತಿಗಳ್ ಮೊಗದಿರುವಿದರ್ ಬೀಡಿಗಭಿಮುಖವಾಗಿ.

ಇಂತಿಂತೋರೊಂದು ಸಂತಸದ ನಲ್ ಕೌವರೆಯೊಳ್ ಪೊಳ್ತು ಕಳೆದುಂ ಮನಮಂ ಪೆಂಪಿನಲಂಪಿನಿಂ ಸೊಗಂಬರಿಸಿ ಪೊಸ ಪುರುಪಿನ ಉಲ್ಲಸಮಂ ಮೈಗೊಂಡು ಬನದೇವಿಯ ಸೀರೆಯಂ ಪರಡಿದಂತಿರ್ದ ಪಸುರ್ವುಲ್ಲ ಪಸೆಯೊಳ್ ಪಜ್ಜೆಪಜ್ಜೆಯಂ ಘಲ್ ಘಲ್ಲೆನಲಿಟ್ಟರ್ ಕಡುಚೆಲ್ವಿನ ಸಿಂಗರಂಬೆತ್ತೊಂದು ತೋಂಟದೊ ೨೮೦ ತ್ರಿನೊಳ್; ತೆಂಗಿನ ಕೌಂಗಿನ ತಾಳೆಯ ಬಾಳೆಯ ಮಾವಿನ ಬೇವಿನ ನೇರಳೆಯ ಸುರಹೊನ್ನೆಯ ಪುಟ್ಟುವಳಿಯುಂ ನಳನಳಿಸಿ ರ್ದುದು ಮುಂಗಾರೊಲ್ದು. ಮುಂಬದಿಯೊಳ್ ತನಿಕಟ್ಟದ ಮಲೆ ಗಂಬಂತಿರಡಿವಿಡಿದು ಮುಡಿವರೆಗುಂ ಜೋಲುಬಿಳ್ದ ಬಕ್ಕೆವಲಸುಂ, ಕಸುಗಾಯಿಂ ಮೈವೆರ್ಚಿದ ನೇರಿಲೆ ಮರಂಗಳುಂ, ಬಾನುದ್ದ ನೀಳ್ದ ಪಚ್ಚೆ ತೋರಣವೆಂತಂತು ಕೈಗೊಂಚಲ ಸರಗಳಿರ್ದ ಬೈನೆ ಯುಂ, ಇರುಳ್ ರಾಣಿಯ ಘನಕೇಶಪಾಶದ ಮಾಯದಾವೆಂಬಂತೆ ಕಳ್ತಲಿಸಿರ್ದ ತಮಾಲದಿಂ, ನುತ್ತಮಾ ದಳದಳಂ ಮುಗುಳ್ತು

ಗಮ್ಮನೆ ಪರಿಮಳಂ ಬೀರ್ವ ಪಾರಿಜಾತದಿಂ ವೀರಕುಸುಮಾಯುಧನ
ಕರವೊಪ್ಪುವ ಪೊಸವೊಸೆಯೊಪ್ಪದ ಚೆಲ್ವಿನ ಕೂರ್ವಾಳೆಂಬಂತೆ ೯೯೦
ತೋರ್ಪ ಪೊಂಗೇದಗೆಯಿಂ, ಸಗ್ಗದರಮನೆಯೊಳ್ ಮಡಲ್ತು ಭೂ
ರಮೆಯೊಳ್ ಮಲರ್ದ ಸಿಂಗರದ ಮಂದಾರದಿಂ, ನನೆಕೊನೆಯೇರಿ
ದಳಂಬಿರಿದು ಬಂಡೊಸರ್ವ ಕರಂಡವಂ ತೆರೆದು ಮರಿದುಂಬಿಗಳಂ
ಕೈವೀಸಿ ಕರೆವ ಸುರಯಿಯಿಂ ಮಿಡಿಮೊಗ್ಗುಗಳೊಡಂ ನೆರೆಮೆರೆ
ದೊಪ್ಪುವ ಮೊಲ್ಲೆ ಜಾಜಿಯಿಂ, ಪುನ್ನಾಗ ಕತ್ತುರಿಗಳಿಂ ತುಂಬಿ
ಕುಂದಿಲ್ಲದೊಂದು ಸೊಗಂ ಕಣ್ಗಿಂಬಾದುದು ಪಚ್ಚಗಡಲಿಂಗೆ ಪ್ರತಿ
ಗಡಲ್ ಎನಲ್ಕೆ. ಕೊನರಿಲ್ಲದ ಮೊಗ್ಗಿಲ್ಲದ ಕಸುಗಾಯಿಯಿಲ್ಲದ
ತನಿವಣ್ಣಿಲ್ಲದ ಗಿಡುಮರ ಬಳ್ಳಿಗಳಿಲ್ಲಮೆಂಬಂತಿರೆ ಕಣ್ದಣಿಯೆ ಮನಂ
ದಣಿಯೆ ನೋಡುತಿರೆಯಿರೆ ಭೂಲೋಕದ ಸ್ವರ್ಗಮೆನಲ್ ಸಿರಿತುಂಬಿ
ಸಜ್ಜಿತವಾದ ವನಲಕ್ಷ್ಮಿಯ ಸಿರಿಗುಂಜಂ ಮೆರೆದತ್ತು ಪಚ್ಚವಣ್ಣಂ ೨೦೦
ಸೂಸಿ. ಸೊನ್ನೆವೆಟ್ಟನ ಸೌಸವದಿಂ ಮೈವೆರ್ಚಿ ಮನವೆರ್ಚಿ ಸುಳಿ
ಸುತ್ತಿ ಅಲೆಯಲೆಯ್ಯೆಸಿ ಅತ್ತಮಿತ್ತಂ ಮೋಹರಿಸಿ ಗಾವರಿಸಿ ತೇಂಕು
ತ್ತೈ ತಂದು ಸುಯ್ಯೆನೆಸುಯ್ದು ದೆಸೆದೆಸೆಯುಂ ತಾಗಿ ಮಸಂಗಿದಂ
ಮುದವೆತ್ತ ಬನಗಾಳಿ. ಈ ತೆರಂ ನಿಚ್ಚಂ ಪಚ್ಚರಮನೆಯ ಸಿಂಗರದ
ಸಾಲೆಯೆಂಬಂತಿರೆ ಕಣ್ಮನಂಗಳ್ಗೆ ಬಿರ್ದೆನಿಸಿದುದು ವಿಪಿನ ಪ್ರದೇಶಂ.

ಉತ್ತರೆ–ಆರ್ಯಪುತ್ರ! ಏಂ ಸಗ್ಗದೈಸಿರಿಯು ನಿಡು
ದೋಂಟಂ ? ಒಡೆಯನ ಪುಣ್ಯಮೆ ಇಲ್ಲಿ ಮೈಗೊಂಡಂತಿರ್ಕುಂ.

ಅಭಿಮನ್ಯು–ಇಂತಿರ್ಪೊಂದು ತೋಂಟದೊಳ್ ಬಾಳ್ಕೆ
ಯುಂ ಶಾಂತಿಯಿಂದಿರ್ಕುಂ.

ಉತ್ತರೆ–ಏಂವೇಳ್ವೆನೋ, ನಮ್ಮೀ ರಾಜ್ಯಗೀಜ್ಯಂಗಳಗೊಂ ೨೧೦
ದಣಂ ? ರಾಜರಿರ್ದು ಪದುಳಮಿಲ್ಲಂ.

ಅಭಿಮನ್ಯು–ಶುಭೆ! ಬೆಂಬಿಡಿದ ಕರ್ಮಂ.

ಉತ್ತರೆ–ಸಾಜಂ........ಸಾಜಂ.

ಅಭಿಮನ್ಯು–ಇನ್ನೆಲ್ಲಂ ಕುರುಕ್ಷೇತ್ರದೊಳ್ ನಿರ್ಣಯಂ.

ಉತ್ತರೆ–ಕುರುಕ್ಷೇತ್ರಮೆಂದೊಡೆನ್ನ ಶಾಂತಿಯೇ ಕಲಕುಗುಂ.

ಅದರ್ಕಾ ಅಭಿಮನ್ಯು ಪಡಿನುಡಿಯದೆ ಮುನ್ನಡೆಯುತಿರೆ ಗಿಡುಮರಂಗಳೆಡೆಯಲ್ಲಿ ನುಡಿವಕ್ಕಿವಿಂಡು ದಂಡುಗೊಂಡು ಪಾರಾಡುತಿರ್ದುದಂ ಕಂಡು ಉತ್ತರೆ–ಆರ್ಯಪುತ್ರ! ಇದೇಂ ಇನಿತೊಂದು ನುಡಿವಕ್ಕಿಗಳ ಗೊಂದಣಂ ಈಯೆಡೆಯೊಳ್ ?

ಅಭಿಮನ್ಯು–ಅದೋ, ಆ ಮರದೊಳ್ ತಂದಲ್ಸುರಿವ ಗೊಂಚಲ್ ಗೊಂಚಲ್ವೆತ್ತ ನೇರಳೆಯ ಕಳಿವಣ್ಗಳಾಕರದಿಂದಲ್ತೆ ಇಂತಪ್ಪ ಸಡಗರಂ ? ನೋಡು ಆನ್‌ತಾನೆಂಬ ಅವಸರದಿಂ ಪಣ್ಗೊಂಚಲ್ ಕಂಡೆಡೆಯೊಳ್ ಬಾಯ್ಬಿಡುತಿರ್ಕುಂ. ಅದೋ, ಆಯೆಡೆಯ ಸೆಳೆಗೊಂಬೆಯೊಳ್ ನೋಡು ! ಆಕರದಿಂ ಹಮ್ಮಿನಿಂ ಕಿರಿವಾಯ್ ಪರಿವನಿತು ಚಂಚೂ ಪುಟಮಂ ಹಿಗ್ಗಲಿಸಿ ಪಣ್ಣುಂಗುತಿರ್ಕುಂ. ೩೨೦

ಉತ್ತರೆ–ಅಹುದಲ್ತೆ ? ಏಂ ಪುರುಪುಂ ! ಏಂ ಸರಸಂ ?

ಅಭಿಮನ್ಯು–ಅಂತುಮಿಂತೀ ಸೊಂಪಿನಲಂಪಿನ ಚೊಕ್ಕಳದ ಪೊಳ್ತಿನಿಂ ಸಗ್ಗ ಸುಧೆಯನುಂಡುದಲ್ತೆ ಮನಂ !

ಉತ್ತರೆ–ಅಹುದು ರಮಣ ! ನಾಮುಂ ಪೊರಮಂಟುದು ಶುಭಗಳಿಗೆಯೊಳ್. ನಿಚ್ಚಂ ಪೊಳ್ತಿಂತಿರ್ದೊಡೆ ಎನಿತಂದಮೊ ? ೩೩೦

ಅಭಿಮನ್ಯು–ನಾಮುಂ ರಾಜ್ಯಕೋಶಂಗಳಂ ಬಿಟ್ಟು ನಿಚ್ಚಮಿಲ್ಲಿರ್ದೊಡಕ್ಕುಂ.

ಮುಂತೆ ಮುಂತೆ ಮೂರುಗಾಲಿಕ್ಕುತೆ ನಡೆಯುತಿರೆ ಕಂಡು ಬಂದರೆನಿತೊ ಪಥಿಕರ್. ಮಳ್ತಿಯ ಮುತ್ತಿಯ ಸವುದೆಯನಳತೆ

ಯೊಳ್ ಕತ್ತರಿಸಿ ಇರ್ಪೆನಾರಿಂ ಪೊರೆಗಟ್ಟಿ ತಲೆವೊರೆವೊತ್ತು ಆಶ್ರಮ
ಕುಯ್ವ ಪಿರಿಯ ವಟುಗಳಿಂದೆಯುಂ ಸಿರಿಕಂಡದ ಸೆಕ್ಕೆಗಳಂ ಸಮಿ
ತ್ತಿನ ಕಟ್ಟುಗಳಂ ಕೊಂಡುಯ್ವ ಮುನಿಗಳಿಂದೆಯುಂ, ಬೆಲ್ಲವತ್ತದ
ತೊಳಚೆಯ ಗರಿಕೆಯ ಕತ್ತುರಿಯ ಪತ್ರೆಯ ದಾಂಗುಡಿಗಳಂ
ಚಿವುಂಟೆ ಚಪ್ಪಲೆಯನೊಟ್ಟಿ ಬಾಳೆಯೊಟ್ಟೆಯೊಳಿಕ್ಕಿ ತರ್ಪ ಬಾಲ
ವಟುಗಳಿಂದೆಯುಂ ಮಿಂದು ಮುಡಿಯುಟ್ಟು ಗಂಗೋದಕದ ೩೪೦
ಬಿಂದಿಗೆಗಳಂ ಪೊತ್ತ ಮುನಿಪತ್ನಿಯರಿಂದೆಯುಂ ಮನೋಹರಮಾ
ದತ್ತು ವನಪಥಂ. ಮುಂದೆ ನಸುದೂರದೊಳ್ ಸಿಹಿನೀರ ತಿಳಿ
ಗೊಳಂ ತುಂಬಿ ತುಳ್ಕಿ ಕೋಡಿವರಿದಿರ್ದುದಂ ಕಂಡು ಉತ್ತರೆ–
ಎನ್ನರಸ ! ಇಂತಪ್ಪ ಸುಡುಬಿಸಿಲ ಬಿಸರದೊಳ್ ಜಲಂತುಂಬಿ
ಕೋಡಿವರಿಯಲ್ಕೆ ಆವ ಪುಣ್ಯಂ ಘನಿಸಿರ್ಕುಮೊ ಎಂಬಂತಿರ್ಕುಂ.

ಅಭಿಮನ್ಯು ಮೊಗದೊಳ್ ಹರಿಸದ ನಗೆಯಂಬರಿಸಿ ಪರಿ
ಹಾಸಂಗೆಯ್ವಂತೆಯುಂ ನಗುನಗುತುಂ–ಓ, ನೀನರಿಯೆ ? ಈ
ಕಟ್ಟುರ್ಬಿನ ಬೇಸಗೆಯ ಬೇಗೆಯೊಳ್ ತುಂಬಿ ಬೆಳ್ಪಂಬರಿವ
ಬೆಂಚಿಯ ದೇವತೆ ಸ್ತ್ರೀಯಲ್ತೆ ?

ಉತ್ತರೆ–ಇಂತಪ್ಪ ಪುಣ್ಯರಾಶಿಯಿಂದಲ್ತೆ ಇಂತಿಂತು....ಹಾ, ೩೫೦
ನಿಲ್, ನಿಲ್ ! ಕೂರ್ಮುಳ್ಳೊಂದು ಕೋರೈಸಿತೆನ್ನ ಅಂಗಾಲಂ !
ಈ ಕಿರುವಟ್ಟೆಯೊಳ್ ಇದೆಂತಪ್ಪ ಕೂರ್ಮುಳ್ಳೋ !

ಅಭಿಮನ್ಯು ಅಸವಸದಿಂದವಳ ಪತ್ತೆ ಸಾರ್ದು–ಇರಿರ್
ನೆತ್ತರ್ ಬಸಿಯುತಿರ್ಕುಂ. ಅಂ ತೆಗೆದಪೆಂ. ಇದಕ್ಕೀಗಳ್ ಪಸು
ಮರ್ದ್ದಂ ಪೂಸದಿರ್ದೊಡೆ ವಿಷಮೆತ್ತು ನೋವಿನ ಗೋಳಿಕ್ಕಿ ನಿಚ್ಚ
ಕ್ಕೆಡರ್ ತರ್ಪುದು ಕಾಣ್.

ಉತ್ತರೆ–ಆರ್ಯಪುತ್ರ ! ಬಲ್ ನಟ್ಟೊತ್ತಿನಾಂಟಿರ್ಕುಂ.
ಬೇನೆಯುಂ ತಾಳೆಂ !

ಅಭಿಮನ್ಯು—ಇತ್ತಂ ಕಾಲ್ನೀಡು ರಮಣೀ! ನೋಯದೊಲ್
ಕಿಳ್ತು ತೆಗೆವೆಂ. ೩೬೦

ಉತ್ತರೆ—ಅವಸರಿಸದಿರ್ ರಮಣ !

ಅಭಿಮನ್ಯು—ಇದಕ್ಕೇಕಿಂತು ತಳ್ಳಂಕಂ ?

ಉತ್ತರೆ—ಹಾ, ನೀನೆಂತರಿವೆಯೆನ್ನ ನೋವಂ ?

ಅಭಿಮನ್ಯು—ಅಃ, ಏಂ ಮಾತೊ ? ಆನರಿಯೆನೆ ಇಂತಪ್ಪ
ನೋವಂ ?

ಅಭಿಮನ್ಯು ಮಡದಿಯ ಕಡು ಚೆಲ್ವಿನ ಕಾಲಂ ಕೈಕೊಂಡು
ನೋಡಿದ ಬಳಿಕ್ಕಂ ಅಶ್ವತ್ಥದ ಪಣ್ಣೆಲೆರಾಶಿಯ ಪೊನ್ನಗದ್ದಿಗೆ
ಯೊಳ್ ಮಡದಿಯಂ ಕುಳ್ಳಿರಿಸಿ ಪಿಮ್ಮಡಿಯೊಳ್ ಪೊಕ್ಕಕೂರ್ಮುಳ್ಳಂ
ಕಿತ್ತೊಗೆದು ಪಸುರ್ಮದ್ದಂ ತರುಂಬಿ ಅಂಗೈಯೊಳ್ ಉರ್ದಿ ಉರ್ದಿ
ರಸಮುರ್ದಂ ನಟ್ಟೊತ್ತಿ ಪರಿವ ನೆತ್ತರ್ಗೆ ತಡೆಯಿಕ್ಕಿದಂ. ೩೭೦

ಉತ್ತರೆ—ಬಿದಿರ್ಮುಳ್ ಬಲ್ ನೋವಿನಾಗರಂ. ಪಿಂದೊರ್ಮೆ
ಇದರ ನೋವುಂಡಿರ್ಪೆಂ.

ಅಭಿಮನ್ಯು—ಈ ಪಸುರ್ಮದ್ದು ವಿಷಕ್ಕುಪಶಮನಂ ಚಿಂತಿಸ
ದಿರ್. ಬೀಡಿನ್ನುಂ ದೂರಮಿರ್ಪುದಂ. ಈಗಳ್ ನಿನ್ನಿಂದೆ ನಡೆಯ
ಲಕ್ಕುಮೆ ?

ಉತ್ತರೆ—ನಡೆಯದಿರ್ದೊಡೆಂತು ಆರ್ಯಪುತ್ರ ? ಇಲ್ಲೇಂ
ತೇರೆ ? ತೇಜಿಯೆ ? ಏನಿರ್ಕುಂ ?

ಅಭಿಮನ್ಯು—ಆನಿರ್ಪೆಂ.

ಉತ್ತರೆ—ನೀನೇಂ ಗೆಯ್ವೆಂ ?

ಅಭಿಮನ್ಯು–ಎತ್ತಿಕೊಂಡೊಯ್ವೆಂ.

ಉತ್ತರೆ–ಅಹ, ಏಂ ಪುಚರ್ಚೊ ? ಏಂ ಎಳೆಯಾಟವೊ ? ಇಂತು ಪರಿಹಾಸಗೈವೊಡೆ ?

ಅಭಿಮನ್ಯು–ಎಲ್ಲಿಯ ಪರಿಹಾಸಂ ? ಏಳೇಳ್ ಎತ್ತಿಕೊಂಡೊಯ್ವೆಂ.

ಉತ್ತರೆ–ಆಂ ಎಳಗೂಸಲ್ತು, ಎತ್ತಿಕೊಳಲ್ಕೆ.

ಬಳಿಕ್ಕಂ ಮಡದಿಯಂ ಕೈವಿಡಿದೆಬ್ಬಿಸಿ, ಕೈಯಾಸರೆ ನೀಡಿ ಪಜ್ಜೆಪಜ್ಜೆಗುವೊಂದಾಗಿ ಮುನ್ನಡೆಯೆ ಸುಡುಬಿಸಿಲಿನ ಬಿಸರದಿಂ ಬೆಮರ್ ಬಸಿದುದು ಮೊಗವ್ಮೈ ಮಜ್ಜನಗೊಂಬಂತೆ. ವನವೀಥಿಯಂ ಕಳೆದು ಬೀಡಿಗೆಯ್ವನಿತರೊಳ್ ನೆಲೆವನೆಯ ಆನೆವಾಗಿಲೊಳ್ ಕಾದಿರ್ದ ದ್ರೌಪದಿ ಸುಭದ್ರೆಯರ್ ಮೊಗದೊಳ್ ನಸುನಗುವಂ ಸೂಸಿ ಸ್ವಾಗತಿಸಲ್ ಅಭಿಮನ್ಯು ಕೇಳಿಸಿದನಿಂತು–ಏಂ, ಕಾದು ಕಾದು ಬೇಸರಗೊಂಡುದೇಂ ಮನಂ ? ೩೯೦

ದ್ರೌಪದಿ–ಇಂತಪ್ಪ ಸುಡು ಬಿಸಿಲ ಬಿಸುಪಿರ್ದೊಡಂ ಲೆಕ್ಕಿಸದಿರ್ಕುಮೆ ? ಉತ್ತರೆಯೆಂತು ಬಾಡಿರ್ಪಳ್ ಕಾಣೆಯೇಂ ಕಂದ ?

ಸುಭದ್ರೆ–ಕುರುಕ್ಷೇತ್ರಕ್ಕಿಂ ವನದೇಶಂ ಲೇಸು ಲೇಸ್ಕೆ.

ಅಭಿಮನ್ಯು–ಅಬ್ಬೆ, ಎನ್ನ ತೋಳ್ಬಲ್ಪಿಂ ಬಿಸಿನೆತ್ತರ ಬಿಸುಪುಂ ಕರುಕ್ಷೇತ್ರದೆಡೆಗೆ ಬೆನ್ನೊತ್ತಿ ನೂಂಕುತಿರ್ಪುದು. ಏಮಂ, ಆಂ ರಣರಂಗಂಬೊಕ್ಕು ರಣಕಾಳಿಯುಂ ಪೂಜಿಸಲಕ್ಕುಂ, ಆನಿನ್ನುಂ ಅಂತಃಪುರದೊಳಿರ್ಪುದಸಾಧ್ಯಂ !

ಸುಭದ್ರೆ–ಏವೇಳ್ವೆನೊ ನೀನಿಂತೊರೆಯೆ ? ಏಂ ಆತುರ ಕಾತರಂ ? ನೀಂ ಎಳೆಯನೆಂದೊಂದು ವಿಚಾರನುಂ ಮನದೊಳಿಕ್ಕಿ ೪೦೦

ಶಾಂತನಾಗೈ ಕಂದ ! ಇದೇಂ ಚಿಣ್ಣರ ಆಟದ ಕೂಟಮೆ ?
ಕೂರಾಳ್ಗಳೊಡಂ ರಣಬಿಜ್ಜೆಯಂ ಕೈಕೊಳೆ ಸಡಗರದಿಂ ?

ಅಭಿಮನ್ಯು ಸಿರಿಮೊಗದೊಳ್ ಬೆಳ್ನಗೆಯಂ ಬರಿಸಿ ಪೆತ್ತೊಡಲ ತಳ್ಳಂಕಮಂ, ಅಕ್ಕರೆಯಂ, ಮನದೊಳ್ ನೆನೆದು ಮರುಗುತೆ –ಅಬ್ಬೆ, ಇನಿತೊಂದು ತಳ್ಳಂಕಂ ಮನದೊಳಿರ್ದೊಡೆಂತು ? ಎಮ್ಮ ಸುಖದುಃಖಮೆಲ್ಲಂ ಜಗದಾತ್ಮನ ನಿರ್ಣಯಮಲ್ತೆ ?

ಸುಭದ್ರೆ–ಇರ್ಕುಂ ಮಗನೆ ! ಅಂತೆಂದು ಆಗ್ಗಿಯಂ ಪುಗಲಕ್ಕುಮೆ ?

ದ್ರೌಪದಿ–ಆತುರ ಕಾತರಂ ಆರ್ಗುಂ ಸಲ್ಲದು. ಪುರುಷಾರ್ಥಂ ಅರಿತು ಮುಂಬರಿಯಲಕ್ಕುಂ. ೧೧೦

ಸುಭದ್ರೆ–ಕಂದ ! ರಣರಂಗದ ಘೋರ ಜಂಕಣೆಯಂ ನೆನೆದೊಡಂ ನೈನವಿರ್ ನಿಮಿರ್ವುದು.

ದ್ರೌಪದಿ–ವೀರಕುಲದೊಳ್ ದಿಟ್ಟೆಯನೆ ಪುಟ್ಟಿ ಇಂತಳ್ಕುವರೇಂ? ಕೇಳ್, ಮೂಱಿರ್ದೆಯಿರವೇಳ್ಕುಂ ಶ್ರೀಕೃಷ್ಣ ಸೋದರಿಂಗೆ.

ಉತ್ತರೆ–ನಿಮ್ಮ ಮಾತಂ ಕೇಳ್ವೊಡೆ ಧೈರ್ಯಂ ಒಡಮೂಡುಗುಂ.

ಅಭಿಮನ್ಯು–ಏಗುಳುಂ ಸತ್ಯಕ್ಕಿರ್ಕುಂ ಜಯಂ.

ದ್ರೌಪದಿ–ಸಾಜಂ....ಇನ್ನೆವರಂ ಆಂ ನಾಡೊಳ್ ಕಾಡೊಳ್ ಪಟ್ಟ ಭಂಗಬವಣೆಯಂ ನೆನೆದೊಡಂ ಒಡಲೊಳ್ ಕಿರ್ಚು ೪೨೦ ಪುರ್ಚುಗೊಂಡು ದಗದಗಿಪುದು ಪಗೆಗಳಿರ್ದೆಯ ಬಿಸಿನೆತ್ತರಂ ಬಯಸಿ. ಏಂ ಭಂಗವಟ್ಟು ಏಂ ಗೋಳ್ವಟ್ಟು ಈ ಬಾಳ್ತೆಯಂ

ಬಾಳ್ವೆನೊ ಆ ಬೊಮ್ಮನೆ ಬಲ್ಲಂ. ಇಂತಳ್ಕಿದೊಡೆಲ್ಲಿಯ ಬಾಳ್ಕೆ? ಏನಿರ್ದೊಡಂ ನೊಣೆದು ನುಂಗಲಕ್ಕುಂ. ನುಂಗಿ ಜೀರ್ಣಿಸಲಕ್ಕುಂ.

ಸುಭದ್ರೆ—ನೀಂ ಬಲ್ ಗಡುಸುಗಾರ್ತಿ. ನಿನಗಕ್ಕುವಿಾ ಪೊಣರ್ಕೆಯ ಬೆಸನಂ. ಆನಪ್ಪೆಂ ಪೊಣರ್ಕೆಗೆ ಪೆರತು. ರಕ್ಕಸವಗೆಯುಂ ಕಕ್ಕಸದಿಂ ರಕ್ಕಸರೊಳ್ ತೀರಿಸಿದೊಡೆ ಏಂ ಉಳಿಯಲಕ್ಕುಂ?

ದ್ರೌಪದಿ—ಎಲ್ಲಂ ದೈವಾಯತ್ತಂ.

# ಸಪ್ತಮಾಶ್ವಾಸಂ

ಕೌರವ ಕುಲಜರ್ ಮತಿಗೆಟ್ಟು ಮನಂಗೆಟ್ಟು ನೀತಿಗೆಟ್ಟು ಮಾನಂಗೆಟ್ಟು ರೋಸಗೀಸದಿಂ ಕೋಪಶಿಖಿದಳ್ಳಿಸಿ ಕಿಡಿಕಿಡಿವೋಗಿ ಕಡು ಕಾಯ್ಪೇರಿ ಕುದಿಕುದಿದು ರಕ್ಕಸವಗೆಯಿಂ ಪಾಂಡವರೊಡಂ ಪಗೆಯಂ ಸಾರ್ದು ಕಾದಿ ಮೋದಿ ಗೋಳಿಕ್ಕಿ ಬಾಳ್ಗಿಡಿಸಿದೊಡಂ ಸಾಲದೆನೆ ರಾಜ್ಯಕೋಶಂಗಳೀಯದೆ ಎದುರ್ವೆತ್ತು, ಬಲ್ಪಿನ ಸೊರ್ಕಿನ ಕೊರ್ವಿನ ಕಲಿತನದ ಕಾಲಾಳ್ಗಳಂ ಮೇಲಾಳ್ಗಳಂ ದಳವಾಯಿಗಳಂ ಮಾವುತರಂ ರಾವುತರಂ ಪಡೆಯುಳ್ಳರಂ ನೆರಂಗೊಡುವ ನಾಡೆರೆಯರಂ ಆನ್ ತಾನೆಂಬ ದುರದುಂಬಿ ಪಟುಭಟರಂ ಅತಿರಥರಂ ಮಹಾರಥರಂ ಷಡುರಥರಂ ಪೊಣರ್ಕೆಯವಸರದಿಂದೊಟ್ಟಯಿಸಿಯುಂ ಪಡೆಯಂ ನೂರ್ಮಡಿವೆರ್ಚಿಸಿಯುಂ ನಿರಾಕುಳದಿಂ ಜುದ್ದಮಂ ಸಾರ್ದರ್ ! ೧೦

ಕುರುಕ್ಷೇತ್ರದೊಳ್ ಇರ್ಕಡೆಯ ಪಡೆಗಳುಂ ಸೂಳಯಿಸಿ ಬೊಬ್ಬಿರಿದು ಪೊಣರ್ಕೆಗಿಳಿಯೆ ತೇರ್ಗಳ ತೇಜಿಗಳ ಗಜಂಗಳ ಕೂರ್ವಾಳ್ಗಳ ಬಿಲ್ಲನಾರಿಗಳ ಅಸ್ತ್ರಶಸ್ತ್ರಂಗಳ ಜಂಕಣೆ ಜೇವಡೆದು ಭೋಂಕನೆ ಗಜಬಜಿಸಿದತ್ತು ಭಾರತ ರಣಕೇಳಿ ! ನೂರ್ಮಡಿಯ ಬಲದಿಂ ಚಲದಿಂ ಪಗೆಗೆಚ್ಚಿನಿಂ ಒಡಲ್ಗಿಚ್ಚಿನಿಂ ಚಂಡ ಪ್ರಚಂಡತನದಿಂ ಪಗೆಗಳುಂ ಪಗೆಗಳ್ ತಾಗಿ ಹೂಂಕರಿಸಿ ಮಾಂಕರಿಸಿ ಬೊಪ್ಪರಿಸಿ ರುಂಡಮುಂಡಂಗಳುಂ ಇಕ್ಕಡಿಗೆಯ್ದು ಸೆಂಡಾಡಿ ಕೆನ್ನೆತ್ತರೊಳ್ ಮಜ್ಜನಂಗೆಯ್ದು ಸೋಲ್ದು ರೋಸದುಸಿರಂಬರಿಸಿ, ಜರ್ವಿ ಜಾಲಾಡಿ ಕೊಚ್ಚಿ ಕಂಡರಿಸಿ ದಿಕ್ಕುದಿಕ್ಕಿಗೆ ಬಿರ್ದಿಕ್ಕಿ ರಣಕಾಳಿಯ ಪೂಜೆಗೆಯ್ಯುತುಂ ಸಾರ್ದುವೆ ೨೦

ನಿತೊ ದುರ್ದಿನಂಗಳ್. ಸತ್ತವರ ನೊಂದವರ ಗಾಯುವಟ್ಟವರವಬ
ಣೆಯ ಬೆವರ್ನೀರಿಂ ಕೆನ್ನೀರಿಂ ಕಣ್ಣೀರಿಂ ಮಿಂದು ಜೆಂಗಾಡಾಗಿ ನರ
ಳ್ದುದು ರಣಭೂಮಿ! ಪಿರಿಯರ್ಕಳ್ ರಣವೀರರಂ ಮುಂದಿಕ್ಕಿ ಜು
ದ್ದ ಜನ್ನದ ಅಧ್ವರ್ಯುರ್ದ್ಗಾತೃಹೋತಾರರುಂ ಋತ್ವಿಜರುಂ ಬಹ್ಮ
ನುಂ ದೆಸೆಗೊಡೆಯರುಂ ತಾವಾಗೆಸೆದರ್ ತ್ರಿಲೋಕಜ್ಞರವೊಲ್!

ಆನ್ ತಾನೆಂಬಾಕೆವಾಳರ ಜಂಕಣೆಯ ಬಲ್ಲುಲಿಯ ಗಲ್ಲಣೆಯ
ಕಿರ್ಚಿನ ಪುರ್ಚಿನ ಬೀರದುಲಿಯುಂ ಮಾಣಿಸಿ ಪುರ್ವಿನೊಂದು ಜರ್ವಿಂ
ಕಕ್ಕಸಗೊರಲ ಹೂಂಕೃತಿಯ ಬೀರರ ಜಂಗುಳಿಯುಂ ಜವನಾಳ್ಗಳ
ಜಂಗುಳಿಯುಂ ಮಾರ್ದತ್ತು ಎರ್ದೆಯುಂ ಬಿರಿವಂತು. ದಸದಿಸೆಯೊಳ್
ಎತ್ತೆತ್ತಲುಂ ಮುರಿದು ಮುಂಗೆಟ್ಟು ಚದುರಿ ಬಿಳ್ದ ವರೂಥಂಗಳುಂ, ೩೦
ಕಡಿದ ಬಿಲ್ಗಳ ಮುರಿದ ಕೂರ್ವಾಳ್ಗಳ, ಪುಡಿಪುಡಿವೆತ್ತಗದೆಗಳ
ದಿಂಡುರುಳ್ದ ರುಂಡಮುಂಡಗಳ, ಕಾಲ್ಮುರಿದ ತೇಜಿಗಳ, ಗಾಯುವಟ್ಟ
ಪೇರಾನೆಗಳ ಮಹಾ ಔತ್ಪಾತಕಂ ಬೊಮ್ಮಾಂಡದೋಡು ಬಿರಿಯು
ವಂತು! ದೆಸೆಗೊಡೆಯರ್ ನಡುಗುವಂತು; ಸಗ್ಗಿಗರಾಣ್ಮರ್ ಕಂಗೆಡು
ವಂತು ಮೇಳೈಸಿರ್ದುದು ಮೊನೆಯೊಳ್ ; ಪರ್ದುಕಾಗೆಗಳ್ ನರಿ
ನಾಯಿಗಳ್ ಸಂಚಿನ ಹೊಂಚಿನ ಗೆಯ್ಮೆಯಿಂ ಪರ್ಬಮನುಂಡು
ಪುಷ್ಕಳಂ ವ್ಯೈವೆರ್ಚಿ ನಾರುತಿರ್ದುವು ನಡೆಗೆಟ್ಟು ದಿನದಿನಂ. ಮತ್ತಂ
ಮತ್ತಂ ಮಡಿದರ ಮಡದಿ ಮಕ್ಕಳ್ ಬಂಧುಬಳಗಂ ತಮ್ಮತಮ್ಮ
ವರಂ ಪುಡುಪುಡುಕುತ್ತೆ ಕೊಳಗುಳದೆಲ್ಲೆಡೆಯುಂ ಅಂಡಲೆದು ರುಂಡ
ಮುಂಡಗಳಂ ಕಂಡೆಡೆ ತಬ್ಬಿ ಗೋಳಿಟ್ಟು ಕಣ್ಣೀರಿಟ್ಟು ಬಗೆಗೆಟ್ಟು ೪೦
ರೋದಿಸುತಿರ್ದರ್ ನೋಳ್ಪರ ಎರ್ದೆಯುಂ ಕರಗಿ ನೀರಪ್ಪವೊಲ್.

ಅಂತಪ್ಪುದುಮಾಗಳುರ್ಕಿದ ಸೊರ್ಕಾಳ್ತನಂ ಕುರ್ಗಿದಂತೆ
ಬಾಡಿದ ಪಡಿಮೊಗದಿಂ ದುರ್ಯೋಧನ ದುಶ್ಶಾಸನರ್ಕಳ್ ಪೊಕ್ತೀ
ರ್ವ ಪೊಳ್ತಿನಲಿ ರಣಭೂಮಿಯೊಳ್ ಅಂಡಲೆಯುತುಂ ಬಲಾ
ಬಲದ ಸಮೀಕ್ಷೆಯೊಳ್ ಮನವಿಟ್ಟು ಕಳೆದುಳಿದ ಪಡೆಯಂ ಲೆಕ್ಕಿಸಿ

ಕೊಳಗುಳದ ಬೆಸನದಿಂ ಕುಲದೈವವಂ ಸ್ಮರಿಸುತಂ—ಮಾದೇವ! ನೀನೆಗತಿಯಿಂದಿನ್ನೆಬರಂ ಸಂಕೆಯಿಲ್ಲದಿನಿತು ನೆಮ್ಮಿರ್ಪ್ಪುಂ ಎಮ್ಮ ಕಡುಪುಂ ಬಲ್ಪುಂ ಕಳಿದು ಮಳಿದು ಪೋಗುತಿರ್ಕುಮೆಂಬೊಂದು ಚಿಂತೆಯಿಂ ಮುಂಗೊಂಡು ನಡೆಯುತ್ತೈತಂದರ್.

ಇಂತಿಂತೋರೊಂದು ಪೊಳ್ತರೆಯ ಪದಮುರುಳ್ದು ಮುಗಿ ೫೦ ಬಗಿಯಾಗೆ ಸಿರಿಚಣದೊಳ್ ನೇಸರ್ದೇರುಂ ಮೇಲೇರ್ದುದೊಯ್ಯನೆ ಎಂದಿನಂತೆಪೊಲ್. ಸಂಗ್ರಾಮದಗ್ನಿಯಿಂ ಸುಟ್ಟು ಕರಿಮುರಿವೋಗಿ ಭಯಭೀತಿ ಕಾವಳಿಸಿದಂತೆ ಬಣ್ಣ ಗೆಟ್ಟ ದುರ್ಯೋಧನಂ ಸೋದರನಂ ಕುರಿತಿಂತೆಂಗುಂ—ತಮ್ಮಾ! ಆವ ದುರ್ನಿಮಿತ್ತಮೊ ಕಾಣೆನ್. ಇಂದು ಮೊದಲ ಯಾಮದೊಳ್ ದುಃಸ್ವಪ್ನಮಂ ಕಂಡೆನ್ನೈ. ಆಗ ಳಿಂದೆನ್ನ ಮನವಳ್ಕಿ ಮಿಡುಕಿಸುತಿದೆ ಪ್ರಾಣಮಂ.

ದುಶ್ಯಾಸನಂ—ಹಾ! ಸೋಜಿಗಂ. ದುಃಸ್ವಪ್ನಕ್ಕೆಂತಳ್ಕುವುದೈ ಕ್ಷಾತ್ರ ಬುದ್ಧಿ? ಆವ ಆಪತ್ತಿರ್ಕುಮೆಂದು ನೀನಿಂತು ತಳ್ಳಂಕಬಡು ತಿರ್ಪೆ?

ದುರ್ಯೋಧನಂ—ಮಾದೇವ ಬಲ್ಲಂ. ಇದುಂ ಆಪತ್ತಿನ ೬೦ ಮುನ್ಸೂಚನೆಯಲ್ಲದೆ ಬೇರಿಲ್ಲಂ.

ದುಶ್ಯಾಸನಂ—ಬಿಡು, ಬಿಡು, ಕೌರವೇಶ್ವರ! ನೀಂ ಸ್ವಪ್ನ ಗಿಪ್ನಮಂ ಕಂಡಳ್ಕುವುದೆಂದೊಡೇಂ? ಇದಂ ಲಜ್ಜೆಗೇಡಲ್ತೆ? ಪಡೆ ಯಿರ್ದು ಪಡೆಯುಳ್ಳರಿರ್ದು ಬಲ್ಪಿರ್ದು ನೆಚ್ಚಿರ್ದು ಕೆಚ್ಚಿರ್ದು ತಳ್ಳಂ ಕಮೆಂದೊಡೇನರ್ಥಂ?

ದುರ್ಯೋಧನಂ—ಅಂತಲ್ತು ತಮ್ಮಾ! ಪೆಂಬೇಡಿಯೆಂದು ಪಳಿಯದಿರೆನ್ನಂ. ದುಸ್ವಪ್ನಂ ಕೇಡಿಲ್ಲದೆ ಬರ್ಕುಮೆ? ಆವ ರಣಗಳಿಗೆ ಕಾಲಿಡುಗುಮೊ ಮಾದೇವ ಬಲ್ಲಂ!

ಈ ಪರಿಯಿಂ ಎರ್ದೆಯಳ್ಕಿ ತಳ್ಳಂಕಗೊಂಡ ಅಣ್ಣನ ನುಡಿಯು ನಾಲಿಸಿ ಕಟ್ಟೆಚ್ಚರಿಯಿಂ ನಿಡುಗಣ್ಣಂ ನೆಟ್ಟು ಕೇಳಿಸಿದನಿಂತು— ಅಣ್ಣಯ್ಯ! ಇಂದೇಂ ಸಲ್ಲದ ಪೊಲ್ಲದ ದುಶ್ಯಂಕೆ ? ಸೊರ್ಕುರ್ಕುವ ಜವ್ವನಿಕೆಯೊಳಿರ್ಪ ಪೊಡರ್ಪಿನ ಪರ್ಪರಿಕೆಯು ರೋಸಗೀಸದ ಕಟ್ಟುಬ್ಬರದ ಬೀರರ್ಗೆ ಸಲ್ವುದೇಂ ಸ್ವಪ್ನಬಾರ್ತೆ? ಅಹಃ ಸಾಣ್ಗೇಡಲ್ತೆ ?

ದುರ್ಯೋಧನಂ—ತಮ್ಮಾ ! ಮತ್ತಿದಂ ಪುಸಿಯೆನ್ನಲಕ್ಕುಮೆ? ಪುಸಿಯಾದೊಡೆ ಮನಮಿಂತೇಕಳ್ಕುಗುಂ ? ಕಲ್ಲೆರ್ದೆಯೊಳೇಕೀತಳ್ಳಂಕಂ? ಆನಿನ್ನೆಗಂ ಕಾಣೆನೆ ಸ್ವಪ್ನಗಿಪ್ನಮಂ? ಆದೊಡಂ ಈ ಪೊಳ್ತು ತಾಳದೆನ್ನಮನಂ. ಆವ ಕೇಡಿರ್ಕುಮೊ ಆನರಿಯೆಂ. ಇದಂ ದುರ್ನಿಮಿತ್ತಮಲ್ಲದೆ ಬೇರೇನಲ್ಲೈ.

ದುಶ್ಯಾಸನಂ—ಏನಿರ್ದೊಡಂ ಕಕ್ಕಸವಗೆಯಿಂದಿದಿರ್ಚಲಕ್ಕುಂ. ೮೦
ಅರಿಗಳಂ ಕೊರ್ಚಿ ತುಂಡರಿಸಿ ಮುಕ್ಕಡಿಗೆಯ್ದು ಮೂದೆಸೆಗಿಕ್ಕಿ ಜವನಂ ಜವಗಿಡಿಸುವ ಕೆಚ್ಚೆರಲಿರ್ದೆಯೊಳ್ ಇಂತೇಂ ಅಳ್ಕುಂ ?

ದುರ್ಯೋಧನಂ—ಒಪ್ಪಿದೆಂ ತಮ್ಮಾ ! ಇಂತಿದಂ ಅರಿಯುದನಿತು ಮೂಳನೆನಾಂ? ಯಾವೊಂದು ಭಂಗಮೆಯ್ತರ್ಪುದೆಂದು ಮನಂ ಅಳ್ಕುತಿರೆ ಏಂಗೈಯುಲುಂ ತೋರದೈ. ನಿನ್ನಾಣೆ ಇದು ಪುಸಿಯಲ್ತು; ಖಂಡಿತ ಪುಸಿಯಲ್ತು.

ಎಂದಾಡಿ ಸಿಡುಸುಯ್ದು ದುರ್ಯೋಧನಂ ಅಲ್ಲಲ್ಲಿ ಮಿಂಡುರುಳ್ದ ತಮ್ಮವರಂ ನೋಡುತಂ ಚಿಂತೆಯ ಮೋನದ ಧ್ಯಾನದ ಮತಿಗತಿಯೊಳ್ ಸಿಲ್ಕಿ, ಮಿಣ್ಣನೆ ಅತ್ತಿತ್ತ ಕಾಲಾಡಿ ಬನ್ನದುಸಿರಂ ಬರಿಸಿ ಮತ್ತೆಂದಂ—ಏಂ ಬಿದಿಯಾಣತಿಯೊ ತಮ್ಮಾ ! ಪುಟ್ಟಿಸಿಂದಾನಿನ್ನೆಬರಂ ಇಂತಪ್ಪ ತಳಮಳಮಂ ಕಂಡೆನಿಲ್ಲಂ. ಏಂ ಕಾರಣಮೊ ಮಾದೇವ ಬಲ್ಲಂ. ೯೦

ದುಶ್ಶಾಸನಂ ಮನದೊಳ್ ಚಿಂತಿಸುತಂ ತನಗೆ ತಾಂ–ದುಸ್ವಪ್ನಂ ಪುಸಿಯಾದೊಡೆಲೇಸಾಯ್ತುಂ. ಮುಂತಣ ಕಜ್ಜದುಜ್ಜುಗಕೆ ವಂತಣದೊಳಿರ್ಪುದು ಮನಂ.

ದುಶ್ಶಾಸನಂ ಪಿರಿಯಣ್ಣನ ಮೊಗದೊಳ್ ಮೂಡಿವರ್ಪ ಚಿಂತೆಯು ಕರ್ಪುಗುವ ಭಾವವಂ ನೋಡುತಂ–ಇಂತಿದೇಂ ಗಾವರಂ? ಇನ್ನುಂ ಮನಮುಂ ಕೆಚ್ಚಿನ ಸಿರಿ ಪುಗದಾಯ್ತೆ? ಇದೆಂದುಂ ನಿನಗೆ ತಗದು ಕಣಾ !

ದುರ್ಯೋಧನಂ–ಆಂ ಕೊಳಗುಳಕಳ್ಕಿ ನುಡಿದೆನಲ್ತು, ಸ್ವಪ್ನ ಬಾರ್ತೆಯಂ. ಎನ್ನೆರ್ದೆಯೊಳ್ ಉಸಿರುಳ್ಳನ್ನೆಬರಂ ಕಾದಿ ಮೋದಿ ಸಾವೆನಲ್ಲದೆ ಪಗೆಗಳ್ಕಿ ರಣಕಂ ಬೆನ್ನಾಗೆಂ. ಎನಗಂ ಪೊಸದೆ ಕಾದಾಳ್ತನಂ ? ೧೦೦

ದುಶ್ಶಾಸನಂ–ಅಂತೆನೆ ಸಾಜಂ. ಪುಟ್ಟುವುದು ಸಾಯಲಲ್ತೆ?

ಆ ಬಳಿಕಂ ಈರ್ವರುಂ ಮುಂಬರಿದು ರಣರಂಗಮಂ ಕಣ್ಣಾರೆ ನೋಡುತುಂ ಗಜಂಗಳ ವಾರುವಂಗಳ ರಥಂಗಳ ಕಾಲಾಳ್ಗಳ ಮೇಲಾಳ್ಗಳ ಕಾಪಿನಾಳ್ಗಳ ಕಡಿಮುರಿದೊಟ್ಟಯಿಸಿದ ಬಣಂಬೆಯೆನೆ ಎಲ್ಲೆಡೆಯುಂ ಕಣ್ಗೆಸೆವ ಘೋರ ರಣಕಣಮುಂ ದಾಂಟುತಿರಲ್ ಪಜ್ಜೆಗಳ್ ತೊಡರ್ದು ನೆಚ್ಚುಗೆಡಿಸಿ ಬಟ್ಟೆಗೆಡಿಪಂತೆ. ಮುತ್ತಾಗಳುಂ ರಣರಂಗದ ಪಡುಗಡೆಯಿಂ ಕಕ್ಕಸದನಿಯ ಕಹಳೆಯುಂ ಮೊಳಗಿ ಜೀವಾತ್ಮನಂ ಸೆರೆವಿಡಿಯೆ ಈರ್ವರುಂ ಅತ್ತಮೊಗವಿಟ್ಟೊಡಂ ಏನಿರ್ಕುಮೆಂದು ಬಗೆಯಲ್ಬಾರದಂತಾಗೆ ದುರ್ಯೋಧನಂ–ತಮ್ಮಾ ! ಇದೆತ್ತಣ ಕಹಳೆ? ಆವ ಸಡಗರಮಿರ್ಕುಂ? ಇದೆಮ್ಮ ಜಯದ್ರಥನ ಕಹಳೆಯಿರ್ಕುಮೊ ? ೧೧೦

ದುಶ್ಶಾಸನಂ–ಜಯದ್ರಥನಿಂದು ತೆಂಕಣ ದಿಶೆಯೊಳಿರ್ಪಂ.

ದುರ್ಯೋಧನಂ–ಅದೊ ಮತ್ತೆ ಮತ್ತೆ ಮೊಳಗುತಿರ್ಕುಂ ! ಆರ ವಿಜಯೋನ್ಮಾದದ ಕಹಳೆಯೊ ಕಾಣೆನ್.

ದುಶ್ಶಾಸನಂ–ಇದುಂ ಪಾಂಡವರ ಕಹಳೆಯೆ ಸೈ !

ದುರ್ಯೋಧನಂ–ಅದೆಂತೈ ತಮ್ಮಾ ! ಈಯೆಡೆಯೊಳ್ ಆವ ಬೀರನಿರ್ಪಂ ರಣೋನ್ಮಾದದ ಜಯಭೇರಿಯಂ ಬಾಜಿಸೆ? ಇದೇಂ ಕನಸೊ ? ನನಸೊ ? ೧೨೦

ದುಶ್ಶಾಸನಂ–ಈಗಳ್ ಆವಾವೆಡೆಯೊಳ್ ಆರಾರಿರ್ಪರೆಂದು ಪೇಳ್ವುದೆಂತು? ಆಯೆಡೆಯೊಳ್ ಕೃಷ್ಣಾರ್ಜುನರಿರವೇಳ್ಕುಂ, ಗಡ!

ದುರ್ಯೋಧನಂ–ಅಂತಾದೊಡೆ ಏಂ ಕತಮಿರ್ಕುಂ? ಅತ್ತ ಜಯಲಕ್ಷ್ಮಿಯೊಲಿದೊಡೆ ಎಮಗಲ್ತೆ ಕೇಡು? ಹಾ, ದಿನದಿನಂ ಸೋಲ್ವೆರ್ಚೆ ಪಡೆಗಳ್ ಕರಗುತಿರ್ಕುಂ. ಇನ್ನೇಂ ಗತಿಯೊ? ಏಂ ಭಂಗ ಬನ್ನಮೊ ? ಅಕ್ಕಟಕ್ಕಟಾ ! ಇದುಂ ಬಿದಿಯ ಗೊಡ್ಡಾಟ ಮಲ್ತೆ ತಮ್ಮಾ !

ದುಶ್ಶಾಸನಂ–ಬಿದಿಯಗೊಡ್ಡಾಟಮಲ್ತು ಅಣ್ಣಯ್ಯ! ಕೂಳ ಕೃಷ್ಣನ ಪೊಲ್ಲಾಟಂ! ಬಾಳ್ತೆಗೆಟ್ಟವನಂ ಕೊಚ್ಚಿ ಕೊಲ್ಲದೆ ಬಿಟ್ಟು ದೆಮ್ಮ ತಪ್ಪಾಯ್ತು ! ಇಂ ಕೂರ್ವಾಳದುರವಣೆಯಂ ತೋರದಿರ್ದೊಡೆ ಉಳಿವಿಲ್ಲೈ. ಕೇಳ್! ಕೌರವೇಶ್ವರ, ರಣದೊಳಾನವನಂ ಎದುರ್ಚಿದೊಡೆ ಪಗೆಗಳ ಪಾಂಗಿನಿಂ ಮಾರಾಂತು ಪೊಯ್ದು ಕೊಚ್ಚಿ ಚೆಚ್ಚಿ ತತ್ತಳ ತುಳಿದು ಸಿಗಿದು ಸೀಳಿ ಸುಂಟಗೆ ಪಂಟಗೆ ಸಲ್ವಿನಂ ಗಮ್ಮನೆ ಬಾಣಸುಗೆಯ್ಯದಿರ್ದೊಡಾಂ ಕುರುಕುಲದೊಳ್ ಪುಟ್ಟಿದ ಕಡು ಕೂಳನಪ್ಪೆಂ ! ೧೩೦

ದುರ್ಯೋಧನಂ–ಅಹುದಹುದು. ಕೃಷ್ಣನಿಂದೆಲ್ಲಂಕೆಡುಗುಂ. ಅವಂ ಕೂರಂ ಕೂಳಂ! ಪಾಪದ ಕೋಳ್ಕೈಸರ ಬೆಂಚೆಯೊಳ್ ಪೊ

ರಳ್ವ ಪಂದಿಯಂತು ನೀಚಂ! ಅವನಂ ಮೊದಲ್ ಮುಗಿರ್ಚಿ
ದೊಡೆ ವಿಜಯಂ ತೋಳ್ವಲಮುಳ್ಳರ್ಗ್ಗಕ್ಕುಂ. ಮತ್ತಂ ಮೋಸ ೧೪೦
ಗೀಸದ ಕವಡುವಿಜ್ಜೆಯ ಕಜ್ಜಂ ತಪ್ಪುಗುಂ. ಮೊದಲಿದಂ
ಯೋಚಿಸದಾಂ ಕೆಟ್ಟೆನಲ್ತೆ ?

ದುಶ್ಶ್ಯಾಸನಂ–ಈಗಳದಂ ಕೂರ್ವಾಳಿಂ ನೇರ್ಪಡಿಸಲಕ್ಕುಂ!

ಇಂತು ಕಿಚ್ಚಿನಿಂ ಕೆಚ್ಚಿನಿಂ ಕಿನಿಸಿನಿಂ ಪಲ್ಕಡಿದು ನುಡಿದ
ತಮ್ಮನ ಚಂಡಭಂಡತನಮುಂ ಕಂಡು–ತಮ್ಮಾ! ಇಂತಪ್ಪ ಬಲ್ಪು
ಳ್ಳೆಮ್ಮ ಸೈನ್ಯ ಬಲಂ ಎಂತು ಬಟ್ಟೆಗೆಟ್ಟುದೊ, ಗಜಗಳೆಂತು ನಡೆ
ಗೆಟ್ಟುವೊ ಮತ್ತೆಂತು ರಥಂಗಳ್ ದೆಸೆಗೆಟ್ಟುವೊ ಪಡೆವುಳ್ಳರೆಂತು
ಮತಿಗೆಟ್ಟರೊ ಕಾಣೆಂ. ಹಾ, ಎಲ್ಲಂ ಅಚ್ಚರಿಯಲ್ತೆ ? ನೀಂ ಇನ್ನಾ
ದೊಡಂ ಮುಂಬಟ್ಟೆಗೆಡದವೊಲ್ ಮಿಳ್ತುವಂ ಪೂಜೆಗೆಯ್. ತಮ್ಮಾ
ನಿನ್ನೊಳಗೆನಗಳ್ಕರುಂಟು ಶಿವನಾಣೆ! ಎನ್ನಾಣೆ! ನೀನಿಲ್ಲದೆ ೧೫೦
ಬಲ್ಪುಮಿಲ್ಲೈ! ಲೋಕಮಿಲ್ಲೈ!

ಇಂತೆಂದಣ್ಣನ ಮಾತಿನಿಂ ಎರ್ದೆಯೊಳ್ ಕಿಚ್ಚೆದ್ದು ಕೆಂಗಣ್ಣಿ
ಳ್ ಉರಿಕಿಡಿಯುಂ ಕಾರ್ದು ದುಶ್ಶ್ಯಾಸನಂ–ಇನ್ನೆಬರಂ ಕಳೆವೊಂದು
ಪರ್ವದೊಳ್ ಜಸಂ ಕೈಗೂಡದಿರೆ ಕತಮಿಲ್ಲದಿರ್ಪುದೆ ? ಕೃಷ್ಣನಂ
ವಸುದೇವ ಸುತನೆಂದುಂ, ನೆಂಟನೆಂದುಂ ಅಳ್ಕರೆಯಿಂ ಬಿತ್ತರಿಗೆ
ಯೊಳೊತ್ತರದ ಗಾಡಿಯಿನೊಪ್ಪಿರ್ದನೆಂದುಂ ಮನ್ನಣೆಯಿತ್ತು ಪಗೆ
ಯಂ ಬಗೆಯದಿರ್ದುದಲ್ತೆನೆಗಳ್ತೆವಡೆಯಲ್ ಕಾರಣಂ? ನಾಯಂತು
ನರಿಯಂತು ಕಳ್ವಕೂಳರೆಂತಂತು ಬಲ್ಪುಳ್ಳೆಮ್ಮ ಪಡೆಯಂ ಕಾಲ್ಮುರಿ
ದಿಕ್ಕಿ ಪಡೆಯೊಡೆಯರೆರ್ದೆಗೆ ಕಿಚ್ಚಿಕ್ಕಿದಂ! ಇಂ, ಮುಕ್ಕಣ್ಣ
ನಿದಿರಾದೊಡಂ ಮುಕ್ಕಡಿಗೆಯ್ದು ಮೂಡೆಸೆಗಿಕ್ಕುವೆಂ ಕೇಳ್, ೧೬೦
ಅಣ್ಣಯ್ಯ! ಮನದೊಳ್ ನೆಚ್ಚಿರ್ದೊಡೆ ಎರ್ದೆಯೊಳ್ ಕೆಚ್ಚಿ
ರ್ದೊಡೆ ಜವಂಗೆ ಎಂಟೆರ್ದೆವೇಳ್ಕುಂ ಈ ಬಳಿಯೊಳ್ ಸುಳಿಯಲ್!

ಇಂತು ಅಂಕೆಯಿಲ್ಲದೆ ಬಿಂಕದಿಂ ಚಲದಿಂ ಹೂಂಕರಿಸಿ ಮಾಂಕ

ರಿಸಿ ತೋಳಂ ಚಪ್ಪರಿಸಿ ಕಕ್ಕಸದಿಂ ಕಟ್ಟುಬ್ಬಸಬಡುತುಂ ನುಡಿಯು
ತಿರ್ದನಿತರೊಳ್ ಬಡಗಣಿಂದೊರ್ವಂ ಏದುತ್ತೆ ತೇಂಕುತ್ತೆ ಗಾರು
ಗೆಟ್ಟು ದಿಕ್ಕೆಟ್ಟು ವೆಳ್ಪಟ್ಟು ಭಯಭೀತಿಯಿಂ ತತ್ತರಿಸಿ ಗಾವರಿಸಿ ಓಡಿ
ಬರುತಿರ್ದುದಂ ಕಂಡು ಎರ್ದೆಯೊಳುಸಿರಂ ಬಿಗಿವಿಡಿದು ಬೆಮೆಗೊಂಡು
ಬೆರಗುವಟ್ಟು ಈರ್ವರುಂ ನೋಡುತ್ತಿರೆಯಿರೆ ಕಂಚಿನ ಪೆರ್ದಂಡಂ
ಕೈದಪ್ಪಿ ಕೆಡೆದಂತೆ, ತೆಂಗಿನ ಸಸಿಯುಂ ಬೇರುಡಿದು ದಿಂಡುರುಳ್ದಂತೆ
ಪದತಲಕೆ ಕೆಡೆದು ಅಡ್ಡಬಿಳ್ದು ಎರ್ದೆಯುಂ ಬಡಿಬಡಿದಳ್ತು ಗೋಳ್ಗ ೧೭೦
ರೆದು ಬೆಸಸಿದನಿಂತು–ಜೀಯಾ ! ಪ್ರಮಾದಂ ! ಪ್ರಮಾದಂ !

ದುರ್ಯೋಧನಂ ಮನದೊಳ್ ಮಿಡುಕಿ ಆತುರ ಕಾತರದಿಂ
ಕೇಳ್ದನಿಂತು–ಏಂ ಪ್ರಮಾದಂ ? ಏಂ ವಿಚಾರಂ ?

ಕಾಲಾಳ್–ಮನ್ನಿಸಿಂ ಜೀಯಾ !

ದುಶ್ಶಾಸನಂ–ಎಲೆ, ಗಾಂಪ ! ತಳ್ವುದೇಕಿಂತು ಏನಾಯ್ತು,
ಏಂ ವಾರ್ತೆ, ಪೇಳ್ ಚೆಚ್ಚರದಿಂ !

ಕಾಲಾಳ್ ಹೋಯೆಂದಳುತುಂ– ಮನ್ನಿಸಿಂ ಜೀಯಾ !
ಘೋರ ವಾರ್ತೆಯನೊರೆಯಲ್ ಬಾಯ್ಬಾರದೈ !

ದುಶ್ಶಾಸನಂ–ಚಿಃ ಚಿಃ ! ಇಂತಳ್ಕಂಕವೇಕೆ ? ಏನಾಯ್ತು
ಪೇಳ್. ಏನ್ ಘೋರವಾರ್ತೆ ?

ದುರ್ಯೋಧನಂ ಬಳಿಸಂದು ಕೆಂಗಣ್ಣಿಂ ನೋಡುತುಂ–ಏಂ
ಗಡಬಡಿಸಿ ಬಂದೈ ? ಏಂ ದುರ್ವಾರ್ತೆ ಏಂ ಬೆಸನಂ ? ಪೇಳ್
ಚೆಚ್ಚರದಿಂ !

ಆಗಳಾ ದುಶ್ಶಾಸನಂ ಬಟ್ಟೆಗಳಚಿದಂತೆ ಚಂಡತನದ ಗಂಡ
ಗರ್ವಂ ಕಳೆದು ಭೀತಿಯ ಗಾವರದೊಳ್ ಮುಳುಂಗಿ–ಇದೇನೈ

ಇಂತು ಕಟ್ಟುಬ್ಬಸಂಬಡುವೆ....?ಶಂಡತನಂ ಸಾಲ್ಗುಂ. ಏನಾಯ್ತು
ಪೇಳ್ ? ತಳ್ವದೆ ಪೇಳ್ ?

ಕಟ್ಟುಪ್ಪಣೆಯೊಳ್ ಅವಸರಿಸಲ್ ಬೆಂಗಾಪಿನ ದಕ್ಕಡಂ ತಲೆ
ಯೆತ್ತಿ ಕಂಬನಿಯೊಸರ್ದ ಕಣ್ಗಳಿಂ ನೋಡುತುಂ–ಜೀಯಾ! ಎಂತು
ಪೇಳ್ವೆಂ? ಎನ್ನೀ ನಾಲಗೆ ಬಿಳ್ದು ಪೋದೊಡೊಳ್ಳಿತು. ಪೇಳಲಾರೆನ್ನೈ! ೧೯೦
ಕಡು ಸಂಕಟಂಬಡುತಿದೆನ್ನೊಡಲ್. ಹಾ, ಏಂ ಬಿದಿಯೊ, ಏಂ
ದೈವವೊ ಇಂತಪ್ಪ ಕಿಡುಗಾಲಂ ಬಂದೊದವಲ್ ? ಹಾ....ಹಾ !

ದುರ್ಯೋಧನಂ–ಚೀಃ ಶಂಡ! ಇಂತೇಕೆವ್ಮಂ ಸಂಕೆಯ
ಬೆಂಕೆಯೊಳ್ ಸುಟ್ಟುರಿಸುವೆ ? ಪೇಳ್, ಚೆಚ್ಚರದಿಂ. ನೋಯದೆ
ಬೇಯದೆ ಇದ್ದುದನಿದ್ದಂತೆಯೆ.

ಬೆಂಗಾಪಿನ ಕಾಲಾಳ್ ನಡುನಡುಗಿ ನವಿರ್ ನಿಮಿರ್ಚೆ ಕಟ್ಟು
ಬ್ಬಸದಿಂ–ಅಯ್ಯಾ, ಕೈಮುಗಿದು ಬೇಳ್ವೆಂ. ಮನ್ನಿಸಿಂ. ಅಯ್ಯೊ,
ಎಂತಿಂತೊಂದು ದುರ್ವಾರ್ತೆಯನೆನ್ನ ಬಾಯೊಳ್ ಉಸುರುವೆಂ.
ಹಾ, ಭೀಷ್ಮಾಚಾರ್ಯರ್ ಶರಘಾತದಿಂ ಧರೆಗೆಡೆದು ನಡುನೀರೊ
ಳೆಲ್ಲರಂ ಕೈವಿಟ್ಟರ್ ! ಹಾ....ಕೈವಿಟ್ಟರ್ ಗಡ ! ೨೦೦

ದುರ್ಯೋಧನಂ–ಕೆಟ್ಟೆನ್ನೈ ಕೆಟ್ಟೆ ! ಇದಲ್ತೆ ದುಸ್ವಪ್ನದ
ಸೂಚನೆ ? ಹಾ, ತವಮ್ಮಾ ಏಂಗೆಯ್ಯಲಕ್ಕುಂ ? ಇಂ ಮುಂತೇಂ
ಗತಿ ? ಎಂತು ಸೈಸುವೆಂ ? ಇನ್ನಾರ್ ಮುಂಬಟ್ಟೆ ತೋರ್ವರ್ ?
ಏಂ ಘೋರಂ ? ಏಂ ಪ್ರಮಾದಂ? ಎಂದು ಕಡು ದುಕ್ಕ ಸಂಕಟಂ
ಗಳ ಕಟ್ಟುಬ್ಬಸದೊಳ್ ಗೋಗರೆದು ನಿಡುಸುಯ್ದಂ. ಕಣ್ಣೊಳ್
ಕಂಬನಿ ಒಸರ್ದುದು ಧಾರೆಧಾರೆಯಾಗಿ. ಘೋರ ಸಿಡಿಲೆರಗಿದ
ಕಟ್ಟುರಿಕೆಯೊಳ್ ಸಿಡಿದೊಡೆಯುವಂತಿರ್ದ ಮಂಡೆಯಂ ಕೈಗಳಿಂ

ಬಿಗಿವಿಡಿದು ಮತ್ತಂ ಪಳಯಿಸಿದನಿಂತು–ಇಂತಪ್ಪ ಪಟುಭಟರಿರೆ
ಪಡೆಯುಳ್ಳರಿರೆ ಬೆಂಗಾಪಿನವರಿರೆ ಮಿಳ್ತೊದವಿತೆ ಎನ್ನಯ್ಯಂಗೆ?
ಹಾ, ಏಂ ದುರದೃಷ್ಟಂ! ಏಂ ಗಂಡಂ? ಏಂ ಪ್ರಮಾದಂ? ಏಂ ೨೨೦
ಸಂಕಟಂ? ಹಾ, ಬ್ರೊಮ್ಮಾಂಡಮೆ ಬಿರಿದು ಪಳಂಚಿದವೊಲ್
ಎನ್ನೆರ್ದೆ ನಡುನಡುಗಿ ಬಿರಿಯುತಿರ್ಪುದು. ಹಾ,ತಾಳೆನ್ನೆ, ಬಾಳೆನ್ನೆ!

ದುಶ್ಶಾಸನಂ ಎರ್ದೆಯಂ ಬಿಗಿಯೊತ್ತಿ ಬಿಸಿಯುಸಿರ್ವಿಟ್ಟು–
ಹಾ, ಕುರುಕುಲದ ಕಳಸಂ ಕಳಚಿ ಬಿಳ್ದುದೆ! ಏಂ ದುರದೃಷ್ಟಂ?
ಹಾ, ಏಂ ಕಷ್ಟ ನಷ್ಟಂ? ದುರ್ವಿಧಿಯಿಂತು ಸೊರ್ಕುಕ್ಕುವ ಜವ್ವ
ನಿಗರಂ ಕಿಕ್ಕಿ ತೆಕ್ಕೆಯಾಡುವುದೆಂದರಿತೆನಿಲ್ಲಂ. ಇನ್ನೆಂಬರ ಇಂತಪ್ಪ
ಘೋರ ರೂಪಿನ ಸಂಕಟಮನೆಂದುಂ ಕಂಡೆನಿಲ್ಲಂ. ಹಾ, ದುರ್ದೈ
ವವೆ?

ಇಂತೆಂದು ಈರ್ವರುಂ ಗೋಳಿಡುತುಂ ರೋಷದಿಂ ತಳ್ಳಂಕ
ದಿಂ ದುಕ್ಕದಿಂ ಕಣ್ಣೀರ್ ಬೆವರ್ನೀರ್ ಬಸಿದಿರೆ ಬಣ್ಣಂಗೆಟ್ಟು ೨೩೦
ಕಟ್ಟುಬ್ಬಸದಿಂ ಕಾಲಾಳಂ ಕುರಿತಿಂತೆಂದಂ ಕುರುರಾಯಂ–ಎಲ್ಲಿ,
ಯಾವ ಎಡೆಯೊಳ್ ಕೆಡೆದಿಹರ್ ಭೀಷ್ಮರ್? ಯಾರಿಂದೊದವಿತು
ಮೃತ್ಯು ಸಂಕಟಂ?

ಕಾಲಾಳ್–ಅಯ್ಯಾ, ಕೃಷ್ಣಾರ್ಜುನರ್ ಕಂಟಕರಾದರ್ ಆಚಾ
ರ್ಯರ್ಗೆ. ನಾಳನಾಳಂಗಳಂ ಕೊಳ್ಳಿವುಳ್ಳಿಯುಪ್ಪಿನೆಗಂ ಸದೆದು
ಕೆನ್ನೀರಿಂ ಮಜ್ಜನಗೊಳಿಸಿ ಧರೆಗುರುಳ್ಚಿದರ್. ಅನಂತರಮಾ ಕೃಷ್ಣಾ
ರ್ಜುನರ್ ತಣ್ಣೆಳಲೊಳ್ ಶರಮಂಚಮಂ ನಿರ್ಮಿಸಿ ಆಚಾರ್ಯರಂ
ಅಲ್ಲಿಗೊಯ್ದಿಟ್ಟು ತಾಮೆ ಶೈತ್ಯೋಪಚಾರದೊಳ್ ತೊಡಂಗಿದರ್. ೨೪೦

ದುಶ್ಶಾಶನಂ ಪಲ್ಕಡಿದು ಮೊಗಮಂ ಗಂಟಿಕ್ಕಿ ರೋಷತಾಪಂಗ
ಳಿಂದುರಿದುರಿದು–ಅರ್ಗೆ ವೇಳ್ಕುಂ ಆ ಕೂಳರುಪಚಾರಂ? ಇವರಂ
ಕೊಚ್ಚಿ ತುಂಡರಿಸದೆ ಬಿಟ್ಟೆನಾದೊಡೆ ಆನಲ್ತು ದುಶ್ಶಾಸನಂ!

ದುರ್ಯೋಧನಂ–ನಡೆ ದೂತ, ತೋರ್ ಎಲ್ಲಿಹನ್ ಆಚಾರ್ಯಂ. ಏಳ್, ಏಳ್ ! ಬಟ್ಟೆದೋರ್. ಪೋಪವಸರದೊಳ್ ಬಟ್ಟೆದಪ್ಪಿದೊಡೆ ತಳ್ವುದು ಸಮಯಂ.

ದುಶ್ಶಾಸನಂ–ಸೀಂ ನಡೆ ಮುಂತೆ, ಚೆಚ್ಚರದಿಂ ಪೋಗಲಕ್ಕುಂ.

ಕಾಲಾಳ್ ತೆಕ್ಕನೆ ಉಸ್ಸೆನುತೆಳ್ದು ಬಿಳ್ದುವೋಲ್ ಮಾರುಗಾಲಿಕ್ಕಿ ಮುನ್ನಡೆಯಲ್ ಕುರುಕುಲಜರೀರ್ವರುಂ ಬೆಂಗಡೆಯಿಂ ಓಡುತ್ತೆ ತೇಂಕುತ್ತೆ ಮುಂಬಟ್ಟೆಯುಂ ಸಮೆಸಿ ಕುರುಕ್ಷೇತ್ರದ ಪಡುವಣ ದೆಶೆಯೊಳ್ ತಣ್ಣೆಲಳ ತಣ್ಪಿನ ನಲ್ದಾಣದೊಳಿಕ್ಕಿದ ಶರಮಂಚದ ಪತ್ತೆ ಸಾರ್ದು ಭೀಷ್ಮರಂ ಕಂಡರ್. ಬಳಿಯೊಳ್ ಕೃಷ್ಣಾರ್ಜುನರುಂ ಮೇಣಿತರ ಪಾಂಡವರುಂ ಪಟುಭಟರುಂ ಅತಿರಥರುಂ ಮಹಾರಥರುಂ ಷಡುರಥರುಂ ಒಗ್ಗೂಡಿ ಸುತ್ತಮುತ್ತಂ ನೆರೆದಿರಲ್ಕೆ ಗಜಬಜಿಸಿದತ್ತು ಬಗೆವಗೆಯ ಮಾನಸಂ ಅತಿರೇಕದಿಂ. ದುರ್ಯೋಧನಂ ಕಣ್ಣೀರ್ದುಂಬಿ ಪರಿತಾಪದಿಂ ಸಂಕಟದಿಂ ದುಕ್ಕದಿಂ ತಹತಹಿಸಿ ಮಂಡೆಯುಂಮಣಿದು ಕುರುಕುಲದಜ್ಜಗಿಂತಿದಂ ಕೇಳಿಸಿದಂ–ಅಕ್ಕಟಾ ! ಇಂತೆಂತು ಗಾಸಿಯಾಯ್ತು ನಿಮಗೆ ಮುತ್ತಯ್ಯ ! ಪಡೆವಳರ ಬೆಂಗಾಪಿರ್ದ ಕಾಲಾಳ್ಗಳ್ ರಾವುತರ್ ಮಾವುತರ್ ಇರ್ದ ಬಿದಿಯಾವೆಡೆಯೊಳ್ ಹೊಂಚಿರ್ದುದು ನಿಮ್ಮಂ ಧರೆಗೆಡಗೆ ? ಹಾ, ನಿಮ್ಮನಿಂತು ನೋಳ್ಪುದು ಕಷ್ಟಂ; ಕಡುಕಷ್ಟಂ. ಎಮ್ಮ ತೋಳ್ಬಲ್ಪಿಂದಿಗೆ ಮುರಿದು ಮಣ್ಣಾಯ್ತು. ಗತಿಗೆಟ್ಟುದು ಮುಂಬಟ್ಟೆ. ಇನ್ನೇಂ ಗತಿಯೈ ? ಇನ್ನಾರ್ ಮತಿಯುಳ್ಳರ್ ? ಇನ್ನಾರಿಂತು ಬಟ್ಟೆದೋರ್ವರ್? ಇನ್ನಾರಂ ಕಾಡುವೆಂ ಬೇಡುವೆಂ ಹಾ ! ಎಂದಳುತುಂ ಅಡಿವಿಡಿದು ಕಣ್ಣೀರಿಟ್ಟು ಗೋಳಾಡಿದಂ.

ದುಶ್ಶಾಸನಂ ಬಳಿಸಂದು ಮೈಯ್ಯ ನೇವರಿಸಿ ಕಂಬನಿಯಂ ಬಸಿದು ನಿಡುಸುಯ್ದು ದುಕ್ಕವುಕ್ಕಿ ಗದ್ಗದಿಪ ಕೊರಳಿಂ ನುಡಿದ

ನಿಂತು–ಹಾ, ಮುತ್ತಯ್ಯ ! ಇಂತೊದವಿತೆ ದುರ್ದೆಸೆ ನಿಮಗಂ ?
ನಿಮ್ಮನಿಂತು ಗಾಸಿಗೊಳಿಸಲೆಂತು ಮನಬಂತು ಕೂಳರ್ಗೆ? ಧೂರ್ತರ್
ಪಾಪಿಗಳ್ ಕಿಚ್ಚಿಕ್ಕಿದರೇಂ ಕೆಚ್ಚಿಸೆರ್ದೆಗೆ ? ೨೭೦

ರೋಸದಿಂ ತಾಪದಿಂ ದುಕ್ಕದಿಂ ಸಂಕಟದಿಂ ಕೊರಳ್ಗಟ್ಟಿ ನುಡಿ
ಗಟ್ಟಿ ಕಂಬನಿ ಧಾರೆಧಾರೆಯಪ್ಪಿ ಸುರಿಯುತ್ತಿರಲ್ ಕೊರಲಮರ್ದಪ್ಪಿ
ಯುಂ ಪಣೆಯ ಬೆವರಂ ಒರಸಿಯುಂ, ಕಂಬನಿಯಂ ಸೂಸಿಯುಂ
ಕಡುಬೆಸನದಿಂ ಕೇಳಿಸಿದನಿಂತು–ಬೊಪ್ಪ! ನಿಮ್ಮ ಹಿತೋಕ್ತಿಯಂ
ಮಿಾರ್ದು ಪೊಣರ್ಕೆಯಂ ಕೈಕೊಂಡಪರಾಧಮಂ ಮನ್ನಿಪುದು.

ಭೀಷ್ಮಾಚಾರ್ಯಂ ಕಂದಿ ಕುಂದಿ ಕರ್ಪಿಟ್ಟ ಮೊಗದಿಂ–
ಕಂದ ! ಚಿಂತಿಸದಿರ್ ಬಿದಿಯಾಣತಿಗೆ ಆರುಂ ಪೊಣೆಯಲ್ಲಂ.

ಬಳಿಯೊಳ್ ಬಗೆಗೆಟ್ಟು ಕಂಗೆಟ್ಟು ನಿಡುಮುಸುಡು ಕರ್ಪಿಟ್ಟು
ಕಂಬನಿದುಂಬಿ ತಲೆವಾಗಿ ನಿಂದ ಕುರುರಾಯನಂ ಮೈದಡವಿ ಪರಿ
ತಾಪದಿಂದೆಂದನಾ ಕುಲಾಚಾರ್ಯಂ–ಕೇಳ್, ಕೌರವ! ನೀನಿಂತು ೨೮೦
ತಹತಹಿಪ ಕತಮಿಲ್ಲಂ ; ಕರ್ಮಬಂಧಮಂ ತಪ್ಪಿಸಲಾರ್ಗಳವು ?

ಆ ಬಳಿಕ್ಕಂ ಶ್ರೀಕೃಷ್ಣಂ ಅರ್ಜುನನೊಡಂ ಆಚಾರ್ಯರ ಬಳಿ
ಸಂದು ಮೈನಿಳುಪಿ ನೋವಂಮುಳಿಸಿ ನಲ್ನುಡಿಯಿಂ ಬೆಸಸಿದನಿಂತು–
ಆರ್ಯ, ವಿಶ್ರಮಿಸಿಂ. ನಿಮ್ಮಾ ಪತನಮಂ ಮನದೊಳಿಕ್ಕಿ ತಳಮಳಿಸ
ದಿರ್ಪೈ. ಬಿದಿಯ ಮಾಟದಿಂ ಕಣ್ಮಾಯದೊಳಾಯ್ತು ನಿಮ್ಮ ಪತನಂ.
ಇಂತಪ್ಪ ಸತ್ಕುಲಜರ್ ಮಡಿಗೆಟ್ಟು ಪೊಲ್ಲದ ಸಲ್ಲದ ಕಜ್ಜಮಂ
ಗೆಯ್ದುದಂ ಮರೆತು ನಿಚ್ಚಂ ನಿರ್ವ್ಯಸನದಿಂ ವಿಶ್ರಮಿಸಲಕ್ಕುಂ.
ಇದಂ ನಿಮ್ಮೊಳೆನ್ನ ಸವಿನಯಮಪ್ಪ ಬಿನ್ನಪಂ. ಇಂತೆಮ್ಮ ಅಪ
ಚಾರಮಂ ಮನ್ನಿಸಿ ಲಾಲಿಸೆನ್ನ ಮಾತಂ ಆಚಾರ್ಯ !

ಭೀಷ್ಮಾಚಾರ್ಯಂ ನಿಡುಸುಯ್ದು ಪುರ್ಬೆತ್ತಿ ನೋಡುತುಂ, ೨೯೦
ಮನಂ ಬೇವಾಗಿ ಗಾರಾಗಿ ಸೋಲ್ತು ಮುಸುಡುಂ ಬಣ್ಣಗೆಟ್ಟು ಬಾಡಿ

ಬಳಲ್ದು ಕರ್ಪಿಟ್ಟರಲ್ ಮೆಲ್ದನಿಯಿಂ ನುಡಿದಂ–ಶ್ರೀಕೃಷ್ಣ ! ಎನ್ನೊಳ್ ಇನ್ನೇಂ ಬೆಸನಂ ಪೇಳ್? ಬಲ್ಲಿದರಂ ಪೊರೆಯೆ, ಕೂಳರಂ ತತ್ತಳ ತುಳಿಯೆ ನೀನಿರ್ಪೆಂ. ಆನಿನ್ನು ಸಿಶ್ಚಿಂತೆಯಿಂ ವಿಶ್ರಾಂತಿಯೊಳ್ ಕೆಡೆದು ಸಗ್ಗವಾಳ್ದಪನಂ ಭಕುತಿಯಿಂ ನೆನೆನೆನೆದು ಎನ್ನೆಲ್ಲ ತಪ್ಪೊಪ್ಪುಗಳ ಒತ್ತೆಯೀವೆಂ ಸಗ್ಗದ ಪಥಮಂ ಪಿಡಿವನ್ನೆಗಂ. ಕುರುಕುಲಜರ್ ಪಾಂಡವರೊಡಂ ಒಗ್ಗೂಡಿ ನಲ್ಮೆಯಿಂ ಬಲ್ಮೆಯಿಂ ನಿಡುಬಾಳ್ಕೆಯೊಳ್ ಬಾಳದೆ ಬಟ್ಟೆಗೆಟ್ಟುದೊಂದೆ ಬೆಸನಂ. ಇನ್ನಾದೊಡಂ ಶಾಂತಿಯಂ ಪಾಲಿಕುಂ. ಮಾಯಮಾಟದಾಟದೀ ರಕ್ಕಸಗೊಲೆಯ ಘೋರ ಪಾತಕಮಂ ತೊರೆಯಲ್ವೇಳ್ಕುಂ. ಇಂತಿದಂ ಮನದೊಳಿಟ್ಟು ನೀಂ ಕಾಪಿಡ್ವೈ ಎನ್ನ ಕುಲಜರಂ. ಆಂ ಮರಣಿಪ ಮುನ್ನಂ ಎಲ್ಲರುಂ ಒಕ್ಕೂಡಿ ಶಾಂತಿಯಂ ಪಾಲಿಪುದಂ ಕಣ್ಣಾರೆ ಕಂಡು ಧನ್ಯನಪ್ಪಂತು ಭಾಷೆಯಂ ಕರುಣಿಪುದು; ಇದೆನ್ನ ಕೊನೆಗಾಲದ ಪಂಬಲಮೆಂದೊರೆವೆಂ ಶ್ರೀಕೃಷ್ಣಾ ! ೨೦೦

ಶ್ರೀಕೃಷ್ಣಂ ಆಚಾರ್ಯನ ಪಣೆಯೊಳ್ ಹಸ್ತಮಂ ನಲ್ಮೆಯಿಂ ದಿಕ್ಕಿ ಇಂತು ಕೇಳಿಸಿದಂ–ಆಚಾರ್ಯ ! ಆನಾಥ್ಯನಲ್ತಿದರೊಳ್ ಎಂದೊಡೆ ಮುನಿಯದೆ ಮುನ್ನಿಸೆನ್ನಂ. ಕೌರವರ್ ಆದಿಮಧ್ಯಾಂತಂಗಳ ಸಕಲ ವಿಚಾರಮಂ, ಸುಕದುಕ್ಕಮಂ ಮರೆತು ಸಂಧಿಗೊಪ್ಪಿದೊಡೆ ಶಾತಿಯಂ ಪಾಲಿಪುದು ಕಷ್ಟಮಿಲ್ಲೈ.

ಅದರ್ಕಾ ದುರ್ಯೋಧನಂ ಮುಳಿದು ಕನಲ್ತು ಕಿಡಿಕಿಡಿಯಾಗಿ ಉಬ್ಬೆಗದಿಂದೊರಲ್ವನೆಂತೆನೆ–ಏನಯ್ಯಾ, ಇಂತೊಂದು ಪೊಲ್ಲದ ಸಲ್ಲದ ನುಡಿಯಂ ನಾಣ್ಗೆಟ್ಟುನುಡಿಯುತಿಹೆ. ತೆಗೆ ! ತೆಗೆ ! ಸಾಲ್ಗುಮಿಾ ಪರಿಹಾಸಂ. ಕೌರವರ್ ಮಾತ್ರಮೆಂತು ಬದ್ಧರ್ ಆದಿಮಧ್ಯಾಂತಂಗಳಂ ಮರೆತು ಸಂಧಿಯಂ ಕೈಕೊಳೆ ? ೨೧೦

ದುಶ್ಯಾಸನಂ ಪಲ್ಕಡಿದು ರೋಸದಿಂದುರಿದುರಿದು ಕಣ್ಕೆಕ್ಕರಿಸಿ ಬೀರದ ಬಿರುನುಡಿಯ ಕಲಿಯಾಗಿ–ಎಲೆಲೆ, ಕೂಳ! ಈ ಮಾಯ

ದಾಟದ ಕವಡುವಿಜ್ಜೆಯ ಮಾಳ್ಕೆಯಿಂದಲ್ತೆ ನೀಂ ಕುತಂತ್ರಮಂ
ಪುಟ್ಟಿಪುದು; ಪಾಲಿಪುದು; ಪಾಳ್ಗಿಡಿಪುದು. ಏಂ ಮಂತ್ರತಂತ್ರ
ಮೊ? ಏಂ ಡೆಕ್ಕಾಳತನಮೊ? ನಿನ್ನ ಹೀನಮಪ್ಪ ನಡೆಯೊಳೇಂ
ಸಂಧಿ ? ಪೊ, ಪೊಣರ್ವೆಂ ಸಾವು ಸನ್ನಿಹಿತಮಪ್ಪನ್ನೆಗಂ ! ೩೨೦

ಶ್ರೀಕೃಷ್ಣಂ–ಎಲೆ, ರಕ್ಕಸವಗೆಯ ದಕ್ಕಡಿಗ! ಇಂತಪ್ಪ ರೋಷ
ದೋಷಂಗಳ್ ಶಾಂತಿ ಸಂಧಾನಂಗಳಿಂಗಳವೇಂ? ಬರಿದೆ ಮಾತಿ
ನಿಂದೇಂ ಬರ್ಕುಂ? ನಿಜ ಕುಲಜರಂ ಕಾಡಿ ಕಿರುಕುಳಕೊಟ್ಟು ಸೈಗೆ
ಡಿಸಿ ಪಗೆಗೆಚ್ಚಿನಿಂ ಪೊಣರ್ದು ಗಂಡರೆನಿಪ ಮುಮ್ಮೆಯ್ಯ ರೋಸದೆಸ
ಕದುಪಟಳದ ತಾಮಸರ್ ತಿರೆಗೆ ಪೊರೆಯಲ್ತೆ? ಇಂ ನಿನ್ನೊಳಗಣ್ಣಂ
ತೆರೆಯದಿರ್ದೊಡೆ ಯಾರೇಂಗೆಯ್ಯಲಕ್ಕು? ಮುಂತೆ ನೀನುಂಟು ;
ನಿನ್ನನುಜರುಂಟು, ಗಡ !

ದುಶ್ಶಾಸನಂ–ಪೋಗೆಲವೊ ಕುತಂತ್ರಿ ! ನಿನ್ನೊಳಗೇಂ
ಮಾತೊ? ನಿನ್ನನಿನ್ನೆಬರಂ ನೆಂಟನೆಂದು ಬಿಟ್ಟಿನಲ್ತೆ? ನೀನಿಂ ಜೀವಿ
ಸುವೊಡೆ ಬಾಲಮಂ ಮುದುಡಿ ಮಧುರೆಗೆ ಪಿಂತಿರುಗಲಕ್ಕುಂ. ೩೩೦
ಅಲ್ಲದೊಡೆ ನಿನ್ನಂ ಬಟ್ಟಿಕೈದಿನ ಮಾರೊಡ್ಡಿ ಜವಹುರಮಂ
ಮುಟ್ಟಯಿಸುವೆಂ ! ತಿಳಿದರ್ !

ಇಂತಾಡಿದ ಸೊರ್ಕುರ್ಕುವ ಕೊರ್ವಿನ ನುಡಿಯಂ ಕೇಳ್ದು
ನೊಂದು ಪಾಂಡು ಕುಲಜರ್ ಟೆಬ್ಬರಿಸಿದ ಮನದಿಂ ತಂತಮ್ಮೊಳ್
ತಹತಹಿಸುತುಂ ಮಾರ್ನುಡಿಯಲ್ ಇದು ಪದಮಲ್ತೆಂದು ಸುಡು
ಮುಸಿರಂ ಬಿಗಿವಿಡಿದು ಮಿಣ್ಣನಿರ್ದುದಂ ಕಂಡು ಶ್ರೀಕೃಷ್ಣಂ–ಇಂತಪ್ಪ
ಪೊಲ್ಲಬಗೆಯಿಂದಲ್ತೆ ಎಣೆಯಿಲ್ಲದ ನರಹತ್ಯೆಯಂ ನಡೆಸಿ ಸತ್ಕುಲಮಂ
ಕಿಡುದೆಸೆಗಿಳಿಸಿ ಸೊರ್ಕುಂ ನವೆದು ಸೋರ್ದೊಡಂ ಛಲಮಂ
ಬಿಡದೆ ನರಿಯವೊಲ್ ಊಳಿಟ್ಟು ಮನಶಾಂತಿಯನೀಗಳುಂ ಕಿಡಿಸು
ತಿರ್ಪೆ ಜವಹುರದ ಪಡಿವಳಂ ತಾನಾಗಿ! ಪಂದಿಯಂತು ಬೆಳೆದೊ ೩೪೦

ಡಾಯ್ತು ? ಆಚಾರ ವಿಚಾರಂಗಳೊಳ್ ಬಲ್ಲಿದನಿರವೇಡಾ ? ಚಿ:,
ಸುಡಲಕ್ಕುಂ ನಿನ್ನ ಬಾಳ್ತೆಯಂ !

ದುರ್ಯೋಧನಂ–ಎಲವೊ ವಂಚಕ! ನಿನ್ನಿಂದೆಲ್ಲರ ಬಾಳ್ತೆಗೆಡು
ಗುಂ? ಗೊಂದೆಯಂ ಬೋಳೈಸಿದವೊಲ್ ಪಾಂಡುಕುನ್ನಿಗಳಂ ಬೋ
ಳೈಸಿ ತಾನುಂ ಗೊಂದೆಯಂತು ಬಾಳ್ದು ಹೋರಿಯಂತು ಕೊರ್ವಿ
ಪೊಲ್ಲದ ಕಜ್ಜಮನಲ್ಲದೆ ಇನ್ನೇಂ ಗೆಯ್ವಂ? ಪೊ, ಪೊ ಗೊಲ್ಲ !

ಇಂತಾಡಿದ ಸುಡುವಾತಿನಿಂ ಪಾಂಡು ಕುಲಜರ್ ಮತ್ತಮಾ
ಬೆಂಬಳಿಯ ಆಕೆವಾಳರ್ ತಂತಮ್ಮ ಅಸ್ತ್ರಶಸ್ತ್ರಂಗಳಂ ಬಿಗಿವಿಡಿದು
ಒತ್ತೊಟ್ಟಿಗೆ ಸಾರ್ದು ಬರಸಿಡಿಲ ನಿಡುಗರ್ಜನೆಗೆ ಉರಿದೇಳ್ವ ಸಿಂಗಂ
ಗಳೆನೆ ಕನಲ್ದು ಕೋಪಶಿಖಿಯನೇರ್ದು ಕೆಂಗಲಿಸಿ ತಹತಹಿಸಿ ೩೫೦
ದೊಡಂ ಆಚಾರ್ಯನ ಮನಂಗೆಡಿಸಲಿಚ್ಚಿಸದೆ ಮಿಣ್ಣನೆ ಪಿಂತಿರುಗ
ಲೆಳಸಿ ಕೃಷ್ಣಾರ್ಜುನರ ನಿರೀಕ್ಷೆಯೊಳಿರ್ದರ್.

ಮತ್ತಾಗಳ್ ಭೀಷ್ಮರ್ ಧರೆಗೆ ಕೆಡೆದ ಸುದ್ದಿಯುಂ ಅತ್ತ
ಮಿತ್ತಂ ಕಾಳ್ಕಿಚ್ಚಿನೊಲ್ ಪರ್ವಿ ಇಕ್ಕಡೆಯ ಮೂಲಬಲಂವೆರಸಿ
ನಿಜಬೆಂಬಲಮಿರ್ದ ಜನ ಜಂಗುಳಿಯುಂ ಚಣದೊಳ್ ಬಂದೊದವಿ
ಶರಮಂಚದಪತ್ತೆಸಾರ್ದು ಇಕ್ಕೆಡೆಯೊಳ್ ಬಂದೊತ್ತಿ ನಿಡುಸುಯ್ದು
ಕಂಬನಿಮಿಡಿದು ಪಳಯಿಸಿದರ್ ಮನದೊಳ್.

ಭೀಮಸೇನಂ ಗದೆಯುಂ ಎತ್ತಿ ಪೆಗಲೊಳಿರ್ಕಿ ಜೇವಸದಿಂ ಕಿನಿ
ಸಿಗೆಯಿಂ ಶ್ರೀಕೃಷ್ಣನ ಬಳಿಸಂದು ಮೆಲ್ಮಾತಿನೊಳೆಂಗುಂ–ನಾಮಿ
ನ್ನುಂ ಪೊರಡಲಕ್ಕುಮೆ ? ೩೬೦

ಶ್ರೀಕೃಷ್ಣಂ–ಅವಸರಿಸದಿರ್, ಭೀಮಸೇನ! ಈವೊಳ್ತಿನೊಳ್
ಏನಿದೊರ್ಡಂ ತಾಳ್ಗುಂ !

ಭೀಮಸೇನಂ–ಇನ್ನೇಂ ಇವರೊಳ್ ಮಾತೊ? ನೀಂ ಬಲ್ಲಿದಂ.

ನಿನಗಕ್ಕುಮಿಾಬೆಸನಂ. ನಾಮುಂ ದಿಟ್ಟ ತರುವಲಿಗಳ್ ಇನ್ನಿಲ್ಲಿ ರ್ಪುದು ತರಮಲ್ತು. ಪಿಂತಿರುಗುವುದು ಲೇಸೆಮಗೆ.

ಶ್ರೀಕೃಷ್ಣಂ–ಭೀಮಸೇನ! ಈಗಳ್ ನಿರ್ಲಕ್ಷ್ಯ ಸಲ್ಲದು ಕಣಾ! ನಾಮುಂ ಭೀಷ್ಮರಪ್ಪಣೆಯಂ ಪಡೆದು ಪೊರಡುಲಕ್ಕುಂ.

ಆ ಮಾತಂ ಕೇಳ್ದು ಕನಲ್ದ ದುರ್ಯೋಧನಂ–ಪೋಗು, ಪೋಗೆಲವೊ ಕೂಳ! ಭೀಷ್ಮರಂ ಸದೆದಮೇಲಿನ್ನೇನವರ ಅಪ್ಪಣೆ? ಪಣಕಂ ರಾಜ್ಯಕಂ ಕುಲಕುಲಶಮಂ ಮುರಿದಿಕ್ಕಿ ಪಾಳ್ಗೆಡವಿ ಲಜ್ಜೆ ಯಣಮಿಲ್ಲದೆ ಡಂಬದ ಮಾತಿನ ಗುಡಿಯಂ ಕಟ್ಟುವ ಹೀನ ಮಪ್ಪ ಕಜ್ಜಂ ಸಾಲ್ಗುಂ ! ಪೋ....ಪೋ ! ೩೭೦

ಆಗಳ್ ಶ್ರೀಕೃಷ್ಣಂ ದುರುದುಂಬಿತನದ ರೋಸಗೀಸದ ಕೊರ್ವಿನ ಕಕ್ಕಸದ ನುಡಿಯ ಕೂರಂಬಿಗೆ ಸಿಲ್ಕಿ ಕೋಪಶಿಖಿದಳ್ಳಿಸಿ ಕಿಡಿಕಿಡಿಯಾಗಿ ಕಿನಿಸಿಗೆಯುಂ ಬಾಸಣಿಸಿದೊಡಂ ತನ್ನಂ ತಾನೆ ಬೋಳೈಸಿ ಸಂತೈಸಿ ಭೀಷ್ಮಾಚಾರ್ಯಂಗೆ ತಲೆ ಮಣಿದು ವಿನಯದಿಂ ತೆಂದಂ–ಅಯ್ಯ, ಆಚಾರ್ಯ! ನೀಮಿನ್ನೆಮ್ಮಂ ಮನ್ನಿಸಿ ಪೊರಡ ಲಪ್ಪಣೆಯಂ ನೀಡಿದೊಡೆ ಒಳ್ಳಿತು.

ಭೀಷ್ಮಾಚಾರ್ಯಂ ಮನದೊಳ್ ನೊಂದು ನೋವುಂಡು ಜೇಗುದಿಯೊಳ್ ಬೆಂದು ಗಾರಾಗಿ ಆತುರಕಾತುರದಿ–ಶ್ರೀಕೃಷ್ಣ! ನಿಲ್, ನಿಲ್, ನೀಂ ಕೆರಳದಿರ್. ಸೊರ್ಕುಕ್ಕುವ ತರವಲಿಗಳ ಮುಮ್ಮಾತಿಂಗೆ ಮನ್ನಿಸೆನ್ನಂ ಕೈಮುಗಿದು ಬೇಳ್ಪೆಂ. ನೀಂ ಮನ್ನಿಸದಿರ್ದೊಡಾರ್ ಮನ್ನಿಪರ್ ಆಂಗೆಯ್ದಪರಾಧಮಂ? ಇದೊ, ಸಿಡಿ ಎನ್ನೀನಂಬುಗೆಯ್ಯಂ. ಇದಂ ನಲ್ಮೆಯ ಶಾಂತಿಯಾಮಂತಣ ಮೆಂದು ನಂಬಿಯುಂ ತಾಳಿಯುಂ ಎನ್ನ ಮಾತಂ ಪಾಲಿಪ್ಪೈ. ಇದೆನ್ನ ಕಡೆಯಾಸೆ ಕಾಣ್. ೩೮೦

ಅಂತೆಂದ ಮಾತಂ ಕೇಳ್ದು ಬಲ್ಮೆಯಿಂ ಹಸ್ತಮಂ ಕೈಕೊಂಡು ಶ್ರೀಕೃಷ್ಣಂ ಇಂತೆಂದಂ–ಈಯೊಂದು ಕಿಡುಗಾಲದೊಳ್ ಆನೇಂ ಗೈಯಲಕ್ಕುಂ ಪೇಳ್ ಆಚಾರ್ಯ ?

ಭೀಷ್ಮಾಚಾರ್ಯಂ–ಇನ್ನೆಗಂ ಗೆಯ್ದ ರಕ್ಕಸಗೊಲೆಯುಂ ಸಾಲ್ಗುಂ. ನೀನಿನ್ನುಮೆಂತಾದೊಡಂ ಇರ್ಬ್ಬಣಮಂ ಒಗ್ಗೂಡಿಸಿ ಸಂಧಿಯೇರ್ಪಡಿಸವೇಳ್ಕುಂ. ನಿನ್ನ ನಾಂ ನಂಬಿ ಶಾಂತಿಯಂ ಬಯಸಿರ್ಪೆಂ, ಮುಂಬಯಣದ ಕೈದೀವಿಗೆಯಾಗಿ. ೩೮೦

ದುರ್ಯೋಧನಂ ಕಟ್ಟಚ್ಚರಿಯಿಂ ನೆಟ್ಟ ಕಣ್ಣಾಲಿಯೊಳ್ ಕೆಕ್ಕರಿಸಿ ನೋಡುತುಂ ಪೆರ್ಗಳಿಕೆಯಿಂ ವೈವೆರ್ಚಿ ಕಟ್ಬುರದಿಂ ನಿಟ್ಬುರದಿಂ ಕೇಳಿಸಿದನಿಂತು–ಹಾ, ಇದೇಂ ಅವಜ್ಞೆ, ಮುತ್ತಯ್ಯ ? ಲೋಕದೊಳ್ ಲೋಗರೆಮ್ಮಂ ತೆಗಳರೇಂ ಭೀಷ್ಮಪತನದಿಂ ಸಂಧಿ ಮಂತ್ರಮಂ ಜಪಿಸಿದರೆಂದು? ಇಂತಪ್ಪ ನಾಣ್ಗೇಡಿನಿಂದಂ ಬಟ್ಟೆಗೆಟ್ಟ ಬಾಳ್ತೆವೇಳ್ಕುಮೆ ಕುರುಕುಲಕ್ಕೆ ? ಚಿಃ! ಚಿಃ! ಅಸಾಧ್ಯಂ, ಗಡ ! ಅನರ್ಥಂ ಗಡ ! ೩೯೦

ಈ ಪರಿಯಿಂ ಕಂಚುಮಿಂಚಾಗಿ ನುಡಿದಣ್ಣನ ಮಾತನಾಲಿಸಿ ದುಶ್ಶಾಸನಂ–ಕೇಳ್ ಆರ್ಯ ! ಈಗೇಂ ಸಂಧಿಯ ಮಾತು ? ಇಂತಪ್ಪ ಕರ್ಕರೆಯುರ್ಕಿನ ಕಿಡುಗಾಲದೊಳೆಮಗಕ್ಕುಮೆ ಶಾಂತಿ ಸಂಧಾನಂ? ಸೀಮಿಲ್ಲದೆಮಗೆ ಸಲ್ವುದೇಂ ಪಾಂಡವರ ಸಂಗಂ? ಇಕ್ಕಡೆಯೊಳ್ ಮನಮನಂ ವಿಷದಿಂ ತುಂಬಿರ್ಕುಂ. ಇಂತೀ ಮಾಳ್ಕೆಯೊಳ್ ಶಾಂತಿ ಸಂಧಾನಂಗಳ್ ಸಲ್ವುದೇಂ ಆತ್ಮಸಿಧಿಗೆ ? ಇನ್ನುಮಿನ್ನುಂ ಶಾಂತಿಗೀಂತಿಗಳ್ ವ್ಯರ್ಥಂ. ಈವಗೆಯ ಸೋಲಿಂ ಸಾವೆ ಉತ್ತಮಂ!

ಭೀಷ್ಮಾಚಾರ್ಯಂ–ಚಿಃ! ಇನ್ನುಮಿಂತಾಡೆ ನಿನ್ನೊಳೇಂ ಕೊರ್ವೋ? ಸೊರ್ಕೋ? ಜಂಭಮೊ? ಹಠಮೊ? ಆವಾವ ದುರುದುಂಬಿತನದ ಕಿಲ್ಬಿಷಂ ತುಂಬಿರ್ಕುಂ ? ಹಾ, ಲೋಕದ ಲೋಗರ ರೋಷ ೪೧೦

ತೃಷೆಗಳ್ಗೆ ಎಣೆಯುಂಟೆ? ಇಂತಲ್ಲದಿರ್ದೊಡೆ ಭೂಭಾರಂ ಕಳೆಯಲ ಕ್ಕುಮೆ ? ಪೋ, ಎಲ್ಲಂ ಸೊರ್ಕಿನ ಕೊರ್ವಿನ ರಣಯೋಗಂ !

ದುರ್ಯೋಧನಂ–ಮುಳಿಯದಿರ್ ಮುತ್ತಯ್ಯ! ನಿನ್ನನುಳಿ ದೇಂ ಸಂಧಿ ಪೇಳ್ ?

ಭೀಷ್ಮಾಚಾರ್ಯಂ ನಿಡುಸುಯ್ದು ಕೂರಂಕುಸದಿರಿತಕ್ಕಂ ಮೆಯ್ಯೊಳ್ ನಟ್ಟೊತ್ತಿ ನಾಂಟಿದ ವಿಶಿಖಾವಲಿಯಂ ಮಿಾರ್ದು ಮನವಿರಿವ ಕೂರ್ಮ್ಮೆಳ್ಪಿನೊಂದು ಬೇನೆಗಂ ನೊಂದು ನರಳ್ವ ದನಿ ಯೊಳ್–ಕೇಳ್ ಕೌರವ! ಇನ್ನೆನ್ನಂ ಕೊಂಡೇಂ ಕಜ್ಜಂ? ಈಗಳ್ ಪಾಂಡವರ್........

ಅಂತೆಂಬನಿತರೊಳ್ ದುಶ್ಯಾಸನಂ ಕನಲ್ದು ನುಡಿದನಿಂತು– ೪೨೦ ಮುತ್ತಯ್ಯ ! ಸಾಲ್ಗುಂ. ಇನ್ನುಮಿನ್ನುಂ ಪಾಂಡವರಂ ಕೊಂಡೇಂ ಬಾಳ್ತೆ ಬಿಡು, ಬಿಡು ! ನಿನ್ನಂ ಪಿರಿಯನೆಂಬಳ್ಕರೆಯಿಲ್ಲದೆ ಸದೆದು ಶರಮಂಚದೊಳ್ ಕೆಡಗಿ ಸೈಪಿಗೆಡರ್ ತಂದ ಕೂಳರೊಳ್ ಸಂಧಿ ವಿಚಾರಮೆ ? ಇದು ನಗೆಗೇಡಲ್ತೆ ?

ಭೀಷ್ಮಾಚಾರ್ಯಂ–ಕೇಳ್ ! ಕೊಳಗುಳದೊಳ್ ಪಿರಿಯ ರೇಂ? ಕಿರಿಯರೇಂ ? ಎದುರ್ಚಿದರಂ ಕೊಚ್ಚಿ ತುಂಡರಿಪುದೆ ರಣ ಧರ್ಮಂ! ಕ್ಷಾತ್ರಧರ್ಮಂ! ಇದನರಿತುಂ ನೀಮೆಲ್ಲರುಂ ಕೂಡಿ ಸೊಗ ದೊಳಿರ್ಪುದೊಳ್ಳಿತೆಂಬುದೆನ್ನ ಬಯಕೆಯಿರ್ಕುಂ; ಪರಕೆಯಿರ್ಕುಂ!

ದುಶ್ಯಾಸನಂ–ಕ್ಷಾತ್ರಧರ್ಮದೊಳ್ ಇದಿರ್ಚಿದೊಡೆ ಮತ್ತೇಂ ದುಕ್ಕಂ ? ಕೊನೆಯುಸಿರ್ ಇರ್ಪನ್ನೆಗಂ ಎದರ್ಚಿದರಂ ಇದಿರ್ಚು ೪೩೦ ವುದೆ ಧರ್ಮಕರ್ಮಂ ಎಂಬುದೆನ್ನ ಅಭಿಮತಂ.

ಭೀಷ್ಮಾಚಾರ್ಯಂ–ಕೇಳ್ ವತ್ಸ ! ಈ ಪುಡುಗುಂ ತುಡು ಗುಂ ಕಿಡಿಪುಗುಂ ಬಾಳ್ವೆಯಂ.

ದುಶ್ಶಾಸನಂ—ಆರ್ಯ! ಬೇರೆ ಏಂ ಪೇಳ್ದೊಡಂ ಕೇಳ್ವೆಂ, ಸಂಧಿ ಸಂಧಾನಂಗಳ ಸೊಲ್ಲುಂ ಬಿಟ್ಟು.

ಆಚಾರ್ಯಂಗೆ ಈವೊಂದು ಬಿಂಕದ ಚಲದ ಮಾಳ್ಕೆಯುಂ ಮುಮ್ಮಾತಿನ ಮುಳ್ಳುಗೊಳ್ಕೆಯಿಂ ಚುಚ್ಚಿ ಎಳೆದಂತೆ ಮನಂಗಿಡಿ ಸಲ್ ನೊಂದು ನವೆದು ನೋವುಂಡು ಸೋಲ್ದು ಬಳಲ್ದು ಜವನ ಜಂಗುಳಿಯ ಶೂಲದ ಪಾಶದ ನೇಣಿನ ಕವೆಗೋಲ ಇರ್ಕುಳಿಯೊಳ್ ಸಿಲ್ಕಿದಂತೆ ಉಸಿರೆಳೆದುಂ ದುರ್ಯೋಧನನಿಂತೆಂದಂ—ಲಾಲಿಸೈ, ೪೪೦ ಕೌರವ! ಇನ್ನೆಗಂ ನಿಮ್ಮನಿಮ್ಮೊಳಗಾದ ಕಷ್ಟನಷ್ಟಮಂ ಕಾಣ್ಬ ಕಣ್ಣಿರ್ದು ಕುರುಡಾದುದರ ಫಲಮಲ್ತೆ ಎನ್ನೀಪತನಂ? ಆಂ ಕುರುಡಾದೊಡಂ ಜವಂ ಕುರುಡಿರಿಲಕ್ಕುಮೆ? ಅವನಿಚ್ಚೆ ಪಚ್ಚೆಯಾಯ್ತು ಬಿಡು ; ಇನ್ನಾದೊಡಂ ಧರ್ಮಕರ್ಮಮಂ ತಳ್ಕೈಸಿ, ಕುಲಜರಂ ಬೋಳೈಸಿ ಬಾಳ್ವುದುಂ. ಅಲ್ಲದೊಡಂ ಕಾರ್ಗಾಲದ ಬರಸಿಡಿಲಿಂಗೆ ತಲೆಗುಡಲಕ್ಕುಂ. ಎಚ್ಚರಿರು ಕಂದ! ಅರುಮಿಲ್ಲಿ ಸ್ಥಿರಮಿಲ್ಲ ಮೆಂಬುದಂ ಮನದರಿಕೆಯೊಳಿಕ್ಕಿ ದುರಾಸೆಯಂ ಬಿಟ್ಟು ಬಾಳ್.

ದುರ್ಯೋಧನಂ ಮುತ್ತಯ್ಯನ ಮಾತಿನಿಂ ಮುಂಬಟ್ಟೆಯಂ ಕುರಿತು ತನ್ನೊಳ್ ಯೋಚಿಸುತುಂ ಭಾವಿಸುತುಂ ತುಸುವೊಳ್ತು ಮಿಣ್ಣನಿದ್ದು ಮತ್ತಿಂತೆಂಗುಂ—ಆರ್ಯ! ಕೈಮುಗಿದು ಬೇಳ್ಪೆಂ. ೪೫೦ ಮುಳಿಯದಿರ್. ಬಿದಿಯಾಟಂ ಇಂತಿರಲ್ ಗೆಯ್ವುದೇಂ? ಇನ್ನೆಗಂ ಮುಂದಿಟ್ಟ ಪಜ್ಜೆಯಂ ಕೀಳ್ಪಮಾನಮೇಕೆ ? ನೀಂ ಯೋಚಿಸಿ ನೋಡೈ ಮುತ್ತಯ್ಯ !

ಭೀಷ್ಮಾಚಾರ್ಯಂ—ಕೌರವ, ಅಗ್ಗಿಯಿಲ್ಲದೆ ಪೊಗೆಯಾಡಲಕ್ಕುಮೆ ? ದ್ವೇಷಮಿಲ್ಲದೆ ಜುದ್ದಂ ಪುಟ್ಟುಗುಮೆ ? ಎಲ್ಲಕ್ಕುಂ ಕತಮಿರ್ಕುಮೆಂಬುದಂ ನೀನರಿಯದಿರ್ದುದರಿಂದಲ್ತೆ ಕಷ್ಟನಷ್ಟಂ ?

ದುರ್ಯೋಧನಂ—ಹಾ, ನಿಮ್ಮ ರಣದೇವಿಗೆ ಬಲಿಗೊಟ್ಟು ಕೀಳರೊಡಂ ಕೆಳೆಗಾಸೆಬಡುವುದೇಂ ಸೊಗಂ ? ನಿಮ್ಮ ಬಟ್ಟೆಯೊಳಿ

ಪಜ್ಜೆಯಿಕ್ಕಿ ರಣದೇವಿಗೆನ್ನ ರುಂಡಮಂ ಬಲಿಗೊಟ್ಟು ನಿಮ್ಮೊಡಂ
ಸಗ್ಗ ಸೇರ್ವುದೆ ಲೇಸು! ನೀಮುಂ ಚಿಂತೆಯಂ ಬಿಟ್ಟು ನಿಚ್ಚಟದಿಂ ೪೬೦
ಕೆಮ್ಮನೆ ವಿಶ್ರಮಿಸಿಂ.

ಭೀಷ್ಮಾಚಾರ್ಯರ್ಗಂ ಹಾಯೆಂದು ನಿಡುಸುಯ್ದು ತನ್ನೊಳ್
ತಾಂ ಪಳಯಿಸುತುಂ—ಈದೆಸೆಗೆಟ್ಟ ನಾಡಿಂಗೆ ಮುಂದೇಂ ಬಟ್ಟೆಯೊ?
ಗತಿಯೇವುದೊ ? ಪನ್ನತಿಕೆಯೇವುದೊ ? ಪಾಡೇವುದೊ ? ಇಂತು
ನಾಡಗುಡಿಯಂ ಕಟ್ಟಿ ಕೈಯಾರೆ ಪಾಳ್ಗೆಡಿಪುದು ನಾಡಿನ ದುರ
ದೃಷ್ಟಮಲ್ತೆ ?

ದುಶ್ಶಾಸನಂ—ಆರ್ಯ! ಇಂತೇಂ ಮನದೊಳ್ ದುಕ್ಕದುಗು
ಡಗಳ ಕಾವಳಂ? ಮುಂತೆ ಏನಾದೊಡಂ, ಏಂ ಒದವಿದೊಡಂ ಆಂ
ತಲೆಗುಡುವೆಂ. ನಾಡಿನ ಪಾಡು ನಾಡೊಡೆಯರ್ಗಕ್ಕುಂ.

ಭೀಷ್ಮಾಚಾರ್ಯರ್ಗಂ-ಇಂ ಪೇಳಲೇನಿರ್ಕುಂ ? ನೀಂ ಕಲಿ ಕಣಾ! ೪೭೦

ಆ ಬಳಿಕ್ಕಂ ಶ್ರೀಕೃಷ್ಣಂ ಆಚಾರ್ಯರನ ಪಣೆಯಂ ನಲ್ಮೆಯಿಂ
ತೀವಿ ಮೈಯ್ಯಂ ನಿಳುಪಿ ತಳ್ಕೈಸುತಂ—ಆಚಾರ್ಯ! ಈಯೊಂದು
ಮಂ ಮನದೊಳಿಡದೆ ವಿಶ್ರಮಿಸಿಂ. ಒಳಿತು ಕೆಡುಕುಗಳ್ ಪೂಣೆ
ಯಂ ಪೊತ್ತವರ್ಗಕ್ಕುಂ. ನೀಂ ಚಿಂತಿಸದೆ ನೋಯದೆ ಬೇಯದೆ
ಎಮಗಪ್ಪಣೆಯಂ ನೀಡಿಮೆಂದು ಕೋರುವೆಂ.

ಭೀಷ್ಮಾಚಾರ್ಯರ್ಗಂ—ಶ್ರೀಕೃಷ್ಣಾ ! ದೇವ ಪುರುಷಂಗೆ ಆನೇಂ
ವೇಳ್ವೆಂ ?

ಪಾಂಡು ಕುಲಜರ್ ಪಡಿಮೊಗದಿಂ ಭೀಷ್ಮರ ಬಳಿಗೆಯ್ತಂದು
ಭಕ್ತಿಯಿಂದಡಿಗೆರಗಿ ಅಪ್ಪಣೆಯಂ ಪಡೆದು ಶ್ರೀಕೃಷ್ಣನೊಡನಲ್ಲಿಂದೆ
ಲ್ಲಾರವೊಟ್ಟರ್ ತಮ್ಮ ಬೀಡಿಂಗೆ. ೦೮೦

# ಅಷ್ಟಮಾಶ್ವಾಸಂ

ಪಡುವಣ ನಭೋಭಿತ್ತಿಯೊಳ್ ಇಳಿನೇಸರ್ ಓಕುಳಿಯಾಡಿ ಪೆಂಪೊತ್ತಿ ತಳತ್ತಳಿಸಿ ಕೆಂಕವಾಗೆಸೆದಂ. ಬಿತ್ತರದ ಭಿತ್ತಿಯುಂ ಸುಟ್ಟುರಿದು ಪೋಪವೊಲ್ ಒಯ್ಯೊಯ್ಯನೆ ಪೊಳ್ತು ಮುಗಿಬಗಿಯಾಗೆ ಬೈಗಿನ ತಣ್ಪಡರ್ದು ಕರ್ಪುಗುವ ಇರುಳ್ಗಪ್ಪಿನ ನವಿರ್ದೆರೆಯುಂ ಮುಸುಂಕಿದುದಿಳೆಯಂ.

ದುರ್ಯೋಧನಂ ಒಡಹುಟ್ಟುಗಳ್ ಮೇಣ್ ಶಕುನಿ ಕೃಪ ಮುಂತಪ್ಪ ನೆರಂಗೊಡುವ ಗೆಣೆಯರೊಡಂ ಚಿಂತಿಸಿ ಮಂತ್ರಾಲೋಚನೆಗೈದ ಬಳಿಕ್ಕಂ ಭೀಷ್ಮರ ಪತ್ತೆಸಾರ್ದು ಕೇಳ್ದನಿಂತು–ಆರ್ಯ! ಇನ್ನೆಮಗೆ ಮುಂತೇಂ ಬಟ್ಟೆ? ಆರೆಮಗೆ ದಳಪತಿಯಕ್ಕುಂ? ಆರ್ ಪುರುಡಿಂ ಮುಂಬಟ್ಟೆಯಂ ತೋರ್ಪರ್ ? ಇಂತಿದಂ ಮನಂಗೊಂಡು ನಿಮ್ಮಪ್ಪಣೆಯಂ ತಿಳಿಪುದು. ೧೦

ಭೀಷ್ಮಾಚಾರ್ಯರ್ಂ–ಕೇಳ್ ವತ್ಸ! ನಿರ್ನೆರಂ ಕಾಡಾನೆಯುಂ ಇದಿರ್ಚುವ ನಾಡ ಕುನ್ನಿಯಂತಾಯ್ತೆಮ್ಮ ಕೊಳಗುಳದ ಕಜ್ಜಂ. ಇಹಕಂ ಪರಕಂ ಬೆನ್ನಾಗಿ ಅಂಕೆ ಶಂಕೆಯಿಲ್ಲದೆ ಮುನ್ನುಗ್ಗಿ ಪೊಡರ್ಪಿನಿಂ ರಾಜ್ಯಗಳಿಪಿದೊಡೇಂ ಫಲಂ ?

ದುರ್ಯೋಧನ–ಆ ಚಿಂತೆ ಮಾಣ್. ಇದಂ ಸಂಧಿಗಾಲಂ !

ಭೀಷ್ಮಾಚಾರ್ಯರ್ಂ–ಇರ್ಕೆ, ಮುಂದಿಟ್ಟ ಪಜ್ಜೆಯಂ ಪಿಂತೆಗೆಕ್ಕ ಲಾಗದೆಂಬೊಂದು ಕಠಂ ಮನದೊಳಿಕ್ಕಿದೊಡೆ ಸಾಟಿಯಿಂ ನೂಟ

ಯಿಂ ಪಾಟಿಯಿಂ ನಾಯದಿಂ ಸಾಸಂಬಡವೇಳ್ಕುಂ ಕಿಡುಗಾಳಿಯಂ ವಿಾರ್ದು. ಪೊಸ ಪುರುಷಿಂ ಪೆರ್ಕಳಿಸಿ ರಣರಂಗಮಂ ಪುಗುವ ದಳವಾಯಿರ್ಕುಂ. ಅಲ್ಲದೊಡಂ ಪಡೆಯುಂ ದಿಟ್ಟತನದಿಂ ಮುನ್ನ ಡರ್ಚೆ ಸಾಮರ್ಥ್ಯರಿಂದಾಗದೈ. ೨೦

ದುರ್ಯೋಧನಂ–ಈಗಳ್, ನಿಮ್ಮಪ್ಪಣೆಯೇಂ ಆರ್ಯ, ದಳ ಪತಿಯಪ್ಪೊಡೆ ಆರ್ ಸರಿಯುಕ್ಕುಂ ?

ಭೀಷ್ಮಾಚಾರ್ಯಂ–ಈಗಳ್ ದ್ರೋಣಾಚಾರ್ಯಂ ತಕ್ಕಂ ದಳಪತಿಯಕ್ಕೆ.

ದುರ್ಯೋಧನಂ–ಅಪ್ಪುದಪ್ಪುದು. ಆಚಾರ್ಯರಂ ವಿಾರ್ವ ರಿನ್ನಿಲ್ಲಂ. ನಿಮ್ಮಿಚ್ಛೆಯೆ ನನ್ನಿಚ್ಛೆ. ಅನುಮಾಗಳ್ ದ್ರೋಣಾ ಚಾರ್ಯಂಗೆ ನಿಮ್ಮಿಚ್ಛೆಯನೊರೆದು ಬೇಡಿಕೊಂಬೆಂ.

ಭೀಷ್ಮಾಚಾರ್ಯಂ–ಅಕ್ಕೆ. ಪೋಗಿ ಬಾಳ್ಕೆ. ನಿನಗಂ ಶುಭ ಮಕ್ಕೆ ! ೩೦

ಕುರುರಾಯಂ ಭೀಷ್ಮಂಗೆರಗಿ ದುಃಶ್ಯಾಸನನೊಡಂ ಅಲ್ಲಿಂದ ಪೊರಮಟ್ಟು ರಣರಂಗಮಂ ದಾಂಟಿ, ತೆಂಕಣದ ಪರಿಸರಮಂ ಪಾಯ್ದು ಮುಂಬರೆ ಬಡಗಣದಿಸೆಯೊಳ್ ಕಂಡನಾ ದ್ರೋಣಾ ಚಾರ್ಯನಂ. ಅಹ, ಏವೇಳ್ವೆನೊ ಆಚಾರ್ಯನ ಶೌರ್ಯಾಟೋ ಪಮಂ? ಅರಿರಾಯರಂ ಎದುರ್ಚೆ ಕಟ್ಟುರಬ ನಿಟ್ಟುರದ ಕಾಯ್ಪಿನಿಂ ಕಾದಾಡಿ ಕೈಗೆಟುಕಿದರಂ ಸದೆ ಬಡಿದು ಕೆನ್ನೀರಂ ಚೆಲ್ಲಿ, ಜಂಕಣೆ ಯಿಂ ಜರ್ವಿ, ಗಂಡಗರ್ವದಿಂ ಹೂಂಕರಿಸಿ, ತರುವಲಿಯಂ ವಿಾರ್ದು ಗೆಲ್ದು ಗೆಲ್ಮೆಯ ಪುರುಷಿನಿಂ ಪಿಂತಿರುಗುವನಿತರೊಳ್ ದುಶ್ಶಾಸನ ಕೌರವರಂ ಕಂಡು ಬೆಕ್ಕಸ ಬೆರಗಾಗಿ–ಏನೈ ಕೌರವ ! ಎಂದಂ ಆತುರ ಕಾತರದಿಂ. ೪೦

ಆಗಳೀರ್ವರುಂ ಕೊರಳ್ ಬಿಗಿದವೊಲ್ ಮಾತು ಪೊರಡದೆ ಮೈಮರವಟ್ಟು ಪಡಿಮೊಗದಿಂ ನಿಂದಿರಲ್, ಬೀರಸಿರಿಯೆಲ್ಲಂ ಅಳಿದು ಕೆಚ್ಚು ಕುಸಿದು ಬಣ್ಣಂಗೆಟ್ಟು ತಳ್ಳಂಕದಿಂ ತಹತಹಿಪಂತೆ ಮೌನಮಾಂತ ಕುರುಕುಮಾರಕರಂ ನೋಡುತ್ತೆ, ದ್ರೋಣಾಚಾರ್ಯಂ ಕಟ್ಟಚ್ಚರಿಯಿಂ ತೇರಿಂದಿಳಿತಂದು ನಿಶಾಟನುಬ್ಬಿನ ಕೆಚ್ಚುಂ ಒರ್ವಗೆ ಸೋರ್ದವೊಲ್ ಸೊಮ್ಮಳಿದು ಚೆಚ್ಚರದಿಂ ಕೇಳಿಸಿದಂ-ಇದೇಂ ಮೊಗಂ ಕಳೆಗೆಟ್ಟರ್ಕುಂ ಕುರುರಾಯ ? ಏಂ ತಳಮಳಂ ? ಏಂ ನಿಜಬಾರ್ತೆ ?

ದುರ್ಯೋಧನಂ-ಆಚಾರ್ಯ! ಕೆಟ್ಟೆಂ, ಕೆಟ್ಟೆಂ. ಹಾ, ಎಂತಿ ೫೦ ದನೆನ್ನ ಬಾಯೊಳ್ ಬೆಸಗೊಳ್ವೆಂ, ಮಾರಾಂತು ಕೊರಳ್ಗಿತ್ತ ಕೂರ ಕಡಿಗತ್ತಿಯುಲುಗಿನ ವಿಚಾರಂ.

ದ್ರೋಣಾಚಾರ್ಯಂ-ಏಂ....ಏನಾಯ್ತು ? ಏಂ ಕಳವಳಂ? ಏಂ ಬೆಸನಂ ?

ದುಶ್ಶಾಸನಂ-ಕೃಷ್ಣಾರ್ಜುನರಿಂ ಕುತ್ತೊದವಿದುದು ಮುತ್ತಯ್ಯನ ಪ್ರಾಣಕ್ಕೆ.

ದ್ರೋಣಾಚಾರ್ಯಂ-ಹಾ, ಕುತ್ತೊದವಿತೇಂ ಭೀಷ್ಮಾಚಾರ್ಯಂಗೆ.

ದುರ್ಯೋಧನಂ-ಇಂದೆಮ್ಮ ಕುಲಕಿರೀಟಂ ಕಳಚಿ ಬಿಳ್ದುದು ಆಚಾರ್ಯ! ಭೀಷ್ಮರ್ ಶರಮಂಚಮನೇರ್ದು ಪ್ರಾಣಸಂಕಟಂಬಡುತಿರ್ಪರ್ ! ಕಿಡುಗಾಲದ ಕಳ್ತಲುಂ ಕಾವಳಿಸಿದುದೆಮ್ಮ ಜಾನಂ ಬಲಕೆ. ೬೦

ದುಶ್ಶಾಸನಂ-ಮುಂತೇಂ ಬಟ್ಟೆಯೊ ಆಚಾರ್ಯ ?

ದ್ರೋಣಾಚಾರ್ಯಂ–ಹಾ, ಕುಲ ಕಲ್ಪವೃಕ್ಷಂ ಕೆಡೆದುದೆ ಭುವಿಗೆ ? ಏಂ ಪ್ರಮಾದಂ ?

ದುರ್ಯೋಧನಂ–ಆಚಾರ್ಯ! ನಿಮ್ಮನೀಗಳೆ ಕಾಂಬ ವಿಚಾರದೊಳಿರ್ಪರ್ ಭೀಷ್ಮರ್.

ದ್ರೋಣಾಚಾರ್ಯಂ–ನಡೆ, ನಡೆ. ಬಂದಪೆಂ, ಅನವರಂ ನೋಡಲಕ್ಕುಂ.

ದುರ್ಯೋಧನಂ-ಆಯ್ತು, ಆಚಾರ್ಯ! ನಾವಿಲ್ಲದ ಪೊಳ್ತಿನೊಳ್ ರಣರಂಗಕೆಯ್ದು ಕೃಷ್ಣಾರ್ಜುನರ್ ಮಾರಾಂತು ಸದೆದಿರ್ಪರ್. ೬೦

ದುಶ್ಶಾಸನಂ–ಈಯೊಂದು ಗಂಡದಿಂ ಮುಂಬಟ್ಟೆಗೆಟ್ಟುದಾಯ್ತು ಆಚಾರ್ಯ !

ತರುವಾಯೊಳ್ ಮೂವರುಂ ತೇರನೇರ್ದು ಪೊರಡಲೊಡಂ ತೇಜಿಗಳ್ ಮುಂಬಟ್ಟೆಯೊಳ್ ಪುಟಪುಟದು ಬಂಡೆಳ್ದು ಪೊಯ್ಯು ಬಡಿತದ ವೇಗದೊಳ್ ಮುನ್ನುಗ್ಗುತ್ತಿರೆ ಅತ್ತಲಿತ್ತಂ ಪರ್ವಿದ ದುರ್ವಾರ್ತೆಯಂ ಕೇಳ್ದು ನಾಡಿನ ಜನಜಂಗುಳಿಯುಂ ಗಾರೆದ್ದು ಓಡೋಡಿ ಬರುತಿರ್ದುದು ಓಟದ ಪುಂಡೊ ಎನಲ್ಕೆ ತೇರ್ಗಾಲಿಯ ಪಥಮಂ ಪಿಡಿದು. ಇಕ್ಕೆಲದೊಳೆತ್ತೆತ್ತಲುಂ ಕಡಿಖಂಡದ ರುಂಡದ ಮುಂಡದ ಬಣಂಬೆಯುಂ ಕಣ್ಗೆ ಸೆದುದು ಬಿಸಿನೆತ್ತರಂ ಮಮ್ಮಳಿಪಂತೆ; ಪರ್ದುಕಾಗೆಗಳ್ ಸುಳಿಸುತ್ತಿ ಹಾರಾಡಿ ಮಿಣ್ಣನಿಳಿತಂದು ಕಡಿಯೆಲ್ಗಳೊಗ್ಗರಂ ಕುಕ್ಕಿಕುಕ್ಕಿ ದಂಡೆಗರುಳಂ ಮಾಂಸಖಂಡಮಂ ಕಿತ್ತು ಪೊಸಬಸೆಯಂ ಬಾರ್ದು ಬಿರ್ದುಂಡು ಸಂತಸದ ಕೊರಳ್ದನಿಯಂ ಪರಿಸಿ ಬಂಧುವಳಗಮಂ ಕರೆಕರೆದು ಅತ್ತಿತ್ತಂ ಪಾರ್ದು ಎಲ್ಲೆಲ್ಲಿ ಆವುದಾವುದುತ್ತಮಮೆಂದು ರುಚಿಗಿಚಿಯ ಸವಿಯೊಳಿರ್ದುವು ತಮ್ಮಿರವಂ ಮರೆತು. ಮತ್ತಂ ಮತ್ತಂ ಅಲ್ಲಲ್ಲಿ ಇನ್ನುಂ ಪ್ರಾಣಸಂಕಟಪಡುತ್ತೆ ಕಣ್ಮಲೆದು ಕೆನ್ನೆತ್ತರಂ ಕಾರುತುಂ ಕೆಮ್ಮನೆ ಮಣ್ಣೊಳ್ ೭೦

ಪೊರಳುತಿರ್ದುವೆನಿತೊ ಬಾಳ್ದಲೆಯುಂ ಪಗಲುಮಿರುಳೆನ್ನದೆ ಊಳ್ವ
ಬೊಗಳ್ವ ಕಕ್ಕಸವಗೆಯ ನರಿನಾಯ್ಗಳ್ ತಂತಮ್ಮ ಸ್ವತ್ತೆನಲ್ಕೆ
ಎಡೆವಿಡದೆ ಕಾದಿರ್ದುವು ಬಿರ್ದುಂಡು ಭಾರಭಾರಮಪ್ಪ ಒಡಲಂ ೯೦
ಪೊತ್ತು. ಇಂತಾಕೆವಾಳರ ಸೊರ್ಕುಂ ಸೋರ್ದು ಚೆಲ್ಲೀಡಾಡಿರಲ್
ತೇರುಂ ದೆಸೆಯಿಂದೆಸೆಗೆ ಸಾರ್ದದು ಭೀಷ್ಮಾಚಾರ್ಯರ್ ಕೆಡೆದ
ದಿಕ್ಕಂ ಪಿಡಿದು. ದ್ರೋಣಾಚಾರ್ಯಂ ತೇರಿಂನೆಗೆದಿಳಿತಂದು ಚೆಚ್ಚ
ರದಿಂ ಶರಮಂಚದ ಪತ್ತೆಸಾರ್ದು ಭೀಷ್ಮರಂ ಕಣ್ಣಾರೆ ಕಂಡು ಸಂಕ
ಟಂ ಬಟ್ಟು ಕಣ್ಣೊಳ್ ಕಂಬನಿಯ ಕರೆಯುತುಂ ತಲೆಯಂ ನೀವಿ
ಮೆಯ್ಯಂ ನಿಳುಪಿ ಪಣೆಯೊಳ್ ಕೈಯಿಕ್ಕಿ–ಆಚಾರ್ಯ! ನಿಮಗಿಂ
ತೇಂ ಬಂದೊದವಿದುದು ಯಮಗಂಡಂ! ಇದೆಂದುಂ ಸೊರ್ಕುಕ್ಕುವ
ಜವ್ವನಿಗರ್ಗಲ್ಲದೆ ನಿಮಗಳವಲ್ಲಂ. ಅಕ್ಕಟಾ ! ಎಂತು ನೋಳ್ಪೆಂ ?

ಭೀಷ್ಮಾಚಾರ್ಯಂ–ಕೇಳ್, ಆಚಾರ್ಯ ! ಇನ್ನುಮಿನ್ನುಂ
ಇಂತೀ ಬೆಸನಕ್ಕೆ ಪೊಳ್ತಿಲ್ಲಂ. ಈಯೊಂದು ಮಾಳ್ಕೆಯಿಂ ಬಗೆಗೆಟ್ಟು ೧೦೦
ಬಟ್ಟೆದರ್ಪಿದರ್ಗೆ ನೀಂ ತೋರ್ಪುದು ಮುಂಬಟ್ಟೆಯಂ.

ದ್ರೋಣಾಚಾರ್ಯಂ–ಆನೇಂಗೆಯ್ಯಲಕ್ಕುಂ, ಅಪ್ಪಣೆಯೀವುದು.

ಭೀಷ್ಮಾಚಾರ್ಯಂ–ಕೇಳ್, ಇನ್ನಾದೊಡಂ ಸಂಧಿಸಂಧಾನ
ಗಳಿಂ ಇಬ್ಬಣದೊಳ್ ಶಾಂತಿಯುಂ ಪ್ರೀತಿಯುಂ ತರ್ಪುದೆನ್ನ ಇಚ್ಛೆ
ಯಣಮಿನ್ನುಂ ಕುಗ್ಗಿಲ್ಲಂ. ಆದೊಡಂ ಕೇಳ್ವರಾರ್? ಜುದ್ದಂ
ಮುಗಿಬಗಿಯಾಗಿ ಇಬ್ಬಣಂ ಒಗ್ಗೂಡಿ ಅಳ್ಕರೆಯಿಂ ಬಾಳ್ದರಾದೊಡೆ
ನಾಡಿನೇಳ್ಗೆಯುಕ್ಕುಂ. ಅಂತೆನೆ ಈ ತರುವಲಿಗಳುಂ ಮಣಿಯ
ರೆಂಬುದೊರ್ ವ್ಯಸನಮಿರ್ಕುಂ. ಈಗಿನ್ನೇಂಗೆಯ್ಯಲಕ್ಕುಂ ಪೇಳ್
ಆಚಾರ್ಯ ?

ದ್ರೋಣಾಚಾರ್ಯ–ಇಂದಿನೀ ವಿಸಸನದೊಳರಿಯ ಪಗೆಗೆಚ್ಚು
ಕಾಳ್ಕಿಚ್ಚಿನೊಲ್ ಪರ್ವಿ ಜತ್ತುಕದ ನಿಶಾಟನುರ್ಬಿನ ಜುದ್ದಂ ದಗ

ದಗಿಸಿರಲೆಲ್ಲಿಡೆಯುಂ ಸಂಧಿಸಂಧಾನಂಗಳ ಮಾತುಂ ಕೆಲಚಕ್ಕು ಮೆ? ಇದಂ ಕಡು ಕಷ್ಟಂ.

ಭೀಷ್ಮಾಚಾರ್ಯಂ—ಮತ್ತೀಗಳ್ ಎಂತಿದರ ಪರಿಹಾರಂ ?

ದ್ರೋಣಾಚಾರ್ಯಂ—ಇಂ ಮಾತೇಂ? ಸುತ್ತೇಂ? ಕೊನೆವರಂ ಎರ್ದೆಗೆಡದೆ ಖಲನಕುಲಂ ಪೊಳಕುಪೆಳಕಪ್ಪಿನೆಗಂ ಕಾದಿ ಮೋದಿ ಗೆಲ್ವೊಂದು ಚಲದೊಳ್ ಮುನ್ನುಗ್ಗದೆ ಬೇರೆದಾರಿಯಿಲ್ಲಂ.

ಭೀಷ್ಮಾಚಾರ್ಯಂ—ನೀಂ ಅಂತೆಂಬೊಡೆ ಇನ್ನೇಂವೇಳಲಕ್ಕುಂ?

ದ್ರೋಣಾಚಾರ್ಯಂ—ಮನ್ನಿಸಿ ಆಚಾರ್ಯ ! ೧೨೦

ಭೀಷ್ಮಾಚಾರ್ಯಂ ನಿಡುಸುಯ್ದು—ಇಂದಿನಿಂ ನೀಂ ಮುಂಬಟ್ಟೆಯಂ ತೋರಲಕ್ಕುಂ.

ದ್ರೋಣಾಚಾರ್ಯಂ—ಅಪ್ಪಣೆ.

ಭೀಷ್ಮಾಚಾರ್ಯಂ—ನೀನಿಂದಿನಿಂ ದಳಪತಿಯುಪ್ಪಯ್, ಅಲ್ಲದೊಡೆ ಆಗದುವಾಗದು.

ದ್ರೋಣಾಚಾರ್ಯಂ ಆ ಮಾತಿಂಗೆ ಎದುರೊಡ್ಡದೆ ತಲೆಮಣಿದು ಭಕ್ತಿಭಾವದೊಳ್ ಇಂತೆಂಗುಂ—ಅಕ್ಕೆ, ಆಚಾರ್ಯ ! ನಿಮ್ಮಪ್ಪಣೆಯಂ ಶಿರಸಾ ನಿರ್ವಹಿಸುವೆಂ.

ಭೀಷ್ಮಾಚಾರ್ಯಂ—ನಿನಗಂ ಒಳ್ಳಿತಕ್ಕೆ, ಶುಭಮಕ್ಕೆ !

ದುರ್ಯೋಧನಂ—ಮನ್ನಿಸಿಂ ಮುತ್ತಯ್ಯ. ೧೩೦

ಭೀಷ್ಮಾಚಾರ್ಯಂ—ಕಟ್ಟಳವಿಯೊಳ್ ಎರ್ದೆಗುಂದದಿರ್, ನಿನಗಂ ಒಳಿತಕ್ಕೆ !

ದುಶ್ಯಾಸನಂ—ಮಣಿವೆಂ ಮುತ್ತಯ್ಯ.

ಭೀಮಸೇನಂ–ನಲ್ಲೆ ಸಂಕೆಯುಂ ಬಿಡು. ಅದೆಂದಿರ್ದೊಡಂ ಎನಗಕ್ಕುಂ. ಪಗೆಯ ಪೊಲ್ಲಾಟಂ ಅವನೊಡಲ್ಲದೆಮ್ಮ ಕುಲದೈವ ದೊಳಿರಲಕ್ಕುಮೆ? ತಿಳಿದಿರ್ ಎಂದುಮೆಂದುಂ ಆನೆ ಜವಂ ಅವಂಗೆ! ೩೨೦

ದ್ರೌಪದಿ–ರಮಣ ! ನಿನ್ನ ಪೂಣ್ಕೆಯೆ ಪೂಣ್ಕೆ !

ಭೀಮಸೇನಂ–ರಮಣಿ! ನಿನ್ನ ಮಾತಿಂ ಆಕರಿಸಿತೆನ್ನ ಜಿಹ್ವೆ ಯಾತನ ಬಿಸಿನೆತ್ತರಂ ಬಯಸಿ. ಎನ್ನೀಗದೆಯಿಂ ಬಡಿದಪ್ಪಳಿಸಿ ದಿಂಡುರುಳ್ಚಿ ಎರ್ದೆಗುಂಡಿಗೆಯಂ ಬಗೆದು, ಮಿಳ್ತುಂಗೆ ನೆತ್ತರ್ ತರ್ಪಣಮಂ ಬಿಟ್ಟು ಬೊಗಸೆ ದುಂಬಿ ಗದಗದನೆ ಕುಡಿದು ನಿನ್ನ ನಿಡುಗೂದಲಂ ಆನೆ ನೆತ್ತರ ಲೆಪ್ಪದಿಂ ಬಾಚಿ ಮುಡಿಗಟ್ಟುವೆಂ, ಚಿಂತಿಸದಿರ್.

ದ್ರೌಪದಿ–ಅನ್ನೆಗಮೆನ್ನ ಬರ್ದುಕುಂ ಸಾರ್ಥಕಂ ರಮಣ !

ಭೀಮಸೇನಂ–ಈಯೊಂದು ಪೂಣ್ಕೆಯಿಂ ಬಲವೆರ್ಚಿ ಮೈ ವೆರ್ಚಿ ಸಾರ್ದುದೆನ್ನ ದಿನಂಗಳ್ ಸರಾಗದಿಂ. ಇನ್ನುಮಿನ್ನುಂ ೩೩೦ ನಿಜಗಳಿಗೆಯುಂ ಕೂಡಿ ಬರಲಕ್ಕುಂ.

ಆಗಳ್ ಬಿದಿಯ ತೆಕ್ಕೆಯೊಳಾಂತ ಕತ್ತಲೆ ಕಾವಳಿಸುತುಂ ತಿರೆವೆಣ್ಗೆ ಕರ್ಪುಗುವ ಕರಿ ಮುಸುಂಕಂ ಮುಸುಂಕಿ ಚಂಡಭಟರ ಗಂಡಗರ್ವಮಂ ಬೋಳೈಸಿ ತಳ್ಕೈಸಿ ಸೆಜ್ಜೆಯೊಳ್ ಕೆಡೆಗಿದುದು ಬಲ್ಮೆಯ ನೋಂಪಿಯಿಂ. ಗಂಡೆರ್ದೆಯ ಕೊರ್ವಿಂ ಕಿಸುಗಣ್ಚಿ ಪಾರಾಡಿ ಪೊಣರ್ದು ಗೆಲ್ದಗೆಲ್ಲಂ, ಸೋಲ್ತಸೋಲುಂ ನಿಡುಸುಯ್ದು ಬಳಲ್ದು ವಿಶ್ರಾಂತಿಗೆತ್ತುದು ಪೊಳ್ತಿಂಗೆ ಋಣಿಯಾಗಿ. ಬಿರುಗಾಳಿಯ ಪೊಯ್ಲಿಂಗೆ ಬೆಟ್ಟನ ಗಿಡುಮರಂಗಳುಂ ಬೇರುಡಿದು ದಿಮ್ಮನೆ ತಿರೆ ಗೊರಗುವಂತೆ ಜೀವಜಗತ್ತಿನ ತಾನವಿತಾನಂ ಗಡ! ದಿನವಿಡಿ ಬಳಲ್ದ ಬಳಲ್ಕೆಯುಂ ಮುಡಿವನ್ನಂಗೆಯ್ದು ನಿದ್ದೆಯಿಂ ಬದ್ದವಾ ೩೪೦

ದೊಡಂ ಅಂಕೆಸಂಕೆಯಿಲ್ಲದೆ ಒಯ್ಯನೊಯ್ಯನುರುಳ್ದುದು ಇರುಳ್
ಮುಗಿಬಗಿಯಾಗಿ. ಅಃ! ಆಗಳೇನೆಂಬೆನೊ, ಸುಪ್ರಭಾತಂ ಸಾರ್ದು
ದು ಬಗೆವಗೆಯ ಹಕ್ಕಿಪಕ್ಕಿಗಳ ನಲ್ಗೊರಳ ರಾಗದಿಂಪಿಂ ಗಿಡು
ಮರ ಬಳ್ಳಿಗಳ್ ಬಾಯೊಡೆದುವೊ ಎಂದಚ್ಚರಿಬಡುವಂತು!
ಕುಕ್ಕುಟಂ ಕೋಯೆಂದುಂ, ಕಾಗೆ ಕಾಯೆಂದುಂ, ಕೋಗಿಲೆ
ಕೂಯೆಂದುಂ, ನವಿಲು ಕೇಯೆಂದುಂ. ಮಿಾಂಚುಳ್ಳಿ ಮಿಾ
ಯೆಂದುಂ ತರತರದ ಕೂಟದ ಬೇಟದ ಕಂಠರುತಿಯುಂ ಬೆರೆದುದು
ತಣ್ಣನೆ ಮಿಣ್ಣನೆ ಪೊಳ್ತರೆಯ ಸೊಬಗಿಂಗೆ.

ಆನಿತರೊಳ್, ಎಳ್ಚತ್ತ ಗಂಡರಗಂಡರುಂ ಚಂಡಪ್ರಚಂಡರುಂ
ಬಲ್ಪಿನ್ ಬೀರರುಂ ಗಡಬಡಿಸಿ ಎಳ್ದು, ಸಿಚ್ಚಟದ ಪೊಸ ಪುರುಪಿನಿಂ ೩೫೦
ಅಣಿಯಾಗಿ ಅಚ್ಬೆಯುಡಿಗೆರಗಿ ಪೆಂಡಿರಿಂ ರಣವೀಳ್ಯವಂ ಕೈಕೊಂಡು
ಮೂಡಿಗೆಯುಂ ಬಿಗಿದು, ದಟ್ಟಿಯುಂ ಕಟ್ಟಿ, ಕಿರೀಟವಂ ತೊಟ್ಟು,
ಬಿಲ್ಲು ಬಾಣ ಶಸ್ತ್ರಾಸ್ತ್ರಂಗಳಂ ಪೊತ್ತು ಪೊರವಂಟರ್ ಒಗ್ಗೂಡಿ.
ಕಾಲಾಳ್ಗಳ್, ಮೇಲಾಳ್ಗಳ್ ದಳವಾಯಿಗಳ್ ಸಾವಂತರ್ ಪಡೆ
ವಳರ್ ಬೊಬ್ಬೆರಿದೂದಿದ ದುಂದುಭಿನಾದಂ ಶತವರೂಥಂಗಳ ಗಡ
ಬಡಂ, ತೇಜಿಗಳ ಖುರಪುಟಂ, ಗಜಂಗಳ ಬೃಂಹಿತಂ ಕೂಡಿ
ಮೂವಡಿ ಮಿಾರ್ದತ್ತು ಸಪ್ತಶರಧಿ ನಿರ್ಘೋಷಮಂ!

ಇಂತಿಂತು ಸೇನೆಯುಂ ಒಗ್ಗೂಡಿ ಬೀಡಂ ಬಿಟ್ಟುಮುಂ
ಕೊಂಡು ಬಡಗಣದಿಸೆವಿಡಿದು ನಡೆದಿರಲ್ ಪೊಂಬೆಟ್ಟು ಕರ್ವೆಟ್ಟು
ವಂ ಇದಿರ್ಚುವಂತೆ, ಮದ್ದಾನೆ ಮರಿಸಿಂಗಮಂ ಎದುರ್ಚುವಂತೆ ೩೬೦
ರಣರಣಿಸಿಯುಂ ಗಜಬಜಿಸಿಯುಂ ಸಾಗುತ್ತೆ ಭೋಯೆಂದುಂ,
ಹೋಯೆಂದುಂ, ಜೈಕಾಳಿಯೆಂದುಂ, ಜೈಶಂಭೋಯೆಂದುಂ
ಮದ್ದಳೆಯ ಕಂಸಾಲೆಯ ಮೇಳವಂ ಮಿಾರ್ದು ಬೊಬ್ಬಿರಿದು
ಬೆಬ್ಬಳಿಸೆ; ಕೆಂಧೂಳುಂ ಮೇಲೇಳ್ದು ಮುಗಿಲಂ ಮುಟ್ಟಿ ಕೆಂದೆರೆ
ಯುಂ ನೆಯ್ದುದು ದೃಷ್ಟಿದೋಷಕ್ಕೆ ತೆರೆಯೊಡ್ಡಿದುದೊ ಎನಲ್ಕೆ.

ಇಂತು ಜರ್ವಿ ಪರ್ವಿದ ಸಂಗ್ರಾಮ ಕೋಲಾಹಲಂ ಕೈವೀಸಿ ಕರೆಯಲ್ ಅಭಿಮನ್ಯು ಪೊರವಂದು ಪಡೆಯುಂ ಮುಂಬಟ್ಟೆಗೆ ಯುದ್ಧದಂ ಕಣ್ತುಂಬ ಈಕ್ಷಿಸುತಿರಲ್ ಅತಿರಥ ಮಹಾರಥರ ರಾವು ತರ ಸೇನಾನಿಗಳ ಬಿಲ್ಲೋಜರ ಧೈರ್ಯ ಶೌರ್ಯಮಂ ಮೆಚ್ಚಿ ಪುರುಡುವೆತ್ತು ನವಿರ್ ನಿಮಿರೆ ಬಿರಿದೆಸಳ್ಗಣ್ಗಳ್ ವೀರಸಿರಿಯ ಮಿಂಚು ಪೊಣ್ಮಿದುದು ಸುಖಾಶ್ರು ತುಳುಂಕುವವೊಲ್ ಥಳಥಳಿಸಿ; ಕಿರುಮೊಗದ ವೀರಂ ಮರಿಸಿಂಗನೆಂತಂತು ಬಲ್ಪಿನುಬ್ಬರದಿಂ ಅತ್ತ ಮಿತ್ತಂ ತಿರುಗುತುಂ ತನ್ನೊಳ್ ತಾನೆ ಇಂತೆಂಗುಂ–ಎನ್ನೀ ತೋಳ್ಬ ಲಮಂ ಬಲ್ಪಿನ ಬಿಲ್ಲೋಜೆಯುಂ ತೋರಲೆಡೆಯಿರ್ದೊಡೆ ಅರಿಕು ಲಮಂ ಕೊಚ್ಚಿ ನುಚ್ಚುನುರಿಗೆಯ್ದು ರಣಮಾರಿಗೆ ಬಿರ್ದಿಕ್ಕು ತಿರ್ದೆಂ! ಈಗಳ್ ಪಿರಿಯರದೇತರದೊಂದು ಅಂಕೆಸಂಕೆಯೊ ಕಾಣೆಂ. ಅಲ್ಲದೊಡೀಗಳ್ ರಣರಂಗಮಂ ಪೊಕ್ಕು ಎಂತು ಪೋಣರ್ಕೆಗೆಯ್ದ ಪೆನೊ ಇನ್ನೆಂತರಿಗಳಂ ಇದಿರ್ಚುತಿರ್ದೆನೊ ಆಂ ಎಳಯನಾದೊಡೆ ಬಿಲ್ ಬಿಜ್ಜೆ ಎಳಯದೇಂ ? ಅರ್ಜುನ ಸೂನು ಬೆದರ್ವನೆ ಅರಿ ರಕ್ಕಸರ್ಗೆ ? ಕೊರ್ವಿದರಿಗಳಂ ಗಂಡೆರ್ದೆಯಿಂ ಇದಿರ್ಚಿ ಜಯ ಕಾಂತೆಗೆ ಕೀರ್ತಿಮಾಲೆಯಿಕ್ಕುವೆಂ! ನಾಡಿನ ಕೇಡಳಿಸಿ ಲೋಗರ್ಗೆ ಸೊಗದ ಸುಧೆಯನಿಕ್ಕದಿರ್ದೊಡೆ ಆನಲ್ತು ಅರ್ಜುನ ಸೂನು ! ೩೭೦ ೩೫೦

ಅಗಳಲ್ಲಿಗೆಯ್ತಂದ ಕುಂತೀದೇವಿ ಅಭಿಮನ್ಯುವಂ ಕುರಿತು– ಕಂದ! ನಿನ್ನೊಳಗದೇಂ ವಿಚಾರಭಾರಂ ?

ಅಭಿಮನ್ಯು ಮೊಗದೊಳ್ ರೋಷತೋಷಂಗಳ ಕಿರುನಗೆಯುಂ ಅರಳ್ಚಿ–ಇಲ್ಲದಿನ್ನೇಂ ಮುತ್ತಜ್ಜೆ ? ರಣದೊಳೆಲ್ಲರುಂ ಬಲ್ಪಿನ ಬಿಲ್ಲೋಜರಿರೆ ಆಂ ಪೆಂಬೇಡಿಯೊಲ್ ಬೀಡಿನೊಳಿರ್ಪುದು ತರವೇಂ? ಈ ನಾಣ್ಗೆಟ್ಟ ಬಾಳ್ತೆ ಎನಗಲ್ಲಂ. ಇನ್ನಾಂ ಜಗ್ಗದೆ ಪೋಣರ್ಕೆಗಿಳಿ ವೆಂ; ಬಲ್ಪಿನ ಬಿಲ್ಲೋಜನಿರ್ದು ತೋಳ್ವಲಮಿರ್ದು ಆನೆಂತೆಳಯುಂ ಪೇಳ್ ? ಇದಂ, ಪರಿಹಾಸಂ ! ೩೬೦

ಕುಂತೀದೇವಿ–ಇಂತೆಂದೊಡೆಂತ್ತೈ ಕಂದ! ನಿನ್ನಂ ಬಲ್ಲಿದನೆಂಬರುಂಟೆ ? ಎಳಯರ್ಕಳ್ ವಿಣ್ಣನೆ ಮನೆಯೊಳಿರಲಕ್ಕುಂ. ಕೂರರಣ ಬೆಸನಂ ಪಿರಿಯರ್ಕಳ್ಗಕ್ಕುಂ. ನಿನಗಿಂತೇಂ ಕಾತರಂ ಕಂದ ! ಆತುರವಟ್ಟು ಗೊಡ್ಡಾಟಕ್ಕೆಳಸದಿರ್. ರಣಗಿಚ್ಚು ನಿನ್ನೆಳತನಕೆ ಸಲ್ಲದು ಕಾಣ್ !

ಅಭಿಮನ್ಯು–ಏಂ ಅಂಕೆಸಂಕೆಯೊ? ಏಂ ಅಸೆಯೊ ? ಇದಂ ಸಲ್ವುದೇಂ ಕ್ಷಾತ್ರಧರ್ಮಕ್ಕೆ ?

ಕುಂತೀದೇವಿ–ನೀನಿರೆ ಕ್ಷಾತ್ರಧರ್ಮವಿಕರ್ಮಂ. ಇಲ್ಲದೊಡೆಲ್ಲಿಯ ಕ್ಷಾತ್ರಧರ್ಮಂ ? ಕಾಲಗತಿಯೊಳ್ ಎಲ್ಲಂ ಸಲ್ವುದು ತಾನಾಗಿ. ಇಂತವಸರಂ ಆರ್ಗಂ ಸಲ್ಲದು ಕುವರ ! ೪೦೦

ಅಭಿಮನ್ಯು–ಮುತ್ತಬ್ಬೆ ! ಈ ಗಾವರಮುಳ್ತೆ ಎನ್ನಂ ಪಿಂತಿಕ್ಕಿದುದು ? ಇನ್ನಾಂ ಮಣಿಯೆಂ. ಪೆಂಬೇಡಿತನದ ಜೀವನಂ ಆರ್ಗೆವೇಳ್ಕುಂ !

ಕುಂತೀದೇವಿ–ಇದೇಗಳುಮುಲ್ತು ಕುವರ! ರಣಮಲ್ಲರ ಬಲ್ಪನ್ನೈಗೂಡಿ ಬರ್ಪೆನ್ನಗಂ ಕಣಾ !

ಅಭಿಮನ್ಯು–ಏಂ ಮಾತೊ ? ಈಗಳೆನ್ನೊಳ್ ಬಲ್ಪಿಗೇಂ ಕೊರಂ ? ಚಂಡಪ್ರಚಂಡರಂ ಎದುರ್ಚಿ ಮಣ್ಣು ಮುಕ್ಕಿಸುವೆಂ ! ಇದಂ ಬಡಿವಾರಮುಲ್ತು.

ಕುಂತೀದೇವಿ–ಅಕ್ಕೆ ಮಗನೆ ! ಆಂ ಬಲ್ಲೆಂ, ನಿನ್ನ ಬಲ್ಪಿನ ಬಿಲ್ಲೋಜೆಯಂ. ಆದೊಡಂ ತಾಳ್ವುದೊಳ್ಳಿತು. ೪೧೦

ಅಭಿಮನ್ಯು–ಇರಿಮಿರಿಂ. ಒರ್ಮೆ ತೋರ್ಪೆನೆನ್ನ ಬಿಲ್ಲೋಜೆಯಂ ಮತ್ತಮಾ ತೋಳಲಮಂ !

ಕುಂತೀದೇವಿ–ನಿನಗಂ ಗುರುವೆಂಬೊಂದು ಕತದಿಂ ಇದಿರ್ಚೆ ತಳ್ಳ ಕಂಪಿಸುರ್ವುದಲ್ತೆ ?

ಭೀಮಸೇನಂ–ಅಂತೆಂದೊಡೆತ್ತಣ ಕೊಳುಗುಳಂ! ರಣರಂಗದೊಳ್ ಗುರುವೇಂ? ಪಿರಿಯರೇಂ? ಇದಿರ್ಚಿದರಂ ಕೊಚ್ಚಿ ಇಕ್ಕಡಿಗೆಯ್ವುದೇ ರಣಂ !

ಧರ್ಮರಾಜಂ–ಪಿಂಜರಿದೊಡೆ ಕೊರಳ್ಗೆ ಕುತ್ತುಂ, ಗಡ!

ಕುಂತೀದೇವಿ–ಕಂದ ! ಬಳಲ್ದು ಬಂದಿರ್ಪಯ್. ಸುಕಮಜ್ಜನಂಗೈಯ್ದು ಅಂತಃಪುರದೊಳ್ ವಿಶ್ರಮಿಸೈ. ೨೩೦

ಆ ಮಾತಿನಿಂ ತನ್ನಿರವಂ ನೆನೆದು ಭೀಮಸೇನಂ ತಳರ್ದು ಅಂತಪುರಮಂ ಪುಗಲ್ ಎದುರ್ಗೆಯ್ದ ದ್ರೌಪದಿ ಕೆನ್ನೀರ್ಮಜ್ಜನಂಗೊಂಡ ಪತಿಯಂ ನೆಟ್ಟ ಕಣ್ಣಾಲಿಯಂ ಕೀಲಿಸದೆ ನೋಡುತುಂ ಬೆಮೆಗೊಂಡವೊಲ್ ನಿಂದಿರೆ ಭೀಮಸೇನಂ ತಿಳಿನಗೆಯಂ ಸೂಸಿ–ಎಲೆ, ಕಾಂತೆ! ಇಂತೇಂ ಬೆಮೆಗೊಂಡ್ಯೆ ?

ದ್ರೌಪದಿ–ಆರ್ಯಪುತ್ರ! ನೀನಿರ್ದೊಂದು ಮಾಳ್ಕೆಯೆ ಮನಮಂ ಬೆಕ್ಕಸಬಡಿಸುಗುಂ !

ಭೀಮಸೇನಂ–ಇದೇಂ ಪೊಸತೇಂ ?

ದ್ರೌಪದಿ–ಪೊಸತಲ್ಲಾದೊಡಂ ಈ ಕಕ್ಕಸವಗೆಯುಂ ಮನಮಂ ಬೆಕ್ಕಸಬಡಿಸುಗುಂ ! ೨೪೦

ಮತ್ತಾಗಳ್ ದ್ರೌಪತಿ ಮೆಯ್ಯ ಗಾಯಂಗಳ್ಗೆ ಪಸುರಿನ ಲೆಪ್ಪಮಂ ಪೂಸಿಯುಂ ತೈಲವನೊತ್ತಿಯುಂ ಸುಕಮಜ್ಜನವನಿತ್ತು ಶ್ರೀಗಂಧಮಂ ಬಳಿದುಂ ನೋವಂಕಿಡಿಸಿ ತಂಪಿನ ಆದರದಿಂಪಿನ ಪಾಲ್ಪಣ್ಗಳಂ ಜೇನ್ತುಪ್ಪಮಂ ದಧಿಘೃತಮಂ ತಂದು ಬಿರ್ದುಣಿಸಿ ಉಪಚರಿಸಿದಳ್. ಆ ಬಳಿಕ್ಕಂ ಭೀಮಸೇನಂ ಕಾಂತೆ ನೀನಿಂದಿನ

ಪೊಣರ್ಕೆಯ ಸುದ್ದಿಯಂ ಕೇಳ್ದೊಡೇನೆಂಬೆಯೊ! ದ್ರೋಣನ ದಳ
ಪತಿತ್ವಂ ಪುರುಡಿತ್ತುದು ಇಕ್ಕೆಲದೊಳ್! ಇಂದಾರುಂ ಪಿಂಜರಿದು
ದಂ ಕಂಡೆನಿಲ್ಲಂ. ಏಂ ಸಾಸಂ? ಏಂ ರೋಷಂ? ಏಂ ಕೊರ್ವು? ಏಂ
ಜರ್ವು? ಎಲ್ಲೆಲ್ಲಿಯುಂ ಕೆವಿಸ್ಮಾಸೆಯ ಪೊದರ್ಗಡ್ಡದ ಕಟ್ಟಾಳ್ಗಳ್
ಘೋರರೂವಿನ ರಕ್ಕಸ ಕುಲಜರ್, ಪೇರೊಡಲ ದಿಗ್ಗಜರ್, ತೆಳಸ್ಗೆ ೩೫೦
ಯ ಬೆಳ್ನವಿರ ಪಿರಿಯರ್ ನುಣ್ಮೈಯ್ಯ ಕಿರಿಯರ್ ಪಡೆಯುಳ್ಳ ಬಲ್ಪಿ
ನಾಳ್ಗಳ್ ತೇರಾಳ್ಗಳ್ ರಾವುತರ್ ಮಾವುತರ್ ಒಗ್ಗೂಡಿ ಜವನ
ಜಂಗುಳಿಯಂ ಮಿಾರ್ದು ರೋಷದಿಂ ಎದೆಯುರ್ಬಿ ಮುಂದೈಸಿ
ಬೊಬ್ಬಿರಿದ ಶೌರ್ಯಾಟೋಪಮಂ ಏನೆಂಬೆ? ಆಚಾರ್ಯಂ ಪುರಿ
ದುಂಬಿಸುತ್ತಿರಲ್ ಪುರುಪುಂ ಇಮ್ಮಡಿಸಿ ಮುಮ್ಮಡಿಸಿ ದಂಡೈಸಿ
ನುಗ್ಗಿ ಬಂದರ್ ಅರಿರಕ್ಕಸರ್. ಅಹಹ! ಕುರುಕ್ಷೇತ್ರಂ ಬೆಸಲೆ
ಯಾದುದೊ ಎಂದಚ್ಚರಿಬಡುವಂತು ಚೆಚ್ಚರದಿಂ ಪಿಂಡುಪಿಂಡೈಸಿ!
ಇತ್ತಲ್ ಎಮ್ಮವರುಂ ಗೆಯ್ದ ಸಾಸಂ ಸಾಮಾನ್ಯವಲ್ತು! ಎಲ್ಲರುಂ
ರಕ್ಕಸವಗೆಯಿಂ ಬಗೆವಗೆಯ ಅಸ್ತ್ರಶಸ್ತ್ರಂ ತೊಟ್ಟು ಮಾರಾಂತು
ಪೊಣರ್ದುದಂ ಬಣ್ಣಿಸುವೊಡೆ ಬಲ್ ಸಮಯಮೇಳ್ಕುಂ! ಅಂತು, ೨೬೦
ಹವ್ಯಕವ್ಯಂಗಳ ಒಡಲ ಪಸಿವೆಗೆ ರಸದೂಟಂ ಗಡ !

ದ್ರೌಪದಿ–ರಮಣ! ನಿನ್ನೊಳಿನ್ನೇಂ ಗಡಣೆಯೊ? ಮುದ್ದಾನೆ
ಯೊಂದು ಕದಳಿ ಬನಮಂ ಪೊಕ್ಕವೊಲಾಯ್ತಲ್ತೆ ?

ಭೀಮಸೇನಂ–ನಗೆವೊಗದಿಂ–ಸಾಜಂ....ಸಾಜಂ ?

ದ್ರೌಪದಿ ಮನದೊಳೆಲ್ಲಮಂ ಬಂದಿಗೊಂಡು ಮಿಣ್ಣನೆ ಮೈವರ
ವಟ್ಟು ಮೂಗುವೊಟ್ಟು ತರ್ಕದ ಸುಳಿಯೊಳ್ ಸಿಕ್ಕಿ ಮೈಮರೆಯೆ,
ರೋಷತೋಷಂಗಳ ಬಿಗುರ್ಪಿನಿಂ ಕೆಂಗಲಿಸಿರ್ದ ಭೀಮಸೇನಂ–
ಎಲೆ, ಶುಭಗೆ ! ಕುರು ಕೂಳರ್ ಬೀರದೇಳ್ಗೆಯಂ ಕಡೆಗಣ್ಚಿ
ರೊಚ್ಚಿನ ಕಿಚ್ಚಿಕ್ಕಿ ಪೊಣರ್ಕೆಯಗ್ಗಿಯೊಳ್ ತಾಮೇ ದುಮ್ಮಿಕ್ಕಿ

ಸುಟ್ಟು ಚಟಪಟ ಸಿಡಿದು ಸಾಯಲ್ ಭೂಭಾರಕರಾದುದೆ ಕಾರಣ ವಲ್ತೆ ?

ದ್ರೌಪದಿ–ಈ ಪುಣ್ಯಭೂಮಿಯುಂ ಅನೀತಿ ಅನ್ಯಾಯಂಗಳನನು ಕರಿಸಿ ನಡರ್ಚಿದೊಡಿನ್ನೇಂ ಪೇಳ್? ತಂತಮ್ಮ ಕರ್ಮಮುಂ ತಾ ಮಲ್ಲದಾರುಣಲಕ್ಕುಂ? ರುಂಡಮುಂಡಂಗಳಂ ಸೆಂಡಾಡುವ ರಣ ಕಾಳಿಯ ಶರಣ್ಬೊಕ್ಕುದು ಬೆಂಬಿಡಿದ ಕಿಡುದೆಸೆಯಲ್ಲದಿನ್ನೇಂ ? ತಮ್ಮ ಆಪದೆಸೆಯಿಂ ಸಜ್ಜನರಂ ಕಿಡಿಸಿದರ್ ಮತಿಗೆಟ್ಟ ಧೂರ್ತರ್.

ಭೀಮಸೇನಂ–ಕಾಲಧರ್ಮಂ ಎಲ್ಲರಂ ತಿಕ್ಕೆತೆಕ್ಕೆಯಾಡುತಿರ್ಕುಂ. ಪಾಪಾತ್ಮರ ಪೇಸಿಕೆಯ ರೋಡೆಗರ ಅಂಕದರಸರೆಂಬ ಸೊರ್ಕಿನವರ ಪತನಗಿತಸಂ ಬಲ್ಲಿದರ ನಲ್‌ಕಜ್ಜದುಜ್ಜುಗಕ್ಕೆನಿತ್ತೊ ನೆರಂ. ೨೮೦

ದ್ರೌಪದಿ–ಇನ್ನಾದೊಡಂ ಲೋಕದೊಳ್ ಸತ್ಯಂ ಗೆಲ್ಗೆ; ಧರ್ಮಂ ಗೆಲ್ಗೆ.

ಭೀಮಸೇನಂ–ಬೆಂಬಿಡಿದ್ದೈದಿವರ್ಪ ಕರ್ಮಬಲಂ ಆವೆಡೆಗುಯ್ವುದೊ ಪೇಳಲಾರ್ಗಳವುಂ ? ಕಾಂತೆ! ಏನೊದವಿದೊಡಂ ಸಹಿಸಲಕ್ಕುಂ. ಈ ದುರಾಚಾರಿಗಳ ಕರ್ಮಾಂತರದೊಳೆಮ್ಮ ಕರ್ಮಂ ಬಲಿಯುತಿರ್ಕುಂ. ಪೊಣರ್ಕೆಯೊಳ್ ನುಗ್ಗಿವರ್ಪ ಬಲ್ಪಿನ ಭಟರಂ ಗಂಡಗರ್ವದ ಕಟ್ಟಾಳ್ಗಗಳಂ ಸುಜನರೆಂದು ಸ್ವಜನರೆಂದು ಕರುಣೆ ದೋರಲಕ್ಕುಮೆ? ಅರಿತರಿತು ಇರುಳ್ ಕಂಡ ಬಾವಿಯೊಳ್ ಪಗಲ್ ಬಿಳ್ದಂತಾಯ್ತಲ್ತೆ? ಆದೊಡಂ ಪುಟ್ಟದೆ ಪೊಂದದೆ ಸುಕದುಕ್ಕಮೆಂತು ಇಹಪರಂಗಳೊಳ್ ದೊರೆಕೊಳ್ಗುಂ? ಬರ್ದುಂಕಿನೊಳ್ ಕೊಟ್ಟು ೨೯೦ ಕೊಂಬುದರಿಂ ಮೋಸಗೇಸದಿಂ ಪಡೆಕೊಂಡರಲ್ತೆ ಸುಕದುಕ್ಕಂ ?

ದ್ರೌಪದಿ–ಅಹುದು ಎಂದೊಪ್ಪಿದೊಡಂ, ಎಮ್ಮಾ ಬೆಸನದೊಳ್ ಪೆರಲೋಗರ್ ಭಂಗಂಬಡುವುದೊಂದು ದುಕ್ಕಂ, ಗಡ!

ಭೀಮಸೇನಂ—ಲೋಕದೊಳ್ ಮೂಳರ್ ಬೋಳರ್ ಚಂಡಾ ಳ್ಗರ್ ನಾಣ್ಗೆಟ್ಟವರ್ ಬಾಳ್ದೊಡೆ ಲೋಕಕಂಟಕಂ. ಇವರ್ಗೆತ್ತಣ ಮರುಕಂ ? ದುಷ್ಟರಂ ಕಂಡಕಂಡಲ್ಲಿ ಕೊಚ್ಚಿ ರಣಕಾಳಿಗೆ ಕೂಳಿ ಕ್ಕುವುದೆ ಲೋಕೋದ್ಧಾರಂ !

ದ್ರೌಪದಿ—ದಿಟಂ.

ಭೀಮಸೇನಂ—ಪ್ರಿಯೆ! ಧೂರ್ತರೊಳ್ ಧೂರ್ತರೆನಿಪ್ಪ ಶಕುನಿ ಶಲ್ಯ ಕೃಪ ಜಯದ್ರಥ ಮುಂತಪ್ಪ ಅರಿರಾಯರುಂ ಕುತಂತ್ರದಿಂ ಅ ನೀತಿಯಿಂ ಬಟ್ಟೆಗೆಡಿಪರೆಮ್ಮ ಪಡೆಗಳಂ. ಆವೆಲ್ಲೆಡೆಯುಂ ಕಣ್ಣೊಳ್ ಕಣ್ಣಿಟ್ಟು ಕಾಯವೇಳ್ಕುಂ. ಏಂ ರಕ್ಕಸವಗೆಯ ಕಡುಪಾತಕಂ? ಏಂ ಪೊಲ್ಲಂ ಕಾಳೆಗಂ? ಚೀ, ಕ್ಷಾತ್ರಕುಲದ ಜಸಮಿಂತೇಕೆ ಪಾಳಾಯ್ತೊ? ಪಿರಿಯರ್ಕಳಿರ್ದು ಜಸವಂತರಿರ್ದು ಮತಿಗೆಟ್ಟು ನಾಣ್ಗೆಟ್ಟು ಅನ್ನೆಯ ದಿಂ ಜಸಮಂ ಸಾಧಿಪರ್. ಪೆರರೊಡವೆಯಂ ಕವರ್ವ ಪೆರರ ರಾಜ್ಯ ಕ್ಕಳುಪುವ, ಪೆರರಂ ಕೀಳ್ಮಾಡಿ ಕಿಡಿಸುವ ಕಡು ಮೂರ್ಖರ್ಗೆ ಪಾತ ಕಿಗಳ್ಗೆ ನೆಲೆವೀಡಾಯ್ತು ಭಾರತಂ! ಮುನಿಜನರ ಜನ್ನಕ್ಕೆಡರ್ಗೆಯ್ವ ಪೆತ್ತೊಡಲ್ಗೆ ಕಿಚ್ಚಿಡಿಸಿ ಪತ್ತುವಿಡುವ, ಮಾನ್ಯರಂ ನಾಣ್ಗೆಟ್ಟು ನೋಡಿ ಸುವ ಪಾಪಿಗಳ್ ನಾಡಿನೇಳ್ಗೆಗೆ ಸಂಸ್ಕೃತಿಯೇಳ್ಗೆಗೆ ಮಿತ್ತಾದಪರ್. ೩೦೦

ದ್ರೌಪದಿ—ಇಂತವನತಿಯುಂ ಆವ ಮುನಿಜನರ ಶಾಪವೊ? ೩೧೦

ಭೀಮಸೇನಂ ತಲೆಯಂ ತೂಗಿದು ಮನ್ನಣೆಯಿತ್ತವೊಲ್ ಮಿಣ್ಣನಾದಂ.

ದ್ರೌಪದಿ—ಈ ಪರಿಯಿಂ ರಣರಂಗಂ ಪುರ್ಜುಗೊಳ್ಳುತ್ತಿರಲ್ ನಿನ್ನ ಪೂಣ್ಕೆಯ ಮಾತೇಂ ಆರ್ಯಪುತ್ರ ? ದುರುಳ ದುಶ್ಶಾಸನನ ರುಂಡಮಂ ದಿಂಡುರುಳ್ಚಿ ದಂಡೆಗರುಳಂ ಬಗೆವುದಂ ಕಾದಿರ್ಪುದೆನ್ನ ಮನಂ. ಒಡಲ ಸಂಕಟಂ ಕುದಿಕುದಿದು ಕೆಚ್ಚಿನ ರೊಚ್ಚಿನ ಸೂಡಿಂ ಬೇವೆಂ !

ಭೀಷ್ಮಾಚಾರ್ಯರ್ಗಂ–ನಿನಗಂ ಮೇಲಕ್ಕೆ.

ಬಳಿಕ್ಕಂ ದ್ರೋಣಾಚಾರ್ಯರ್ಗಂ ತೇರನೇರ್ದು ಪೊರವಂಟಂ. ಕುರುಕ್ಷೇತ್ರದ ನಿಡುವಲಯುಮಂ ದಾಂಟಿ ಅಂಕುಡೊಂಕಿನ ಕಿರ್ಬಟ್ಟೆಯೊಳ್ ತೇಜಿಗಳಂ ತೊಡರ್ಚಿ ಮುಂತೆ ಮುಂತೆ ಸಾರ್ದು ಪೆರ್ಬಯಲ ಪುಲ್ಗಾವಲೊಳ್ ತೇಜಿಗಳಂ ಮೈಗರ್ಚಿ ಮೇಯಲ್ ಬಿಟ್ಟು ಬೆನ್ಚಪ್ಪರಿಸಿ ಬೋಳೈಸಿ ಮುಂಬಯಣದೊಳ್ ಮನದೆ ಯುದ್ಧ ಬೆಸನಮಂ ಇಡುಕಿ ತೀವ್ರ ಚಿಂತೆಯಿಂ ಬಡಗಣ ದಿಕ್ಕಿನ ಬೀಡಿಗಭಿ ೧೪೦ ಮುಖನಾದಂ. ಪೊನ್ನೇಸರುಂ ನಡುನೆತ್ತಿಯನೇರ್ದು ಸುಡುಬಿಸಿಲುಂ ಬೇಯೆ, ಗಿಡಮರಂಗಳ ನೆರಳುಂ ಪೊಡಮಡುವಂತು ಬುಡಂಗಳನ್ನಾಶ್ರಯಿಸೆ ಮೆಯ್ಮುದುಡಿ, ಕಾಳ್ ಕಡ್ಡಿಯು ಬಿರ್ದುಂಡು ಬೀಗಿರ್ದ ಬಗೆಬಗೆಯ ಪಕ್ಷಿಸಂಕುಲಂ ಸೆಳೆಗೊಂಬೆಗಳನಡರ್ದು ಆಡುತುಂ ಪಾಡುತುಂ ಅತ್ತಿತ್ತ ಪಾರಾಡುತುಂ ನಲಿದಾಡುತಿರ್ದುವು ಸಂತಸದಿಂ ಮೈವೆರ್ಚಿ.

ಬೂರುಗದ ಪೆರ್ಮರಂಗಳ್ ಎಲೆವಿಟ್ಟು ಎಲ್ಲೆಡೆಯುಂ ಎಡೆಯಿನಿತಿಲ್ಲದೊಲ್ ಪೂಗಳಿಂ ತುಂಬಿ ಮೈಸಿಂಗರಿಸಿ ಓಕುಳಿ ಮಜ್ಜನಂಗೆಯ್ದಂತೆ ಕೆಂಗಲಿಸಿ ಸಗ್ಗದಾಣ್ಮನ ರಥಮೊ ಎನಲ್ಕೆ ಕಣ್ಗೆಡ್ಡಮಾಗಿರೆ, ನಿಚ್ಚಂ ಪೊನ್ನೇಸರಿಂಗಾರತಿಯೆನೆ ಪಂಜುರಿಸಿದವೊಲ್ ಪೊನ್ನ ೧೫೦ ವರ್ಣದ ಪೂಗಳಿಂ ತುಂಬಿ ನರುಗಂಪುಗುವ ಪೆಂಪಿನ ಸೊಂಪಿನ ಚಂಪಕದ್ರುಮಂಗಳ್ ಮುಗಿಲ್ಮುಟ್ಟೆ ಮಂಜಿನ ಕೀರೀಟದಿಂ ರಂಜಿಸಿರೆ, ಬಗೆವಗೆಯ ಪೆರ್ಮರಗಳಿಂ ತುಂಬಿ ನಿಚ್ಚಂ ಪಚ್ಚವರ್ಣದಿಂ ನಳನಳಿಸಿರ್ದ ವನಧಾತ್ರಿ ಬಲುಮೆಯಿಂ ಸ್ವಾಗತಿಸಿದತ್ತು ತನ್ನಡಿಯ ನಿಡುವಯಲ ಸಮುದಾಣದೊಳಿರ್ದೊಂದು ಎಲೆವನೆಗೆ.

ಗೋಮಯಂ ತಳ್ತು ರಂಗವಲಿಯಿಕ್ಕಿ ಸಿಂಗರಿಸಿದ ಪ್ರಾಂಗಣದ ವಾಮಾಂಗದೊಳ್, ಕರ್ನೆಲದೆ ಬೇರೂರಿ ಕೊರ್ವಿ ಬೆಳೆದು ತನಿರಸಂಗೊಂಡ ಕರ್ವಿನ ಪಿಂಡಿಲುಂ, ಎಡೆಎಡೆಯೊಳ್ ಮೈಯ್ಗೊಂಡು

ಸೆಕ್ಕೆಯೊಡೆದ ಚಂದನ ದ್ರುಮಂಗಳ ಸಾಲ್ಗಳಿಂ, ಪಸುರ್ಮೆಯುದ
ಇಬ್ಬಸಿಯ ತಣ್ಪಾರದ ಗಿಡುಮರಂಗಳ ಸಂದೋಹದಿಂ ಮೂಡಿದ ೧೬೦
ಮಿಡಿಯಿಂ, ಮಾಗಿದ ಪಣ್ಗಳಿಂ ತುಂಬಿ ಬೀಗಿ ತಲೆದೂಗುವ
ಮಾಮರಂಗಳಿಂ, ಪುಷ್ಯರಾಗದ ಪೂವಿಂ, ನೈವೆರ್ಚಿದ ಹಾಲಿ
ವಾಣವೃಕ್ಷಗಳಿಂ, ಅರಿಸಿನದುಡೆಯುಟ್ಟು ಪಚ್ಚರೇಕೆಯ ಸಿಂಗರಂ
ಬೆತ್ತು ಮದದಿಂ ನೈಮಸೆವ ಬಿದಿರ ಕದಿರ್ಗಳಿಂ, ತನ್ನಂಗಿಯೆನೆ
ತೆಳ್ಮೆಯ್ಯೊಡೆದು ತನ್ನೊಂದು ಪೆರ್ಚುಗೆಯ ಪೆರ್ಮೆಯಿಂ ಸಳನಳಿಪ
ವಾಟಿಯಿಂ ಮತ್ತಮಾ ಚೆಂಬಾಳೆಯ ಪೊಂಬಾಳೆಯ ರಂಗುಬಾಳೆಯ
ಕಲ್ಬಾಳೆಯ ಸೊಬಗುಗುವ ರಂಗುರಂಗಿನ ತೋಂಟಮುಂ ಒಳ
ಗೊಂಡ ಬೀಡುಂ ಕಣ್ಗಿಂಬಾಗಿರ್ದುದು ನೆಟ್ಟ ನಿಟ್ಬಾಲಿಗೆದುರಾಗಿ.

ತಲೆವಾಗಿಲ ಹೊಸ್ತಿಲೊಳ್ ತಿಳಿನೀರ್ದುಂಬಿದ ಬಿಂದಿಗೆಯನಿರ್ಕಿ
ಪತಿಯ ನಿರೀಕ್ಷೆಯೊಳಿರ್ದ ಮಡದಿಯ ಪಣೆಯೊಳ್ ಶೋಭಿಸಿದತ್ತು ೧೭೦
ಸಿಡುಗುಂಕುಮದ ತಿಲಕಂ. ಬೆಳ್ನಗೆಯ ಬ್ರಾಹ್ಮಣಿಯ ಸ್ವಾಗತಂ
ಮೆಯ್ಯಬಳಲ್ಕೆಯಂ ಮುಡಿಸೆ ಮನವೆರ್ಚಿ ಒಳಪುಗುತಂದನಾ
ಚಾರ್ಯಂ.

* * * * *

ಕುರುಕ್ಷೇತ್ರದೊಳ್ ಅನ್ನೆಬರಂ ಬ್ರಹ್ಮಾಂಡದೊಡಲ್ ಬೆಬ್ಬ
ಳಿಸಿ ಬಿರಿವಂತು, ಕಾರ್ಗಾಲದ ಸಿಡಿಲ್ ಪೆರ್ಕಳಿಸಿ ಬಡಿದುರವಣಿಸಿ
ದಂತು ರಣರಣಿಸಿದ ರಣಕೌಶಲಂ ಸುಟ್ಟು ಕರಿಮುರಿವೋದವೊಲ್
ಬಳಲ್ದು ಜಪಿಸಿದುದು ಶಾಂತಿಮಂತ್ರಮಂ ಇರುಳ್ಗೆ ಮುಣಿಯಾಗಿ!
ಪಗಲಿಡಿ ಎಡೆವಿಡದೆ ಸೆಣಸಿ ಪೊಣರ್ದು ತಿಕ್ಕಿತೆಕ್ಕೆಯಾಡಿದ ಭೀಮ
ಸೇನಂ ಕೆನ್ನೆತ್ತರ ಮಜ್ಜನದಿಂ ಕೆಂಗಲಿಸಿ ಒಡಲ್ಗಿಚ್ಚಿನ ರೋಷದಿಂ
ನೈಮನವೆರ್ಚಿ ಕನಲ್ದು ಕಿಡಿಕಿಡಿಯಾಗಿ ಪುರುಡೆತ್ತ ಭರದಿಂ ಭುವಿ

ಯಂ ಪಜ್ಜೆಪಜ್ಜೆಯೊಳ್ ದಿಂದಿಮ್ಮನೊದ್ದು ಗದೆಯಂ ಗಿರಿಗಿಮ್ಮನೆ
ತಿರುವುತುಂ ಗುರ್ರೆಂದು ಹೂಂಕರಿಸುತ್ತೆ, ಭೋರೆಂದು ಮೇಲ್ವು ೧೮೦
ಸಿರ್ ಬಿಡುತ್ತೆ ಕಕ್ಕಸವಗೆಯುಂ ಬೆಕ್ಕಸ ಬಡುವಂತು ಕಟುಬ್ಬರದಿಂ
ಕುರುಕ್ಷೇತ್ರದಿಂದೈತರಲೊಡಂ ಬೀಡಿನ ಮಾಡು ಕುಸಿದು ಬೀಳ್ವ
ವೊಲ್ ಜರ್ವಿ ಜಂಕಣಿಸಿದತ್ತು ಸುಕದುಕ್ಕಂ !

ಭೀಮಸೇನಂ ಗದೆಯಂ ಪೀಠದೊಳಿರ್ಕಿ ಧರ್ಮಜಂಗೆ ಪೊಡೆ
ಮಟ್ಟು ಪೆರ್ಮೆಯಿಂ ಪುರುಡಿಂ ಕೇಳಿಸಿದನಿಂತು–ಅಗ್ರಜ! ಈವೊಳ್ತು
ದ್ರೋಣಾಚಾರ್ಯರ ಶೌರ್ಯಾಟೋಪಮಂ ಪೇಳ್ವುದೇಂ? ಎಳೆಯ
ರೆಂತಂತು, ಸಿಂಗನ ಬೆನ್ನೇರಿ ಬಂದರೆಂತಂತು ಬೀರಸಿರಿಯಿಂ ಜಾನ
ಬಲದಿಂ ಪೊಸಪುರುಡಿಂ ಕೂರಂಬುಗಳನೇಸಾಡಿ ಮಾರಂಬುಗಳೆಚ್ಚಂ
ಕ್ಷತ್ರಿಯರಂ ಮಾರ್ದು! ನೋಳ್ಪ ಕಣ್ ಬೆಕ್ಕಸಬಟ್ಟು ಸುರಿವಂ ಜನ
ಸೃಷ್ಟಿಯೊಬ್ಬುಳಿಯೊ ಎನೆ ತನ್ನ ಪೆಸರ್ಗೆ ಪೊಸಕಳೆಯುಂಗೂಡಿ ೧೯೦
ಸಿದಂ' ಅಹಹ, ಏಂ ರೋಷಾವೇಷಂ? ಏಂ ಧೈರ್ಯ ಸ್ಥೈರ್ಯಂ?
ಏಂ ಅಸ್ತ್ರಶಸ್ತ್ರಂಗಳಂ ಪೂಡುವ ಗಡಣೆಯೊ? ನೀಂ ಕಣ್ಣಿಂದ
ನೋಡಿ ಅರಿಯಲಕ್ಕುಂ! ಅಳ್ಳೆರ್ದೆಯರ್ಗೆ ಸಿಂಹ ಸ್ವಪ್ನ ಕಣಾ!

ಆವೇಳೆಗಲ್ಲಿಗೆಯ್ತಂದ ಕುಂತೀದೇವಿ ಭೀಮಸೇನನಂ ನೋಡು
ತುಂ, ಮೂರು ಬಾರಿ ಮೊಗಂ ನೀವಿ ಕೈ ಬೆರಳ ಲಟಿಕೆಯಂ ಮುರಿದು
ದೃಷ್ಟಿದೋಷಂ ಬಳಿದು–ಏಂ ಸಾಸಂಬಟ್ಟೆಯೊ ಕಂದ !

ಭೀಮಸೇನಂ–ಮೈಬಾಗಿ ಪೊಡಮಟ್ಟು ಇಂತೆಂಗುಂ–ಅಜ್ಜೆ,
ನಿಮ್ಮ ಪರಕೆಯಿಂ ಇಂದೆಸಿತೊಂದು ಎದುರಾಳಿಗಳಂ ಕೊಚ್ಚಿ ಕಂಡ
ರಿಸಿ ಜವಪುರಮಂ ಮುಟ್ಟೆಯಿಸಿ ಬಂದಿರ್ಪೆನೊ....

ಕುಂತೀದೇವಿ–ಮಗನೆ! ಎಂತಪ್ಪಗಾಯಮಪಟ್ಟು ನೆತ್ತರಂ ಚೆಲ್ಲಿ ೨೦೦
ಬಳಲ್ದು ಬಂದೈ! ಎಂದಿಗೀರಣಂ ಮುಗಿದು ಶಾಂತಿಯುಕ್ಕುಮೊ ?

ಭೀಮಸೇನಂ–ಎಲ್ಲಕ್ಕೊಂದು ಗಡುಯಿರ್ಕುಮಲ್ತೆ? ತದ ನಂತರಂ ಶಾಂತಿಯುಕ್ಕುಂ.

ಧರ್ಮರಾಜಂ–ತಪ್ಪೇ! ಆಚಾರ್ಯಂಗೆ ದಳಪತಿ ಪಟ್ಟಂಗೊಟ್ಟುದು ಸಾರ್ಥಕವಾಯ್ತೆಂಬೆ. ಇನ್ನಾತನಂ ಎದುರ್ಚಲ್ ಗಂಡೆದೆ ವೇಳ್ಕುಂ. ಎಲ್ಲರುಂ ಎಚ್ಚರಿರಲಕ್ಕುಂ. ಅಗ್ನಿಯೊಳ್ ಸರಸಂ ಸಲ್ಲದೈ!

ಕುಂತಿದೇವಿ–ಸಾಜಂ. ಸಾಜಂ.

ಧರ್ಮರಾಜಂ–ಅಂತುಮಲ್ಲದೆಯುಂ ಆಚಾರ್ಯರ್ ಶಾಪಾನುಗ್ರಹ ಸಮರ್ಥರ್.

ಅದರ್ಕಾ ಭೀಮಸೇನಂ ತಲೆಯಂದೂಗಿ ಸಮ್ಮತಿಯಂ ಸೂಸುತುಂ–ಅಗ್ರಜ! ಇನ್ನೆಚ್ಚರಿಲ್ಲದಿರ್ದೊಡೆ ಕಜ್ಜಂ ಕೆಡುಗುಂ. ನೀರೊಳ್ ಹೋಮಂಗೆಯ್ದೊಲ್ ವ್ಯರ್ಥಮಪ್ಪುದೆಮ್ಮ ಸಾಸಂ ಚಣದೊಳ್ ಗಡ! ೨೧೦

ಧರ್ಮರಾಜಂ–ನೀನಿರ್ದೆಯೇಂ ಆಚಾರ್ಯರ ರಣಕಣದೊಳಂದು?

ಭೀಮಸೇನಂ–ಅಹುದು. ನಕುಲ ಸಹದೇವರಿರ್ದರೆನ್ನ ಬೆಂಬಲಕೆ. ಆದೊಡಂ ಆಚಾರ್ಯನ ಅಟ್ಟಹಾಸಮೆ ಅಟ್ಟಹಾಸಂ! ಬಲ್ಪುಮೆ ಬಲ್ಪುಂ! ಕಣ್ತುಂಬ ನೋಡಲಕ್ಕು ಆ ಪುರುಡಂ!

ಕುಂತೀದೇವಿ–ಅಹ, ಗುರುತನದ ಪೆರ್ಚಿಂಗೆ ಪಳಪತಿಪಟ್ಟಂಗೂಡಿ ಬೊಮ್ಮಾಂಡಂ ಬೊಮ್ಮಾಂಡಮುಂ ಕೂಡಿದಂತಾಯ್ತು ಗಡ!

ಆಗಳಾ ಭೀಮಸೇನಂ ಅಟ್ಟಹಾಸದಿಂ–ಓ! ನಿಕ್ಕುವಂ, ನಿಕ್ಕುವಂ! ಎಂದು ವಿನೋದ ಗೋಷ್ಠಿಯೊಳೆಂತಂತು ವಿನೋದವಾಡಿ ನುಡಿದಂ–ಕೌರವನುಪ್ಪೇಂ ಕಮ್ಮಿಯದೇಂ ಅಣ್ಣಯ್ಯ? ೨೨೦

ಆ ಮಾತಿಂಗೆ ಕುಂತೀದೇವಿ ಪೆರ್ಮೆಯಿಂ ಮೊಗಮಂ ನಿಳುಪಿ
ಕೈವೆರಳ ಲಟಿಕೆಯಂ ಮುರಿದು—ಕಂದ ! ನೀಂ ಕುಲದೀಪಕಂ.
ನಿನ್ನಿಂದೆಮ್ಮ ಕುಲಕೀರ್ತಿ ಬೆಳಗಲಕ್ಕುಂ ಎಂಬುದಂ ಮರೆಯದಿರ್.

ಆಗಳ್ ಕುರುಕ್ಷೇತ್ರದೆಡೆಯಿಂ ಬೆಳ್ನವಿರ ಕೆದರ್ದಲೆಯ ವೃದ್ಧೆ
ಯೋರ್ವಳ್ ಕಂಬನಿಯಂ ಸುರಿಸುತುಂ ಎರ್ದೆಯಂ ಪೊಯ್ದು
ಬೋರಿಟ್ಟಳುತುಂ ತೂರಾಡಿ ತಾರಾಡಿ ಕುಸಿದು ಬೀಳ್ವಂತೆ ಬರು
ತಿರ್ದುದಂ ಕಂಡು, ಈರ್ವರುಂ ಅವಳ ಪತ್ತೆಸಾರ್ದು ನಲ್ಮಾತುಗಳಿಂ
ಬೋಳೈಸಿ ತಳ್ಕೈಸಿ ಏನುಮೇನೆಂದೆನಲ್ ವೃದ್ಧೆ ಕಡುಸಂಕಟದಿಂ ೪೨೦
ಕೇಳಿಸಿದಳ್—ತಾಯೆ! ಕೆಟ್ಟೆಂ, ! ಕೆಟ್ಟೆಂ! ದೆಸೆಗೆಟ್ಟೆಂ! ಅಕ್ಕಟಾ !
ಎನಗಿನ್ನಾರ್ ಗತಿ? ಇದ್ದೊರ್ವಕುವರಂ ರಣರಂಗದ ಪೆಮ್ಮಾರಿಗಳ್ಗೆ
ತುತ್ತಾದನೈ! ಹಾಂ, ಎಂತು ತಾಳ್ವೆಂ? ಎಂತು ಬಾಳ್ವೆಂ ?

ಕುಂತೀದೇವಿ–ತಂಗೀ ಸೈರಿಸು.

ಆಗಳಾ ವೃದ್ಧೆ ಪಿರಿಯಬ್ಬೆಯ ನುಡಿಯಂ ಮಾನಿಸಿ—
ಅಮ್ಮಯ್ಯ ! ಏಂಗೆಯ್ಯಲಿ ? ಗತಿಯೇವುದೆಮಗೆ ? ಮಡದಿ
ಮಕ್ಕಳ್ಗೆ........

ಅಭಿಮನ್ಯು—ತಾಯೆ! ಅಳಲದಿರ್ ಮುಂಬಟ್ಟೆಯಂ ನಾಮೆ
ತೋರ್ವೆಂ. ನೀಂ ಸಂಕಟಗೊಂಡು ಗೋಳಿಡುತ್ತೆ ಕಿರಿಯರ್ಗೆ ಬಟ್ಟೆ
ಗೆಡಿಸದಿರ್. ಏಂ ಒದವಿದೊಡಂ ಸಹಿಸವೇಳ್ಕುಂ. ೪೩೦

ವದ್ಧೆ—ಆಯ್ತು ಮಹರಾಯ! ನಾಡಿನೇಳ್ಗೆಗೆ ಬಲ್ಲಿದರೇಳ್ಗೆಗೆ
ಒಳ್ಳಿದರೇಳ್ಗೆಗೆ ಪತ್ತುರ್ಭಕನಂಬೀಳ್ಕೊಟ್ಟುದಾಯ್ತು ! ಇಂ ನೋ
ಯೆಂ, ಬೇಯೆಂ, ನಾಡದೇವಿಗೆ ಕೈಮುಗಿವೆಂ !

ಕುಂತೀದೇವಿ—ತಾಯೆ! ನಿನ್ನ ಧೈರ್ಯಸ್ಥೈರ್ಯಕ್ಕೆ ಮೆಚ್ಚಿ
ದೆಂ. ನಿನ್ನ ಮುಮ್ಮಕ್ಕಳ್ಗೆ ಶುಭಮಕ್ಕೆ !

ಅಭಿಮನ್ಯುನ್ಯಂ–ನಲ್ಮೆಯಿಂದವಳ ತೋಳಂ ಪಿಡಿದು–ಬಾ, ತಾಯೇ ! ಒಳಗೈತಂದು ವಿಶ್ರಮಿಸು.

ವೃದ್ಧೆ–ಈಗಳಾಗದೈ ಕಂದ! ಆನುಮೆನ್ನ ಮುಮ್ಮಕ್ಕಳಂ ಕಾಣಲ್ಕೆ ಬೀಡಿಗುಯ್ವೆಂ.

ಅಭಿಮನ್ಯುಂ–ಆಯ್ತಾಯ್ತು. ನೀಂ ನಡೆ, ಆಂ ಬಂದಪೆಂ ನಿನ್ನೊಡಂ. ೪೪೦

ಅಂತೆಂದ ಅಭಿಮನ್ಯು ಮುತ್ತಬ್ಬೆಯೊಡಗೂಡಿ ಅವಳ ಬೆಂಬಳಿಯೆ ನಡೆದು ಬೀಡಂ ಮುಟ್ಟಿಸಿ ಮಡಿದನ ಮಡದಿ ಮಕ್ಕಳಂ ನಲ್ವಾತುಗಳಿಂ ಸಂತೈಸಿ ಪಿಂದಿರುಗಿದಂ ನೆಲೆವೀಡಿಂಗೆ.

ಅಭಿಮನ್ಯು–ಬಿಸುಸುಯ್ದು ಯೋಚಿಸುತುಂ ಭಾವಿಸುತುಂ ಮನದೈಸಿರಿಯಂ ಪೆರ್ಚಿಸಿ ಮುತ್ತಬ್ಬೆಗಿಂತೆಂದಂ–ಇಂತಿಂತೋರೊಂದು ಬಾಳ್ಮೆಗಳ್ ನಂನಮ್ಮ ವೈರದಿಂ ದುರ್ಗತಿಯೊಳ್ ಮುಗಿಬಗಿಯಾಗಿ ನಾಡು ಪ್ರಾಣಸಂಕಟಂಬಡುತಿರೆ ಆನುವಿಂತುಳಿದಿರ್ಪುದು ಲಜ್ಜೆಗೇಡಲ್ತೆ? ಮುಂಬರ್ಪ ದಿನಂಗಳೊಳ್ ಆಂ ಮುನ್ನುರ್ಗಲ್ ಅಣಿಗೊಳ್ವೆಂ.

ಕುಂತೀದೇವಿ–ಕಿರಿಯರ್ಗೆ ದುಡುಕು ಮುಂದಲ್ತೆ? ದುಡುಕುಂ ಆತುರ ಕಾತರಂ ಮೈಸೊರ್ಕುಂ ರಣದುಜ್ಜುಗಮುಂ ಪಾಳ್ಗೆಡಿಕುಂ. ಕಂದ! ತಾಳ್ಮೆ ಬಲಿವನ್ನೆಗಂ ಬಲ್ಪು ಬಲಿವನ್ನೆಗಂ ಬಿಜ್ಜೆ ಬಲಿವನ್ನೆಗಂ ತಾಳ್ದೊಡೆ ನೂರ್ಕಾಲಂ ಬರ್ದುಂಕಿ ಕೀರ್ತಿಯ ಶಿಖರಮುಂ ಏರ್ದು ಲೋಕದೊಳ್ ಪೆಸರುಳಿವುದು ಕಣಾ ! ೪೫೦

ಅಭಿಮನ್ಯು–ತಾಂ ನಿಚ್ಚಂಮೆರೆವ ಸರಸದ ಮಾಳ್ಕೆಯಿಂ ಬಿನ್ನಯಿಸಿದಂ–ತಾಯೆ, ನೀಮೆಲ್ಲರುಂ ಸಂಕೆಯ ಬಿಗುರ್ಪಿನಂಕೆಯೊಳ್ ಮನವಿಟ್ಟುದುದರಿಂದಲ್ತೆ ಪಿಂಜರಿಕೆಯ ಕಾರಣಂ? ಈಗಳೆನಿತೊಂದು ಯೋಧರುಂ ಪಟುಭಟರುಂ ಮುನ್ನುಗ್ಗಿ ರಣರಂಗದಗ್ಗಿಯೊಳ್

ಸುಟ್ಟುರಿದು ಕರಿಮುರಿಯಾದರಲ್ತೆ? ಅವರ ಬಾಳ್ಕೆಯುಂ ಕಮ್ಮಿ
ಯುದೇಂ? ಎಲ್ಲರೊಳ್ ನಾವಿರಲಕ್ಕುಂ, ಮತ್ತೇಂ ಅಂಕೆಸಂಕೆ ? ४೬೦

ಕುಂತೀದೇವಿ–ಈಗಳವಸರಿಸಿ, ರಣರಂಗಮಂ ಪುಗುವ ಕತ
ಮೇಸಿರ್ಕುಂ ? ಪುಗಲ್ ಪದಮೊದವಿದೊಡೆ ಪೋದರಾಯ್ತು.

ಅಭಿಮನ್ಯು ಸಂತಸದಿಂದುರ್ಬಿ–ಲೇಸುಲೇಸೈ ಅಜ್ಜೆ ! ಅಂ
ತಪ್ಪೊಡಿನ್ನುಂ ಸಿದ್ಧನಿರ್ಪೆಂ, ಕತಮೊದವಿದೊಡೆ ಮಾರಾಂತು
ಸುಗ್ಗಲ್.

ಕುಂತೀದೇವಿ–ಮಗನೆ ! ನಿನ್ನಂ ಮಾತಿನೊಳ್ ಗೆಲ್ಲೆಂ. ಆ
ದೊಡಂ ಪೇಳ್ವೆಂ, ಪುರ್ಚಿಂಗೆ ಮಣಿಯದಿರ್. ಪುರ್ಚುಮೆಂದೆಂದುಂ
ಪುರ್ಚೆ. ಬಲ್ಪುಮೆಂದೆಂದುಂ ಬಲ್ಪೆ.

ಅಭಿಮನ್ಯು ಪರಿಹಾಸ್ಯದಿಂ ಸಡಗರದಿಂ ಮೈವೆರ್ಚಿ ಮುದ್ದು
ಮೊಗದೊಳ್ ಎಳೆ ಮುಗುಳಂ ಅರಳ್ಚಿ ಇಂತೆಂದಂ–ಮುತ್ತಜ್ಜೆ !
ಅಂತಾದೊಡೀಗಳ್ ಎನ್ನೊಳಿರ್ಪುದು ಪುರ್ಚೋ, ಬಲ್ಪೋ? ४೭೦

ಕುಂತೀದೇವಿ–ಪಾಂಡು ಕುಲಜರೊಳ್ ಬಲ್ಪಿಗೇಂ ಕೊರಂ ?
ಬಲ್ಪುಂಟು, ಬಲ್ಪಿನಿಮ್ಮಡಿ ಪುರ್ಚು ನಿನ್ನೊಳುಂಟುಕಣಾ, ಉಂಟು!

ಅಭಿಮನ್ಯು ಮಂದಹಾಸಂ ಬೀರ್ದು–ಬಲ್ಪಿನೋಜೆಯೊಳ್
ಪುರ್ಚಂ ಪೊಯ್ಯುಬಡಿವೆನೆಂದು ತನ್ನೊಳ್ ವಾಚಿಸಿಕೊಂಡಂ.
ತಂಗಾಳಿಯ ತೀಟದಿಂ ಮುಂಬಂದ ಮುಂಗುರುಳಂ ತೀವಿ ಪಿಂತಿಕ್ಕಿ
ಬಿಲ್‌ಬಿಜ್ಜೆಯ ಬಲ್ಪಿನ ಕಟ್ಟುಬ್ಬರದ ಓಜೆಯೊಳ್ವೆಳಗಿ, ಕೆಚ್ಚುಂ
ನನ್ನಿಯುಂ ಒಗ್ಗೂಡಿದ ಸಿರಿಪೊಳ್ತಿನೊಳ್ ಮನವೆರ್ಚಿ ಮಂತ್ರ
ಮುಗ್ಧನಾದಂ ನಾಗರನೊಲ್.

ಚಿತ್ರದಂಬರದೊಳ್ ಲೋಕದಿಂ ಲೋಕಾಂತರಕ್ಕೈದುವ

ತೆರದಿಂ ಸಾಯಿರ ಸಾಯಿರ ಕಪೋತಂಗಳ್ ದಂಡುಂಗೊಂಡು ಪೊಂ
ಬಿಸಿಲ ಪೊಳಪಿಂಗೆ ಮಿರುಮೆಯ್ಯಂ ಹಿಗ್ಗಲಿಸಿ ಅತ್ತಮಿತ್ತಂ ನೆರೆಸು ೪೮೦
ತ್ತಾಡಿ ಅಂಕೆಸಂಕೆಯಿಲ್ಲದೆ ಸಂತಸದಿಂ ಸರಸದಿಂ ಕೊರಳ್ದನಿಯಂ
ಪರಿಸಿ ಗಾಡಿಯ ಮೋಡಿಯ ಸಂಮೋದದಿಂ ಪಾರ್ದು ಪೋಪುದುಂ
ಸ್ವಾತಂತ್ರ್ಯದ ಸವಿಯಂ ಸವಿಯುತುಂ.

ಅಭಿಮನ್ಯು ಸಂತಸಂದಾಳ್ದು ಮನದ ಆತುರಕಾತರಮಂ
ಬದಿಗೊತ್ತಿ ಕಪೋತಂಗಳ ಕೊರಳ್ದನಿಯಿಂ ಕೊಡಂಕೆಯುಂ ತಣಿ
ವನ್ನಂ, ಒಗ್ಗಟ್ಟಿನ ಸವಿಯುಂ ಎರ್ದೆಯಂ ತುಂಬುವನ್ನಂ
ನೋನೋಳ್ಪ ಕಣ್ ತಣಿವನ್ನಂ ಕೊರಳೆತ್ತಿ ನೋಡುತುಂ ತನ್ನೊಳ್
ತಾಂ ನುಡಿದನಿಂತು–ವೈರಮಿಲ್ಲದ ಬಾಳ್ಮೆಯಿರ್ದೊಡೆಂತು ಸೊಗ
ಮಿರ್ಕುಮಿಾ ಬಾಳ್ಕೆ? ನಾಮುಂ ಘನತೆವೆತ್ತ ನಾಡೊಳಿರ್ದು ನಾಡೊ
ಡೆಯರಿರ್ದು ದೆಸೆಗೆಟ್ಟಿವಲ್ತೆ ? ಆವ ಚಣದೊಳ್ ಗ್ರಹಗತಿಯುಂ ೧೯೦
ಕೂಡಿ ನಾಡು ಮಡಿಗೊಂಡು ಶಾಂತಿ ನೆಲೆಗೊಳ್ವುದೊ ಅಂದು
ಎಲ್ಲರ ಬಾಳ್ಮೆ ಸಾರ್ಥಕಮಕ್ಕುಂ....

ಆ ವೇಳೆಯೊಳ್ ಧರ್ಮಜಂ ಅಲ್ಲಿಗೈತರಲ್ ಅಭಿಮನ್ಯು
ಮೊಗದೊಳ್ ಮಂದಹಾಸಂಮೆಳಗಿ ಬಲ್ಮೆಯಿಂ ಪುರುಪಿನಿಂ ಕೇಳಿಸಿದ
ನಿಂತು–ಬೊಪ್ಪ ! ಇನ್ನಾಂ ನಿಚ್ಚಂ ಅಯ್ಯನೊಡಂ ರಣರಂಗಮಂ
ಪುಗುವ ಯೋಚನೆಯೊಳಿರ್ಪೆಂ. ಇನ್ನೆಬರಂ ನಿಚ್ಚಂ ಎಡೆವಿಡದೆ
ಕಲ್ತು ಬಲ್ತು ಬಿಲ್ಲೋಜನಿರ್ಪೆಂ, ಅಯ್ಯನೆನ್ನ ಬಿಲ್‌ಬಿಜ್ಜೆಯಂ
ಮೆಚ್ಚಿರ್ಪಂ. ಆಂ ಪಿಂಜರಿಯದೆ ಬಲ್ಪಿನಿಂ ಕೆಚ್ಚಿನಿಂ ಪೊಣರ್ಕೆ
ಯೊಳ್ ಪೋರ್ವೆಂ. ಅರಿರಕ್ಕಸರಂ ಕೊಚ್ಚಿ ಕಂಡರಿಸಿ ರಣದೇವಿಗೆ
ಬಿರ್ದಿಕ್ಕಿ ನಾಡಿನ ಸಂಕಟಮಂ ಕಳೆದು ಲೋಗರ್ಗೆ ಶಾಂತಿ ಸಮಾ ೫೦೦
ಧಾನಮಂ ಬರಿಸುವೆಂ ; ಎನ್ನಂ ಪರಸಿ ಅಪ್ಪಣೆಯಂ ನೀಡಲಕ್ಕುಂ.

ಆ ಮಾತಿಂಗೆ ಧರ್ಮರಾಯಂ ಸಂತಸಪಟ್ಟು ನಲ್ಮೆಯಿಂ

ಬಲ್ಮೆಯಿಂ ಪೆರ್ಮೆಯಿಂ ಎರ್ದೆಗಪ್ಪಿ ಮುಂಡೆಯುಂ ನೀವಿ ನಗುವೊಗ
ದಿಂದೆಂದಂ–ಕುವರ! ಈಗಳೇನಿಂತವಸರಂ ? ರಣರಂಗದ ಬೆಸನಂ
ನಾಡಿನ ಪಿರಿಯರ್ಗಕ್ಕುಂ; ಚಂಡಭಟರ್ಗಕ್ಕುಂ; ನೀನುಮಿನ್ನುಂ
ಕಲಿಯಲಕ್ಕುಂ, ಬಲಿಯಲಕ್ಕುಂ, ಬಿಲ್ಲೋಜನಾಗಲಕ್ಕುಂ, ಅನಂ
ತರದೊಳ್ ಯುದ್ಧ ಬೆಸನಂ ಕಣಾ !

ಅಭಿಮನ್ಯು ಪುರುಡಿಂ ಉಬ್ಬೆಗದಿಂ ಬೀಗಿ ಕಲಿಯಾಗಿ ಆಕೆ
ವಾಳನೆಂತಂತು ದಿಟ್ಟತನದಿಂ–ಬೊಪ್ಪ ! ಮಾದೇವನಡಿಗೆ ಪ್ರಾಣ್ದು
ನುಡಿವೆಂ. ಎನ್ನಂ ಕಿರಿಯನೆಂದಸಡ್ಡೆಗೈಯದಿರ್. ನೀನೊರ್ಮೆ ೫೧೦
ಎನ್ನೆಲ್ಲ ಬಗೆವಗೆಯ ಬಿಲ್ಲೋಜೆಯುಂ ನೋಡಿ ಅರಿಯಲಕ್ಕುಂ.
ಇನ್ನೆಬರಂ ನೀವೆನ್ನ ಬಲ್ಪಿನ ಕಟ್ವಾಳ್ತನಮಂ ಅರಿಯದಿರ್ದುದ
ರಿಂದಲ್ತೆ ಅಂಕೆಸಂಕೆಯುಂ ?

ಧರ್ಮರಾಯಂ–ಅಪ್ಪುದು ಕುವರ ! ನೀನೆಳಯನೆಂದೆಂಬ
ಶಂಕೆಯುಂ ದಿಟಂ. ಏಗಳುಂ ತಾಳ್ಪುದೊಳ್ಳಿತು. ದುಡುಕಿ ಬಟ್ಟೆ
ದಪ್ಪಿದೊಡೆ ಬಲ್ಪಿನ ಬೀರತನಂ ವ್ಯರ್ಥಂ. ನಿಜಬಲ್ಪು ಬಲಿ
ವನ್ನೆಗಂ ಸೈರಿಸು ; ದುಡುಕದೆ ಸೈರಿಸು.

ಅಭಿಮನ್ಯು–ಇಂತೊಂದು ಪುರುಳಿಲ್ಲದ ಸಂಕೆಯಿಂ ಎನ್ನಂ
ಪಿಂತಿಕ್ಕಿ ಪೆಂಬೇಡಿಯೊಲ್ ಬರ್ದುಂಕಂ ವ್ಯರ್ಥಗೊಳಿಸದಿರ್.
ಇದಂ ದೆಖ್ವಾಳತನಮಲ್ತು. ನಿಜ ಬಲ್ಪಿನ ಪುರುಡುಂ. ೫೨೦

ಧರ್ಮರಾಯಂ–ಅಯ್ಯ, ಕುಮಾರ ! ನಿನ್ನೊಳಿಂತೇಂ
ಜಾವಳಮೊ ಆನರಿಯೆಂ. ಎಲ್ಲದರೊಳ್ ಹಿತಮಿತಮಿರ್ಕುಂ.
ಬಿಜ್ಜೆಯುಂ ಸಾಮಾನ್ಯಮೆ ? ಚಿಣ್ಣರ್ಗದು ಸಲ್ಗುದೇಂ ? ಅಂತು
ಮಲ್ಲದೆಯುಂ ನೀನಿದರೊಳ್ ತಲೆಗುಡುವ ಕತಮೇನಿರ್ಕುಂ ?
ಪಡೆಯೊಳ್ ಪಟುಭಟರಿರೆ ಬಿಲ್ಲೋಜರಿರೆ ನೀನಿಂತು ಅವಸರದಿಂ
ನುಗ್ಗುವ ಕತಮಿಲ್ಲಂ. ಜಾವಳದಿಂ ಜನ್ನಂ ಕೆಡುಗುಂ.

ಅಭಿಮನ್ಯು ಇದುಂ ಜಾವಳವುಲ್ತು, ಬೊಪ್ಪ ! ಬಲ್ಪಿನ ಪುರುಡು....ಬಲ್ಪಿನ ಬೀರರೆಂತಂತು ಚಂಡರ ಚಂಡರೆಂತಂತು ಅನುವುಲ್ತೆ ? ಬೊಪ್ಪ ಆನೆಳಯನಲ್ತು, ಅರಿರಕ್ಕಸರಂ ಮದ್ದಾನೆಯೊಲ್ ಇದಿರ್ಚಿ ಪೋರ್ದು ಕೊಚ್ಚಿ ಇಕ್ಕಡಿಗೆಯ್ದು ರುಂಡ ಮುಂಡಂಗಳಂ ದಿಂಡುರುಳ್ಚುವೆಂ. ನೀಂ ಸಂಕೆಯುಂ ಬಿಟ್ಟು, ಎನಗಪ್ಪಣೆಯುಂ ನೀಡಲಕ್ಕುಂ. ೫೩೦

ಧರ್ಮರಾಯಂ–ಅವಸರಿಸದಿರ್ ಕಂದ ! ನಿನ್ನ ಪುರುಡು ಎಳತನದ ಪುರ್ಚು.

ಅಭಿಮನ್ಯು–ಬೊಪ್ಪ ! ಅಂತೆನ್ನದಿರ್.

ಧರ್ಮರಾಯಂ–ಮತ್ತೇನೆನಲಕ್ಕುಂ ?

ಅಭಿಮನ್ಯು–ಪೋಗಿ ಬಾರೆಂದು ಪರಸಿ ರಣವೀಳ್ಯವಂ ನೀಡಲಕ್ಕುಂ !

ಧರ್ಮರಾಯಂ ನಗುನಗುತುಂ–ನೀಂ ಬಲ್ ಹಟವಾರಿಯಲ್ತೆ ? ೫೪೦

# ನವಮಾಶ್ವಾಸಂ

ಮುಂಜಾವದ ನಿಡುವೊಳ್ತು ಪಸರಿಸಿ ತಣ್ಪಿನ ಮಂಜಿನ ಶೀತಲತೆಯಂ ಮಿಾರ್ದುರ್ಗ ಸೊಗಯಿಸಿದತ್ತು ಪತ್ ಶಾಂತಿಯಂ ಸೂಸಿ. ಬಿತ್ತರದ ಗಗನ ಭಿತ್ತಿಯೊಳೊತ್ತಿ ಕೋಟಿ ಕೋಟಿ ಶತಕೋಟಿಗಿಂ ಮಿಗಿಲಾಗಿ ಮೈಯೊಡೆದು ತಳತ್ತಳಿಪ ಬೆಳ್ಳಿಯ ಚುಕ್ಕಿಗಳಂ ಕಡೆಗಣ್ಚಿ ದಿಸೆದಿಸೆಯೊಳ್ ತೆಕ್ಕನೆ ಪೊದಳ್ದ ಧೂಮಕೇತುಗಳ್ ಮೈವೆರ್ಚಿ ಹೊನ್ನಿನ ಜಾಲದ ಗಾಡಿಯ ಮೋಡಿಯ ಚಿತ್ತಾರದೊಳ್ ಆವರಿಸಿದಂ ನಭನೀಲಿಯಂ. ಇಂತು ಮುಂಚಿವಂದ ಘೋರರೂಪಂ ಕಂಡು ಭಯಭೀತಿಯಿಂದಾವರಿಸಿ ನೆಲೆವಿಟ್ಟುರುಳ್ದುವೊ ಎನೆ ಆಗಳಾಗಳುಂ ಉಲ್ಕಾಪಾತಂಗಳಾಗೆ ಪೊನ್ನಿನ ಸರಿ ಸುರಿದಂತೆವೊಲ್ ತಿರೆಯ ಮುಡಿಲಿಂಗೆ. ೧೦

ಅಹ, ಆಗಳೇಂವೇಳ್ವೆನೋ ವನಮೃಗಂಗಳ್ ಬೆದರಿ ಮರಗಿಡಗೆಂಟಿಗಳೊಳ್ ಗವಿಬಿಲಂಗಳೊಳ್ ಹುದುಂಗಿ ಮಿಳ್‌ಮಿಳ್ಳನೆ ಕಣ್ಣರಳ್ಚಿ ನೋಡುತಿರ್ದುವು ತಮ್ಮೊಂದು ನಿಡುವಾಳ್ಕೆಯ ಬಿನದಕ್ಕೆ, ಸಡಗರದ ನೋಂಪಿಗೆ ಆವಾವ ಭಂಗ ಬವಣೆಯುಂ ಬಂದಪುದೊ ಎಂದೆಂಬ ಸಂಕೆಯುಂ ಪೆರ್ಚೆ.

ಇತ್ತ ನಾಡೊಳ್ ಮನಮುಳ್ಕಿದ ಲೋಗರ್ ಶಾಸ್ತ್ರಕೋವಿದರಂ ಮರೆವೊಕ್ಕು ಶಾಸ್ತ್ರವನಾರೈದು ಇಂತೀ ಗ್ರಹಗತಿಯಿಂದಾವಾವ ಸುಕದುಕ್ಕಂ ಬಂದಪುದೆಂದು ಕಣಿಯಂ ಕೇಳಿಸಿದರ್ ಬರ್ದುಂಕಿನೊಳ್ ನೆಗಳ್ತೆವೊಡೆಯಲ್.

ತಣ್ಣನೆಯ ತನಿವೊಳ್ತಿಂ ತನುಮನಂ ತವಿಯೆ ಮುನಿಜನಂ ೨೦
ಪುಣ್ಯತೀರ್ಥದ ಪತ್ತೆಸಾರ್ದು ಪ್ರಾತರ್ವಿಧಿಯಂ ಮುಗಿರ್ಚಿ
ಮಿಂದು ಮಡಿಯುಟ್ಟು ಮಂತ್ರಂ ಜಪಿಸಿ ತಪಂಗೆಯ್ದು ಕ್ಷೇತ್ರನಿಧಿ
ಯೊಳ್ ಮಾನಂಪೆರ್ಚೆ ಜಾನಂಪೆರ್ಚೆ ಸಕ್ಕದ ಸಕ್ಕರೆಯ ತನಿರಸ
ದೊಳ್ ಮಹಾಭಾರತ ಕಥಾ ಮಂಜರಿಯಂ ವಿರಚಿಸುತಿರ್ದರ್
ತನುಮನಂ ತಣಿವನ್ನಂ. ಪೊಳ್ತು ಒಯ್ಯೊಯ್ಯನುರುಳ್ದು ಮೂಡಣ
ದೊಳ್ ಮುಂಬೆಳಕು ಮೂಡುವ ಮುನ್ನಂ ನಕ್ಷತ್ರಂಗಳ ಸಂದೋಹಂ
ಕರಂಗಿ ಧೂಮಕೇತುಗಳ್ ನೈಗರೆಯಲೊಡಂ ಕಳ್ತಲೆ ಕಾವಳಿಸಿ
ಭಯಮಟ್ಟುವೊ ಎನೆ ಊಳಿಟ್ಟುವು ನರಿನಾಯ್ಗಳ್ ನಾಲ್ದೆಸೆಯಿಂ.
ಆಗಳ್ ಅಂತಪ್ಪುದೊಂದು ಜಂಕಣೆಯಿಂ ಗಿಡುಮರವಳ್ಳಿಗಳೊಳಿರ್ದ
ಹಕ್ಕಿಗಳ್ ಬೆದರಿ ಎರೆಂಕೆಯೊದರಿ ಅತ್ತಮಿತ್ತಂ ಕಣ್ಮರಳಿಸಿ ೩೦
ನೋಡುತುಂ ಕಳ್ತಲೆಯ ಮರ್ಬಿನೊಳ್ ಜಂಕಣಿಸಿರ್ದ ಸಲ್ಲದ
ಪೊಲ್ಲದ ಹಂಹಳಿದಳವಗ್ಗಿನ ಬಲ್ಪಿನ ಪೊಲೆಗನುಂ ಕರ್ವೆಕ್ಕೊ ಕರ್ವೇ
ಡನಿಕ್ಕೆರ್ ಆರಿರ್ಕುವೆಂದು ಕಳಕಳಿಸಿದಂ ಮನದೊಳ್.

ಮತ್ತಮಾಗಳಿಗೆಯೊಳ್ ಮುಗುಳ್ವಪೊಂಗೇದಿಗೆಯಿಂ, ಪಾರಿ
ಜಾತದಿಂ ನಸೆಕೊನೆಯೇರಿದ ಸುರಿಯಿಯಿಂ, ಅರೆಯುರಳ್ದ ಸಂಪಿಗೆ
ಯಿಂ, ಪೂತ ಮಂದಾರದಿಂ, ಮೊಲ್ಲೆಯಿಂ, ಸಿರಸದಿಂ, ಬಕುಳದಿಂ
ಪೊದಳ್ದ ನರುಗಂಪಂ ಪೀರ್ದು ಸೊಗಯಿಸಿದ ಖುಷ್ಯಾಶ್ರಮ ಪವನಂ
ಒಯ್ಯೊಯ್ಯನೆ ಸಂಚರಿಸುತ ಎಲ್ಲೆಡೆಯುಂ ಸುಳಿದು ಪಳಂಚಲೆಯೆ
ವಿಪಿನಾಂತರಂ ಘಮಘಮಿಸಿದುದು ಭ್ರಮರಂಗಳ್ ಬೆಮೆಗೊಳ್ವಂತೆ;
ದಟ್ಟಡವಿಯ ಗಿಡುಮರಬಳ್ಳಿಗಳುಂ ಪಚ್ಚಪಸುರಿನ ಜವ್ವನಿಗರೆನೆ ೪೦
ಸೊರ್ಕುಗುವ ರಂಗುರಂಗಿನ ಎಳೆದಳಿರ್ಗಳಿಂ, ಮಣಿಮಣಿವೆತ್ತ
ಮಿಡಿಗಳಿಂ, ಪಸುರ್ವೆತ್ತ ಕಸುಗಾಯಿಗಳಿಂ, ಬಣ್ಣವೊರೆದ ದೋರೆ
ವಣ್ಗಳಿಂ, ರಸಗಟ್ಟಿ ರಂಗುಗುವ ತನಿವಣ್ಗಳಿಂ ತುಂಬಿದ ಸಸ್ಯಂ
ಎಲ್ಲಿಯುಂ ಇಲ್ಲವೆಂಬವೊಲ್ ಘನತೆವೆತ್ತುದು ಸಾನುಪ್ರದೇಶಂ ;
ಮತ್ತಂ ದಿನದಿನಂ ಬಾಡಿ ಸುರಂಗಿ ಸುರುಂಟೆ ತಿರೆಗುರುಳ್ದ ತರತರದ

ಪೂವಳಿಗಳಿಂ ಚಿತ್ರಮಯಮಾಗಿರ್ದುದಾ ಪುಣ್ಯಭೂಮಿ; ಮೇಣ್
ತನ್ವಂಗಿಯೆಂತಂತು ತಳ್ಕಿ, ಮೃದ್ವಂಗಿಯೆಂತಂತು ಅಳ್ಕಿ, ಕೃಷೋ
ದರಿಯೆಂತಂತು ಬಳ್ಕಿ ತಲೆಯಂ ಅತ್ತಮಿತ್ತಂ ತೂಗುತುಂ ಬಾಗುತುಂ
ಸೂಳ್ಗೆವಂದ ಕಾದಲೆಯೆಂತಂತುಂ ಗಿಡುಮರಗಳನಪ್ಪಿಯುಂ ಸುಳಿ
ಸುತ್ತಿಯುಂ ತಬ್ಬಿಯುಂ ಮುದ್ದಿಕ್ಕಿಯುಂ ಮಿಡಿವೊಗ್ಗು ಪೂವು ೫೦
ಗಳಿಂ ತುಂಬಿ ಮೈವೆರ್ಚೆ ಪಚ್ಚರಂಗಿನಿಂ ಮಡಲ್ತೆಸಗುವ ನಿಡು
ವಳ್ಳಿಗಳ್ ಎಲ್ಲೆಡೆಯುಂ ಕಣ್ಗೆಸದಂ.

ಮೂಡುವೆಟ್ಟಿನ ಮೇಗಡೆ ಮುಂಬೆಳಗು ಮಲರ್ದು ಮೆಲ್ಲ
ಮೆಲ್ಲನೆ ಮೇಲೇರ್ದು ಬೆಳಗಿಪುದು ಮೂಜಗಮಂ. ನೀರುಣದೆ
ಬೆಳರ್ತು ಬೆಂಡಾದ ಪೆರ್ಮುಗಿಲ್ಗಳ್ ಬಾಂಬೊಲದೊಳ್ ಅಂಡಲೆಯು
ತಿರ್ದುವು ನೇಸರೇಳ್ಗೆಯಿಂ ಚೆಂಬಿಸಿಲ ಚುಂಬನದಿಂ ಮೈವೆರ್ಚೆ.
ತೆಕ್ಕನೆ ಕುಳಿರ್ಗಾಳಿಯುಂ ಕನಲ್ದುವೊಲ್ ರೊಯ್ಯನೆ ಬೀರಿ ಬರೆ
ಬೆಟ್ಟು ಬೆಟ್ಟುಗಳಂ ತಟ್ಟಿ. ಮರಮರಂಗಳಂ ಜಡಿಕುಟ್ಟಿ ನೂಂಕಿ ದಿಸೆ
ದಿಸೆಗವ್ವಳಿಸಿ ಮಾರಾಂತು ನುಗ್ಗಿ ಬರಲ್ ಆವ ದುಕ್ಕ ಬಾರ್ತೆಯುಂ
ಪುದುಂಗಿರ್ಕುಮೊ ಎನೆ ವಿಚಿತ್ರಗಾವರಂ. ಮತ್ತಂ ಮಾಮರದ ಸಿಡು ೬೦
ಗೊಂಬೆಯ ನೆತ್ತಿಯೊಳ್ ತೇನೆವಳಗಂ ಕಲೆತು ಆವ ದುಕ್ಕದಗ್ಗಿಯಿಂ
ಸುಟ್ಟುರಿದು ಗಾರುಗೆಟ್ಟುದೊ ಎನೆ ಪಲುಂಬಿ ಪಳಯಿಸುತಿರ್ದುದು
ಚೀರ್ದನಿಯಿಂ. ಇಂತಿಂತು ದುಕ್ಕ ದುಮ್ಮಾನಗಳಿಂ ಪೊದಳ್ದ
ಪುಸ್ಯದ ಪೊಳ್ತರೆಯುಂ ಗಳಿಗೆಗಳಿಗೆಯಿಂದೇಳ್ಗೆವೆತ್ತು ಕಾಡುಂ ನಾ
ಡುಂ ಚೆಚ್ಚರದಿಂದೆಳ್ಚತ್ತಿರೆ, ಪಾಂಡವರುಂ ಅಸವಸದಿಂ ಗಡಬಡಿಸುತ್ತಂ
ರಣಾಂಗಣಕೆ ಪೋಪವಸರದೊಳ್ ತಂತಮಗೆ ಮೊನೆಗೊಪ್ಪುವ ಅಸ್ತ್ರ
ಶಸ್ತ್ರಗಳನಾಯ್ದು ಕಿರೀಟಕುಂಡಲಗಳಿಂದೊಪ್ಪಿ, ಮುಂಗುರುಳನೊ
ಪ್ಪದಿಂ ತರುಬಿ ಸೈತು ನಡುನೆತ್ತಿಯ ಚೊಕ್ಕ ಮುಡಿಗೆ ಬಂದುಗೆಯ
ಪೂಮಾಲೆಯಂ ಸುತ್ತಿ ಮಿಸುವನೊಸಲೊಳ್ ತಿಲಕವೊತ್ತಿ ಬೀರ
ಪೇಸೆಯನಿಟ್ಟು, ಗಂಧಮಾಲ್ಯಾದಿಗಳಂ ಧರಿಸಿ ಬೀರರುಂ ಬಿಗುರ್ವ ೭೦
ರಿಜನಂ ಮಿಸಾದ್ದು ಶಂಖಮಂ ಬೊಬ್ಬರಿಯೂದಿ, ಸಿಡಿಲಿಂಗೆ ಮುನ್ನೀ

ರ್ವಂಕೆಗೆ ಬೆಂಗದಿರಂಗೆ ಇರ್ಮಡಿಕಾಯ್ಪಿನಿಂ ಮಾಮಸಕದಿಂ ಮಸಗಿ
ಕೊಳುಗುಳಕಂ ಅಣಿಯಾಗುತಿರೆ ಕುರುಕ್ಷೇತ್ರದಿಂದೈತಂದ ಸಮಸಪ್ತ
ಕರ ದೂತರ್ ಅಂಕೆಸಂಕೆಯಣಮಿಲ್ಲದೆ ವೈಕೊರ್ವಿನಿಂ ಸೊರ್ಕಿನಿಂ
ಬಿಂಕದಿಂ ಬೀಗಿ ಫಲ್ಗುಣನಂ ತಾಗಿ ಕೇಳಿಸಿದರಿಂತು–ಎಲೆರಾಯ!
ಇನ್ನುಮಿನ್ನು ನಿನ್ನ ಬಿರುದು ಬಾವಲಿಗಳಂ ಕಟ್ಟಿಡಲಕ್ಕುಂ ! ನಿನ್ನ
ಶೌರ್ಯಾಟೋಪಮಂ ಬದಿಗಿಟ್ಟು ಕೊಳುಗುಳಕೆ ಬೆಂಗೊಟ್ಟು ಮುರ
ಹರನಂ ನೂಂಕಿ ಜವಹರನಂ ಪಿಡಿಯಲಕ್ಕುಂ ! ಈಗಿಂದೀಗಳೆ ಕುಲ
ದೈವಮಂಧ್ಯಾನಿಸಿ ಸದ್ಗತಿಯನಾರೈಸೆ ಇಂದ್ರನಿತ್ತ ಗಾಂಡೀವಮಂ,ಮು
ಕ್ಕಣ್ಣನಿತ್ತ ಪಾಶುಪತಾಸ್ತ್ರಮಂ ಕೈಕೊಂಡು ಪೊರಡೈ! ಇಂದು ವೈ ೮೦
ಗೊಂಡು ನೆಲೆಗೊಂಡ ಪದ್ಮವ್ಯೂಹಂ ವೃಕೋದರ ಮಾದ್ರೇಯರ್ಗೆ
ತಗದು ಕಣಾ! ನೀನಿದಂ ಪುಗುವ ಮುನ್ನಂ ಸಮಸಪ್ತಕರನೆದುರ್ಚಿ
ಕಾದಿ ಪೋದಿ ಕಡೆಗಾಲಕೆಂತಂತು ಜಡಿಪಾರ್ದು ಚೀರ್ದು ಪೇರಾ
ನೆಯ ಕಾಲ್ತುಳಿತಕ್ಕೆ ಸಿಲ್ಕಿದ ನಾಯಂತೆಯುಂ ಬಾರ್ದು ಮಡಿಯ
ಲಕ್ಕುಂ! ಸಮಸಪ್ತಕರ್ ಬಡಗ ದಿಕ್ಕಿನೊಳ್ ಕೂರ್ವರ್ಗಳ್ ಸಹಿತಂ
ಕಾದಿರ್ಪರ್ ನಿನಗಂ! ನೀನವರಂ ಇದಿರ್ಚಿ ಮಂಡೆಯೊಡೆದು ಕೆನ್ನೆ
ತ್ತರ್ ಕಾರಿ ಬೆಟ್ಟು ಜರಿದಂತೆ ಜರಿಯಲಕ್ಕುಂ !

ಆ ನುಡಿಯಂ ಕೇಳ್ದ ಫಲ್ಗುಣಂ ತೆಕ್ಕನೆ ಕನಲ್ದು ಕಿಡಿಕಿಡಿಯಾ
ದೊಡಂ ತನ್ನಂ ತಾನೆ ಸೈತಿಟ್ಟು ದೂತರಂ ಕೊಂಡೇಂ ಮಾತೆಂದವರ
ಕಳಿಪಿ,ಮುಂದೇಂಗೆಯ್ಯಲಕ್ಕುಮೆಂದು ಯೋಚಿಸುತುಂ ಶ್ರೀಕೃಷ್ಣನ ೯೦
ಪತ್ತೆಸಾರ್ದು ಜಾನದಿಂ ಬಲ್ಮೆಯಿಂ ಭಕ್ತಿಯಿಂ ಕಣ್ಮುಗಿದು ಕೈ
ಮುಗಿದು ಕೇಳಿಸಿದನಿಂತು–ಹೇ, ವಾಸುದೇವ! ದ್ರೋಣಾಚಾರ್ಯರ
ಪುರುಡಿಂ ಕುನ್ನಿಕೂಳರ್ ಸಿಂಗಂಗಳಾಗಿ ಕೊರ್ವಿ ಜರ್ವಿ ಜಂಕಣಿಸಿ
ಮುಂದೆಮಂದು ಸರಸಮಾಡುತಿಹರ್. ಇತ್ತಂ ಸಮಸಪ್ತಕರ್ ಬಡಗಣ
ದೊಳ್ ಗಡಣಿಸಿ ಕಾಲ್ಕೆರೆದು ಜುದ್ದಕ್ಕೆ ಕರೆಕೊಟ್ಟಿಹರ್. ಅತ್ತಂ
ಪದ್ಮವ್ಯೂಹಂ ಅರಿರಕ್ಕಸರಿಂ ತುಂಬಿ ಪೊತ್ತುರಿವಗ್ಗಿಯೊಳ್ ನೆಯ್ಯ

ನೆರೆದಂತು ಧಗಧಗಿಸಿ ಕೈ ಮುಸೆಯುತಿರ್ಪುದು. ಈಗಳ್ ನಾವೆತ್ತ ಪೋಕುಂ ? ಆಂ ನಿಮ್ಮಿಂ ಮ್ಮಪ್ಪಣೆಯುಂ ಕಾದಿರ್ಪೆಂ.

ಶ್ರೀಕೃಷ್ಣಂ ಜಾನಂಬೊಕ್ಕು ಫಲ್ಗುಣನೆಂದ ಅಸವಸದ ನುಡಿ ಗಟ್ಟು ಕಿವಿಯುಂ ಪುಗುವ ಮುನ್ನಮೆ ಚೆಚ್ಚರದಿಂ ಮಾಂಜದುಸಿರಿ ೧೦೦ ನೊಳ್ ಭಕ್ತನಂ ಕಾಪಿಡುವೊಂದು ಧೈರ್ಯದ ಶಕ್ತಿಯ ಯುಕ್ತಿಯ ಪಾರದೊಳ್ ಮನಮಂ ನೆಲೆವಿಟ್ಟು ಯೋಚಿಸಿ ಬೆಳ್ನಗೆಯುಂ ಬೀರ್ದು ನುಡಿದಂ–ಅರ್ಜುನ ! ಇನ್ನುಮೇನೆಂದು ನಿರ್ಣಯಿಸುವ ಮುನ್ನಂ ಬಗೆಯೊಳ್ ನೋಯದಿರ್, ಬೇಯದಿರ್, ಪೋಪವಸರದೊಳ್ ಬಗೆಯೆ ಕಜ್ಜಂ ಕೆಡುಗುಂ.

ಬಳಿಕಂ ಶ್ರೀಕೃಷ್ಣಂ ವಿಣ್ಣನೆ ಮನದೊಳ್ ಇಂತೆಂಗುಂ– ಸೋದರಳಿಯನೀ ಮೋಹರದೊಳೇನಕ್ಕುಂ? ಅರ್ಜುನಗುವರಂ ಬಲಗೈಯಾದೊಡೆ ಕಲಿಯುಗಕೆ ಮತಿಗತಿಯಿಲ್ಲಂ. ಈಗಳಿವನಂ ಕೊಳುಗುಳಕ್ಕೆಳೆದೊಯ್ದೊಡೆ ತರುವಾಯೊಳ್ ನಿರ್ಣಯಂ ಎಂದು ಮೊಂದು ನಿಶ್ಚಯಿಸಿ ಪೇಳ್ದನಿಂತು ಹೇ, ಅರ್ಜುನ ! ನೀಂ ಕನಲ್ದು ೧೧೦ ಉಬ್ಬೆಗಂಗೊಳ್ಳದಿರ್ ಮೇಣ್ ಬೆಮೆಗೊಳ್ಳದಿರ್. ಬರಿದೆ ಬೊಬ್ಬಿರಿ ದೊಡೆ ನಾಡುಕುನ್ನಿಗಳ್ ಸಿಂಗಂಗಳಪ್ಪುದು ಸಾಧ್ಯಮೆ? ಎಲ್ಲಂ ಬರೀ ಬಡಿವಾರಮಲ್ತೆ ? ಬೀರರ್ ಬೊಬ್ಬೆಗಂ ಮಣಿವರೇಂ ? ನೀಂ ಕೈ ಮುಸೆದು ಸಮಸಪ್ತಕರಂ ಬೆಂಬಿಡಿಯಲಕ್ಕುಂ. ಜೀವನದೊಳ್ ಯೋಗಾಯೋಗಂ ತಪ್ಪಿಸಲಾರ್ಗಳವು? ನಡೆ ಬಡಗಣದೊಳ್ ಸಮ ಸಪ್ತಕರ್ ತೋಳ್ ಚಪ್ಪರಿಸಿ ಕಾದಿರ್ಪರ್. ಈಗಳವರಂ ಎದಿರ್ಚ ದಿರ್ದೊಡೆ ನಿನ್ನಂ ಕೀಳ್ಗೈದಪರ್. ಮೊದಲವರಂ ಬೊಗ್ಗು ಬಡಿದು ಬಳಿಕ್ಕಂ ಪದ್ಮವ್ಯೂಹದ ಬೆಸನಂ.

ಅನಿತರೊಳ್ ದ್ರೋಣಾಚಾರ್ಯರಟ್ಟಿದ ದೂತರೈತಂದು ಅರ್ಜುನನ ಮುಂದೈದು ಕೆಕ್ಕರಿಸಿ ನೋಡುತುಂ ಪಗೆತನದ ಕೊರ್ವಿಂ ೧೨೦

ಕಕ್ಕಸವಗೆಯ ದರ್ಪದಿಂ ಜರ್ವಿ ಕೇಳಿಸಿದರ್—ಅಯ್ಯಾ ! ಧೀರರ ಧೀರ ! ಇಂದಿಗಾಯ್ತು ನಿನ್ನ ಯೋಗದ ಭೋಗದ ಭಾಗ್ಯ ! ಸಿಡಿಲ ಪೊಡರ್ಪು ಕಡಿವಂತು ಕಡಲವೊರೆಯು ಮಡಂಗುವಂತು, ನಿನ್ನ ಕೊರ್ವು ಎರಂಕೆ ಮುರಿದ ಪಕ್ಕಿಯಕ್ಕುಂ ಪದ್ಮವ್ಯೂಹದೊಳ್ !

ಆಗಳಾ ಅರ್ಜುನನ ಕೋಪಶಿಖಿ ದಳ್ಳಿಸಿದೊಡಂ ತನ್ನಂ ತಾಂ ಬೋಳೈಸಿ ತಳ್ಕೈಸಿ ಯೋಚನೆಯಗಾವರದೊಳ್ ಸಿಲ್ಕಿ ಶ್ರೀಕೃಷ್ಣ ನಂ ಕುರಿತಿಂತೆಂಗುಂ—ಶ್ರೀಕೃಷ್ಣಾ ! ಎಲ್ಲಂತಿಳಿದೆಯಲ್ತೆ? ಇಂತೊಂದು ಬವರದೊಳ್ ಏಂಗೈಯ್ಯಲಕ್ಕುಮೆಂಬುದು ಎನ್ನರಿಕೆಗೆ ಬಾರದೈ. ನಿನ್ನ ನೆರವಿಲ್ಲದಾವ ಕಜ್ಜಮಂ ಕೈಗೊಳ್ವೆಂ ?

ಶ್ರೀಕೃಷ್ಣಂ—ಮೊದಲ್ ಸಮಸಪ್ತಕರಂ ಎದುರ್ಚಲಕ್ಕುಂ. ೧೩೦

ಅರ್ಜುನಂ—ಪದ್ಮವ್ಯೂಹಂ ಕೈವೀಸಿ ಕರೆಯುತಿರ್ಕುಂ. ಅತ್ತಲ್ ಪೋದೊಡೆಂತು ?

ಶ್ರೀಕೃಷ್ಣಂ—ಈಗಳ್ ಅತ್ತಲಿತ್ತಲೆಂದು ಬಗೆಯಲ್ಕೆ ಪೊಳ್ತಿಲ್ಲಂ. ನೀ ಸೆಣಸು ನಡೆ ಸಮಸಪ್ತಕರಂ.

ಅರ್ಜುನಂ—ಆಯ್ತು, ವಾಸುದೇವ !

ಅರ್ಜುನಂ ದ್ರೋಣರಟ್ಟಿದ ದೂತರ ಕಳಿಪಿ ಶಸ್ತ್ರಾಸ್ತ್ರಂಗ ಳೊಡನೆ ರಥವೇರ್ದಂ. ಹರಿಯುಂ ತೇಜಿಗಳ ವಾಘೆಯುಂ ಬಿಗಿ ವಿಡಿದು ಚೆಚ್ಚರದಿಂ ಮುನ್ನಡೆಸೆ ತೇಜಿಗಳ್ ಪುರುಪಿನಿಂ ಪುರುಡಿನಿಂ ಪಿಡಿದುವು ಬಡಗಣದಿಕ್ಕಂ : ಪೊನ್ನಿನ ಕಿರುಗೆಜ್ಜೆಗಳ್ ಘಳಘಳರೆನೆ ರಥದ ಗಾಲಿಗಳ್ ಗಡಬಡಿಸೆ ಹಯಂಗಳ ಹೇಷಾರವಂ ಒಗ್ಗೂಡಿ ೧೪೦ ಕೃಷ್ಣಾರ್ಜುನರಿರವಂ ಸಾರ್ದುದು ದೆಸೆದೆಸೆಗಂ. ಜಂಬಳಿಯ ನಡೆ ತಂದ ಮಾವುತರ್ ರಾವುತರ್ ಪಟುಭಟರ್ ಪಡೆವಳರ್ ಕಟ್ಟುಬ್ಬಸ ದಿಂ ಓಡೋಡಿ ಸರಿಗಟ್ಟಲ್ ಪೊಳ್ತರೆಯ ಪುರುಪಿನಿಂ ತಂತಮ್ಮ

ವೇಗವಂ ಇರ್ಮಡಿವೆರ್ಚಿಸಿದೊಡಂ ಪಿಂದುಳಿದು ಚಡಪಡಿಸುತಿರೆ;
ಕೃಷ್ಣಾರ್ಜುನರ ರಥಂ ಮುಂತೆ ಮುಂತೆ ಸಾರ್ದು ರಾಜವೀಥಿಯಂ
ದಾಂಟಿ ನಿಡುಪೊಳಲಿಂಗೆಯ್ದೆ ಪೊಳ್ತಿನೊಳ್ ಮುಂದೆಸೆಯಿಂ ನುಗ್ಗಿ
ವಂದ ಬಿರುಗಾಳಿ ರೊಯ್ಯೆಂದು ಸುಯ್ಯೆಂದು ಬಿರುಸಿನಿಂ ಬೀರಿಬರೆ
ಆವ ದುರ್ನಿಮಿತ್ತಮೊ ತೇಜಿಗಳ ಕಣ್ಗೆ ಧೂಳೊತ್ತಿ ಮರಳ್ ಬಿಳ್ದು
ನೋವುಂ ಮೂಡಿ ಕರಕರಿಸಿ ಕಣ್ಣೀರಿಟ್ಟು ಬಟ್ಟೆಗೆಟ್ಟು ಜಡಿದಾರ್ದು
ನುಗ್ಗಲವು ಮುಗ್ಗರಿಸಿ ಬಿಳ್ದೆದ್ದು ಉಡಿದಾಡುತಿರೆ; ಶ್ರೀಕೃಷ್ಣ ರಥ ೧೫೦
ಮಂ ತಿರುಪಿ ಕುಳಿರ್ಗಾಳಿಯ ಬಿರುಪೊಯ್ಲಿಂಗೆ ಬೆನ್ನಾಗೆ ಅರ್ಜುನಂ
ಮನದೊಳ್ ಕಳಕಳಿಸಿ–ಕೃಷ್ಣಾ! ಇದೇಂ ಗಾವರಂ ಪ್ರಕೃತಿಯೊಳ್?
ಅಪಶಕುನಮೊ ಮತ್ತೇಂ ಕಾರಣಮೊ ?

ಶ್ರೀಕೃಷ್ಣಂ–ಏಗಳುಂ ಎಲ್ಲೆಡೆಯುಂ ಏರುಪೇರಿರ್ಪುದು ಸಹಜಂ.

ಅರ್ಜುನಂ–ಅದೊಡಿಂದಿದು ವಿಪರೀತಮೆನಲಕ್ಕುಂ. ಏಕಿಂತು ಬಿರುಗಾಳಿಯುಗಾವರಂ ?

ಮತ್ತಾಗಳುಂ ತಿರೆ ಮೆಲ್ಲನೆ ನಡುನಡುಗಿ ಕಲ್ಮಣ್ಣು ಸಡಿಲ್ಚಿ
ಗಡುಮರಗಳುಂ ದೊಪ್ಪನೆ ಕೆಡೆದುವು ಬುಡಗಳ್ಚಿ. ಪಶುಪಕ್ಷಿಗಳ್
ಭಯಮಟ್ಟು ಗಾವರದಿಂ ಅತ್ತಿತ್ತ ಉಡಿದಾಡಿ ಎರ್ದೆಗೆಟ್ಟು ಬಟ್ಟೆ ೧೬೦
ಗೆಟ್ಟು ಗಾರುಗೆಟ್ಟು ಎತ್ತಪೋಕಮೆಂದು ಬಗೆಯಲ್ಬಾರದೆ ಮನಂ
ಬಂದಡೆ ನುಗ್ಗಿ ಮುಳ್ಪೊಟ್ಟೆಯೊಳ್ ಸಿಲ್ಕಿ ಮೈತೆರೆಚಿ ಗಾಯಮಟ್ಟು
ಚೀರಿಟ್ಟು ಓಡುತಿರ್ದುವು ದಿಸೆದಿಸೆಗೆತ್ತು. ದೃಷ್ಟಿಕಕ್ಷೆಯೊಳೆಸೆದ
ಔತ್ಪಾತಕಮಂ ನೋಡಿ ಅರ್ಜುನಂ ಮನದೊಳ್ ಇಂತೆಡೆವಿಡದ
ದುರ್ನಿಮಿತ್ತಂಗಳ್ ಆವ ಅನ್ನೆಯದ ಸೂಚನೆಯೊ ? ಮತ್ತಾವ
ಆಪತ್ತಿನ ಕುರುಹೊ ? ಎಂದು ತನ್ನೊಳ್ ಪಳಯಿಸಿ ಚಿಂತೆಯ
ಗಾವರದಿಂ ಕೇಳಿಸಿದಂ–ಸ್ವಾಮಿ ! ಇಂದೇಂ ಎಂದಿಲ್ಲದ ತಳಮಳಂ

ಎನ್ನ ಮನದೊಳ್ ತುಂಬಿರ್ಕುಂ. ಇದಾವ ಅಪದೆಶೆಯ ಸೂಚನೆಯೊ? ಪ್ರಕೃತಿ ವಿಕೋಪವೊ? ಏನುಮೇನೆಂದು ಬಗೆಯಲ್ಬಾರದೆ ದುಶ್ಶಂಕೆಯುಂ ಕತ್ತಲೆಯಂತೆ ಕಾವಳಿಸಿರ್ಪುದೆನ್ನ ಮನಮಂ. ೧೭೦

ಶ್ರೀ ಕೃಷ್ಣಂ–ಏನಿರ್ದೊಡಂ ಸಹಿಸಲಕ್ಕುಂ. ಅಳ್ಕುವುದರಿಂದೇಂ ಫಲಂ ?

ಅರ್ಜುನಂ–ಎರ್ದೆಯಳ್ಕಲ್ಲಿದು. ಸಂಕೆಯುಗಾವರಂ. ಒಡಲ ಸಂಕಟಂ.

ಶ್ರೀಕೃಷ್ಣಂ ಪಿಂತಿರುಗಿ ಅರ್ಜುನನಂ ನೋಡುತುಂ–ಸಂಕೆಯಿಂದಲ್ತೆ ಅಳ್ಕುಗುಂ ?

ಅರ್ಜುನಂ ನಿಟ್ಟುಸಿರ್ವಿಟ್ಟು ಕೂರ್ಮೆಯ ಬಡಿಗೋಲ್ಗಳಂ ಬಳಿಯೊಳಿಕ್ಕಿ ತನ್ನಂ ತಾಂ ಬೋಳೈಸಿ–ಹೇ, ಸ್ವಾಮಿ! ಏನಿರ್ದೊಡಂ ಎಲ್ಲಂ ನಿನ್ನ ಕೈಯೊಳಗಿರ್ಕುಮಲ್ತೆ? ಎನ್ನ ಬೆಸನಂ ನಿನಗಕ್ಕುಂ.

ಅನಂತರಮಾ ಅರ್ಜುನಂ ತನ್ನೊಂದಾಯತಿಯಿಂ ತರಿಸಂದು ದೆಸೆಮೂಲೆಗಳೊಳ್ ಮುಯ್ಯಾಡುವಂತು ಮಿಕ್ಕಿನ ತಕ್ಕಿನ ಅಸ್ತ್ರ ೧೭೫ ಶಸ್ತ್ರಂಗಳಂ ಮೂಡಿಗೆಯೊಳಿಕ್ಕಿ ಕೂರ್ಗೋಲ್ಗಳಂ ಬಳಿಯೊಳಿಕ್ಕಿ ಇಂದ್ರ ಧನುವಂ ಕೈಕೊಂಡು ಶಿವನಿತ್ತ ಶರವಂ ಬಿಲ್ಲಕೊಪ್ಪಿಂಗಳವಡಿಸಿ ಅಣಿಯಾದಂ. ಶ್ರೀಕೃಷ್ಣಂ ತೇಜಿಗಳಂ ಮುಂಬರಿಯದೊಲ್ ತಡೆಮಿಡಿದು ಕೆಂಧೂಳ್ ತೇಲಿಹೋಹನ್ನೆಗಂ ಕಾದಿರ್ದು ಕುಳಿಗಾಳಿಯುಬ್ಬಟೆಯುಂ ಕಮ್ಮಿಯಾದ ಬಳಿಕ್ಕಂ ವಾಮಾಂಗದ ರಾಗಿವೊಲದೊತ್ತಿನೊಳ್ ಸಮದಾಣದ ಬಟ್ಟೆವಿಡಿದು ತಳರ್ದು–ಅರ್ಜುನ ಬರ್ದುಂಕಿನೊಳ್ ಸುಕದುಕ್ಕಂ ಆರ್ಗಿಲ್ಲಂ? ಏಗಳುಂ ಚಕ್ರವತ್ ಬರ್ಕುಂ ಪೋಕುಂ. ಅದರಿಂ ಬೀರರ್ಗೇಕೆ ಗಾವರಂ ?

ಅರ್ಜುನಂ–ನಿನ್ನನರಿಯಲ್ಕೆ ಅರ್ಗಳವು ಶ್ರೀಕೃಷ್ಣಾ ?

ಶ್ರೀಕೃಷ್ಣಂ—ನೀನಿಂತು ತಳವುಳದಿಂದಿರ್ದೊಡೆ ಅರಿಗಳ್ ೧೯೦
ನಿನ್ನ ಮುಸಗಿ ದಿಸೆದಿಸೆಗೆಸೆಯರೇಂ ? ಜಗದೊಳ್ ನಗೆಗೇಡಿಯಾಗ
ದಿರ್ ಪಾರ್ಥ !

ಅರ್ಜುನಂ—ಎಲ್ಲ ನಿನ್ನ ಮಾಯೆಯೊಳಿರ್ಕುಮೆನೆ ಎನ್ನ
ಕಜ್ಜದುಜ್ಜುಗಮೊಂದು ಲೆಕ್ಕಮೆ ?

ತೇಜಿಗಳಂ ತಟ್ಟಿ ನಡೆಯಂ ತಿರುಪಿ ರಥಮಂ ಮುಂಬಟ್ಟೆ
ಯೊಳ್ ನಡೆಸಿ ನಲ್ನುಡಿಯೊಳಿಂತೆಂಗುಂ—ಪಾರ್ಥ ! ಕೇಳ್, ಈ
ಕುಳಿಗಾಳಿಯು ಪೊಯ್ಲಿಂ ಎಮ್ಮ ಮುನ್ನಡೆ ತಳ್ವಿದುದರಿಂ ಸಮ
ಸಪ್ತಕರ್ ಕಾದು ರೋಷಗೊಂಡು ಇರ್ಮಡಿ ಕೆಚ್ಚಿನೊಳಿರ್ಪರ್
ನೀನಿನ್ನುಮಿನ್ನು ಬೆಮೆಯಿಂ ಮೈಮರೆತೊಡೆ ಕಜ್ಜಂ ಕೆಡುಗುಂ,

ಅರ್ಜುನಂ-ಅಪ್ಪಣೆ ಸ್ವಾಮಿ! ಎಂದ ಬಳಿಕ್ಕಂ ಸುತ್ತಮುತ್ತಂ ೨೦೦
ಕಣ್ಣಟ್ಟು ನೋಡಿ ಎಲ್ಲಿಯುಂ ಕಾಣದಿರೆ ಕಟ್ಟಚ್ಚರಿಯಿಂ ಕೇಳಿ
ಸಿದಂ—ಸಮಸಪ್ತಕರೆಲ್ಲಿಯುಂ ಕಂಡರಿಲ್ಲಂ ಶ್ರೀಕೃಷ್ಣ !

ಶ್ರೀಕೃಷ್ಣಂ—ಇನ್ನುಂ ದೂರ ಪಯಣಿಸಲಕ್ಕುಂ. ನಾಮಿನ್ನುಂ
ಪೊಳಲಂ ದಾಂಟಲಿಲ್ಲ ಕಾಣ್.

ಅರ್ಜುನಂ—ಅಂತೇಂ ಮಾಧವ !

ಶ್ರೀಕೃಷ್ಣಂ ತೇಜಿಗಳಂ ಬೆನ್ನಪ್ಪರಿಸಿ ಬೋಳೈಸಿ ದರಹಸಿತ
ನಾಗಿ-ಎಲೆ, ಅರ್ಜುನ! ನೀನಿನ್ನುಂ ಬೆಮೆಯ ಮಂಪರದೊಳಿರ್ಪೆ.
ಇಂತಿರ್ದೊಡೆಂತೈ? ಕೇಳ್! ಪಿಂದೊರ್ಮೆ ಮೇರುವೆಟ್ಟನ ಪದತಲದೊ
ಳ್ ಭೂರಮೆಯ ರತ್ನಹಾರಮೆನೆ ತಳತ್ತಳಿಸಿ ನಿಚ್ಚಂ ಪೊನಲ್ವರಿವ
ನದೀತೀರದೊಳ್ ಸೋಮಕನೆಂಬ ಪಿರಿಯ ತಾಪಸಂ ಮಡದಿಯೊ ೨೧೦
ಡನೆ ಸೊಗದಿಂ ಬಾಳ್ದು ಲೋಗರ್ಗೆ ಪಲವೋದುಗಳನೋದಿಸಿ ನಡೆ
ಡಿಯೊಳ್ ನಲ್‌ಬಿನ್ನಣಿಗರನ್ನಾಗಿಸಿ ಶಾಸ್ತ್ರಪುರಾಣಂಗಳನೊರೆದು

ಪಳವಾತುಗಳಂ ಸಾಂಗವುರಿಪಿ ಬಿಜ್ಜೆಯೊಳ್ ಪರಿಣತರಂಗೈದು ಗಾಣ
ದೊಳ್ ಜಾಣರಂಗೆಯ್ದು ಆಟಪಾಠ ಮಾಟಮಪ್ಪಂತು ಕಲಿಸು
ತ್ತಿರಲ್ ನಾಡಿನ ಲೋಗರ್ಗೆ ಪ್ರಿಯನಪ್ಪಿ ಬಾಲರ್ಗೆ ಧೀಮಂತಗುರು
ಮೆನಿರ್ಚ ಶ್ರೇಷ್ಠ ಮುನಿಯೊಂದಾಯತಿಯಿಂ ಬೆಳಂಗಿರ್ದಂ. ಲೋಕದ
ಲೋಗರ್ಗೆ ಕಷ್ಟನಷ್ಟಂಗಳಿರೆ ಸಂತೈಸಿ ಬೋಳೈಸಿ ವೇದಾಂತವನೊರೆದು
ಸುಕದುಕ್ಕಂಗಳೊಳ್ ಸಮದೃಷ್ಟಿಯಿರ್ಕುಮೆಂದು ಭೋದಿಸುತಿರ್ದಂ.

ಇಂತಿರೆಯಿರೆ ದಿನಂಗಳ್ ಸೊಗದಿಂದುರುಳುತಿರ್ದುವು ಭಂಗ
ಬವಣೆಯಣಮೆಂದುಂ ಕಾಣದವೊಲ್. ಆಗಳುರ್ಕಿದ ಸುಕ ಶಾಂ ೨೭೦
ತಿಯಿಂ ಸಂತಸಪಟ್ಟು ಕೃತಕೃತ್ಯನಾದೆಂಬೊಂದು ಪೆರ್ಚಗೆಯೊಳ್
ಮಡದಿಯಿರವಿಂಗೆ ಒಲಿದುಮೊಲಿದು ನಿಡುಮೆಯ್ಯ ನಟ್ಟನಡುವಣ
ಕಟ್ಟಾಯದ ಮೈಸಿರಿಯಂ ಒಲಿದು ಸೊಗಸುಗೆಯ್ದು ಸುಕಲೋಲು
ಪ್ತಿಯೊಳ್ ಮುಳುಂಗಿರೆ ಮಡದಿ ಬೆಸಲೆಯಾಗಿ ಬಟ್ಟಮೊಗದ ಕಡು
ಚೆಲ್ವಿನ ಮುದ್ದುಗುವರನಂ ಪಡೆದಳ್ ನೋಳ್ಪಕಣ್ ಬೆನೆಗೊಳ್ವಂತೆ.
ಮೋಡಗಳೆಡೆಯ ಷೋಡಶಕಳೆಗಳುಗುವ ಪೂರ್ಣಮೆಯ ಚಂದ್ರ
ನೊಲ್ ಬೆಳಂಗಿದಂ ಬಾಲಕಂ. ಪುಟ್ಟ ಕೈಗಳಂದಂ, ಕಿರುನಗೆಯ
ಸೊಗಸುಂ, ಮೊಳೆವಲ್ಲ ಚೆಲ್ವುಂ, ತೊದಲ್ನುಡಿಯ ಗಾಡಿಯಿಂ, ತಳ
ರ್ನಡೆವ ಮೋದದಿಂ ಕಣ್ಗಿಂಬಾದನಾ ಬಾಲಕಂ ; ಮುನಿ ದಂಪತಿ
ಗಳ ಮನಮಂ ಸಂತಸಂಬಡಿಸುವವೊಲ್. ತಾಯ ಸೆರಗಂ ಸೆಳೆ ೨೩೦
ದೋಡುವ, ನಲ್ಮೆಯಿಂ ತೊಡೆಯನೇರುವ, ಬಲ್ಮೆಯಿಂದೋಡಿ
ಬಂದು ಮುನಿಯನಪ್ಪುವ, ಮರವನೇರ್ದವೊಲ್, ಮೆಯ್ಯನೇರಿ
ಭುಜವನಡರ್ದು ನಿಡುಮುಡಿಯಂ ಬಿಚ್ಚಿ ಕೆಂಜೆಡೆಯ ತುತ್ತತುದಿಗೆ
ಬೆಲ್ಲವತ್ತ್ರಮಂ ಸೂಡುವ, ಮತ್ತದಂ ತಾಯ್ಗೆ ತೋರಿ ಕೈಪರೆಗು
ಟ್ಟುವ. ಇಂತಿಂತೋರೊಂದು ಚಿಣ್ಣರಾಟದಿಂ ಮೆರೆದು ದಿನದಿನಂ
ಮೈವೆರ್ಚ ಪೆತ್ತವರೆರ್ದೆಯ ಸಂತಸಗಡಲನಿಮ್ಮಡಿಯುಬ್ಬಿಸಿದಂ....

ಅನಿತರೊಳ್ ಅರ್ಜುನಂ ಬೇವಸಗೊಂಡು ನುಡಿಸಿದಂ– ಓ
ಇದನೇನೆಂದೆಸಗೆ ಬಣ್ಣಿಪ್ಪೆ ಶ್ರೀಕೃಷ್ಣಾ !

ಶ್ರೀಕೃಷ್ಣಂ–ನಿನ್ನ ಮನದೊಳ್ ತುಂಬಿರ್ದ ಗಾವರಕ್ಕೊಂದು
ನಿದರ್ಶನವಲ್ಲದೆ ಮತ್ತೇನಲ್ಲಂ. ನೀಂ ಕಿಂಚಿತ್ ತಾಳ್ಮೆವಹಿಸಿದೊಡೆ ೨೪೦
ಮುಂದಿನ ವಿಷಯುವನೊರೆವೆಂ.

ಅರ್ಜುನಂ–ಆಯ್ತಾಯ್ತು. ನೀಂ ಬೆಸೆಸಿದೊಡಾಂ ಕೇಳದಿರ
ಲಕ್ಕುಮೆ ? ಬೇಸರಿಸದೆ ಪೇಳ್ಳೈ.

ಶ್ರೀಕೃಷ್ಣಂ–ಕೇಳ್ ಪಾರ್ಥ ! ಮತ್ತಂ ಕೆಲಪದಮುರುಳ್ದು
ಬಾಲಕಂ ಮೈದುಂಬಿ ಮನದುಂಬಿ ನೋಳ್ಪ ಕಣ್ಗಳ ದೃಷ್ಟಿದೋಷಂ
ತಟ್ಟುವಂತಿರೆ ಪೆತ್ತಬ್ಬೆ ಮನದೊಳ್ ಆರದೃಷ್ಟಿಯೊಳಾವ ದೋಷ
ಮೊ ಮತ್ತಾವ ಮಂಕುಮಾಯುಮೊ ಎಂಬೊಂದು ತಳ್ಳಂಕದಿಂ
ಮೊಗಮುಂ ನೀವಿ ಲಟಿಕೆ ಮುರಿದು ಪಣೆಯೊಳ್ ಕರ್ಪುಬೊಟ್ಟಂ
ಕಾಪಿಟ್ಟು ಕಳಿಪುವಳ್ ಇತರ ವಟುಗಳೊಡಂ. ಇಂತೊಂದು ಸಂಕೆ
ಯೊಳ್ ಕಟ್ಟೆಚ್ಚರಮಿರ್ದೊಡಂ ಕಟ್ಟುರದ ನಿಟ್ಟುರದ ಘೋರ ೨೫೦
ದುರ್ದಿನಮೊಂದು ಬಳಿಸಾರಿ ಬಂದುದು ಆರುಮರಿಯದವೊಲ್.
ಆ ದಿನಂ ಬಾಲಕಂ ಇತರ ವಟುಗಳೊಡಂ ದೂರ ಪ್ರದೇಶದ ನಿಡು
ವಲಯುದೊಳ್ ಕರ್ಸುಣ್ಣ ಕಡಾಯುಮೆಂಬಂತಿರ್ಪೊಂದು ಪೆರ್ಗೊಳ
ದೊಳ್ ಈಸು ಕಲಿಯುಲೆಂದು ನೀರ್ಗಿಳಿಯೆ ಮೇಲೇಳಲ್ಬಾರದೆ ಅಲ್ಲೆ
ಸಮಾಧಿಯಾದಂ ದುರದೃಷ್ಟವಶದಿಂ ಕಣಾ ! ಮತ್ತೇಂ ಪೇಳಲವರ
ಗೋಳಂ ? ಊರಲೋಗರ್ ಘೋರ ದುಕ್ಕಬಾರ್ತೆಯುಂ ಕೇಳ್ದು
ತಮ್ಮೊಂದು ಜಂಘಾಬಲವೇ ಬಿಳ್ದವೊಲ್ ಬಿಳ್ದೆಳ್ದು ಓಡಿಯೋಡಿ
ಬಂದರ್ ಮುನಿಪಾಶ್ರಮಕೆ. ನೋಡೆ ಬಾಲಕನ ಶವಮುಂ ಬಿಗಿ
ರ್ದಪ್ಪಿ ಬೋರೆಂದಳುತಿರ್ದರ್ ಪೆತ್ತವರ್. ಆಗಳ್ ಲೋಗರುಂ
ಕಂಡು ಮತ್ತೆ ಮತ್ತೆ ಎದೆಯುಂ ಪೊಯ್ದು ಅಳಲ್ದರ್ ಒಡಲ ೨೬೦
ಸಂಕಟಮುಂ ಸೂಸಿ, ನಿಮಿಲಿತ ಕಟಾಕ್ಷದತ್ತಣಿಂ ಬಸಿದುದು
ಕವೋಷ್ಣಭಾಷ್ಪ ವಾರಿಧಾರೆಯುಪ್ಪಿ.

ಆಗಳೋರ್ವಂ ಮುನಿಯು ಬಳಿಗೆಯ್ದು ಸಂತೈಸುವ ಮಾಳ್ಕೆಯೊಳ್ ಇಂತೆಂಗುಂ–ಅಯ್ಯಾ, ಮುನಿಪ! ಇಂತೇಂ ಬೋರೆಂದಳುತಿಹೆ ? ಲೋಗರ್ಗೆ ದುಕ್ಕವೊದವಿದ ಸಮಯದೊಳ್ ವೇದಾಂತವನೊರೆದು, ಏಗಳುಂ ಸುಕದುಕ್ಕಂಗಳಂ ಸಮದೃಷ್ಟಿಯಿಂ ನೋಡಲ್ವೇಳ್ಕುಮೆಂದು ಉಪದೇಶಿಸುತಿರ್ದಿರಲ್ತೆ ? ಇದೇಂ ನೀಮಿಂತಳಲ್ದು ಗೋಳಾಡುತಿರ್ಪಿರಯ್ ? ಎನಲ್ಕೆ ಆ ಮುನಿಯುಂ ಬಿಕ್ಕಿಬಿಕ್ಕಳುತೆ ಸಂಕಟದಿಂ 'ಹಾ! ಇದೆನ್ನ ಒಡಲ ಕುಡಿಯಲ್ತೆ ?' ಎಂದಂ. ಇಂತಿದಂ ಮನದೊಳಿಟ್ಟು ಯೋಚಿಸೈ ಕಿರೀಟಿ ಆನ್ ತಾನೆಂಬ ಬೆಮೆಯುಂ ಕೈವಿಡದೆ ಸುಖಶಾಂತಿಗಳ್ ಲಭಿಸವು ಕಾಣ್.

ಧನಂಜಯಂ ತನ್ನೊಳ್ ತುಸುಪೊಳ್ತು ಯೋಚಿಸಿ ನಿಡುಸುಯ್ದಂ.

ಶ್ರೀಕೃಷ್ಣಂ–ಕೇಳ್, ಅರ್ಜುನ ! ಪರರ ದುಕ್ಕಮುಂ ಸರಾಗದಿಂ ಭರಿಸಿ ನಂನಮ್ಮ ಸಂಕಷ್ಟದೊಳ್ ಎರ್ದೆಗೆಟ್ಟರೆ ಏನಕ್ಕುಂ ?

ಅರ್ಜುನಂ–ಸ್ವಾಮಿ ! ದಿಟಂ, ಆದೊಡಂ, ಇಂತಪ್ಪ ತಳಮಳಮುಂ ಆನೆಂದು ಕಂಡೆನಿಲ್ಲಂ. ಏಂ ಕಾರಣಮೊ ಅರಿತೆನಿಲ್ಲಂ. ಏನಿರ್ದೊಡಂ ತಿಳಿಪುದು.

ಇಂತು ನೋಯುತೆ ಬೇಯುವ ಪ್ರಾಣಸಖನಂ ಕುರಿತು–ಕಾತರಿಸದಿರ್ ಪಾರ್ಥ ! ಎಲ್ಲಂ ದೈವಾಯತ್ತಮಿರೆ ಆರೇಂ ಗೈಯಲಕ್ಕುಂ ?

ಇಂತಿಂತು ಪರ್ವದ ಕಡಲೆಂಬಂತಿರೆ ಬೋರಿಡುವ ಸೇನೆಯುಂ ಪಿಂತಿಕ್ಕಿ ಕೃಷ್ಣಾರ್ಜುನರ ತೇರುಮೊಂದೆ ಮುಂಬರಿದು ಗಲ್‌ಗಲ್ ಎನಲ್ ಕಿರುಗೆಜ್ಜೆಗಳ್ ಸ್ವರ್ಗದಿಂದಿಳಿತಂದ ತೇರೋ ಎನಲ್ಕೆ ಕಣ್ಗೆಡ್ಡಮಾದುದು ಹಾದಿಯೊಳ್. ಮತ್ತಾಗಳುಂ ಬಿಂದಿಗೆಯುಂ ಬಗಲೊ

ಳಿಕ್ಕಿ ನದೀತೀರದಿಂದೈತರುತಿರ್ದ ನಾಡಕಾಂತೆಯರ್ ತೆಕ್ಕನೆ ನೆಲೆ
ಮನೆಯಂ ಪೊಕ್ಕು ತುಂಬುನೀರ ಪೊಂಗೊಡಮನಿಳುಪಿ ಅರೆದೆರೆದ
ಬಾಗಿಲೊಳ್ ಮೇಣ್ ಗವಾಕ್ಷದೊಳ್ ಕೊರಳೆತ್ತಿ ನಿಳ್ಕಿ ನಿಳ್ಕಿ
ಈಕ್ಷಿಸುತಿರ್ದರ್ ಕಟ್ಟಚ್ಚರಿವಟ್ಟ ಮಾಳ್ಕೆಯೊಳ್. ಮತ್ತೊರ್ವ
ಚೆಲ್ಲೆಗಾತಿ ಕೆಳದಿಯೊರ್ವಳಂ ಸನ್ನೆಯಿಂ ಕರೆದು—ಎಲೆ ಸಿಂಧುರ ೨೯೦
ಬಂಧುರಯಾನೆ! ನೋಡಾ ಪೊಂದೇರಂ! ಭೀರರಡರ್ದ ರಥಾಂಗದ
ಸಡಿಲ್ದೆಚ್ಚೆನೆ ದಿಂದಿಮ್ಮೆನೆ ಗಡಬಡಿಸುತಿರ್ಕುಂ. ಏಂ ರಣಬಿಜ್ಜೆ
ಯುಜ್ಜುಗಮೊ ? ಏಂ ಕಟ್ಟೊತ್ತಾಯದ ಸಂಗರಮೊ ? ಆವ
ಧೈರ್ಯಮೊ ? ಆವ ದೋರಣೆಯೊ? ಇಂತಪ್ಪ ಹೊಂಚಿನ ಸಂಚು
ಮಿಂಚಿ ಬಹು ಜನರ ಬಾಳ್ಗೆ ಕುತ್ತಪ್ಪುದು ಕಾಣ್ ! ಧೀರರ
ಧೀಮಂತರ ಇಚ್ಚೆಯುಂ ಪಚ್ಚೆಯಾಗೆ ಆರಾರ್ ಬರಿದೆ ತಲೆಗುಡ
ಲಕ್ಕುಮೊ ? ಆ ಮಾದೇವಂ ಮಾತ್ರ ಬಲ್ಲಂ.

ಕೆಳದಿಯುಂ ನಿಡುಸುಯ್ದು ಖಿನ್ನತೆಯಿಂ—ಕಾಂತೆ ನಂನಮ್ಮ
ಸ್ಥಿತಿಯಂ ನಾಮೆ ಅರಿತು ರೂಪಿಸದಿರ್ದೊಡೆ ಗತಿಯೇನಕ್ಕುಂ ?

ಕಾಂತೆ—ಸೋದರಿ ! ಎಲ್ಲ ನಂನಮ್ಮ ಹಣೆಬರಹಮಲ್ತೆ ? ೩೦೯

ಅಂತಾಡಿದಾ ನುಡಿಗಳನಾಲಿಸಿ ಅರ್ಜುನಂ—ಸ್ವಾಮಿ,
ಇರುಳ್ ಕಂಡ ಬಾವಿಗೆ ಪಗಲ್ ಉರುಳ್ವ ಗತಿ ಇದಲ್ತೆ ?

ಶ್ರೀಕೃಷ್ಣಂ—ಇದೇ ಕರ್ಮಯೋಗಂ ಪಾರ್ಥ !

ಅನಿತರೊಳ್ ಕರ್ವೆಕ್ಕೊಂದು ಹಾದಿಗಡ್ಡೈಸಿ ಸಾರ್ದುದಂ
ಕಂಡ ಅರ್ಜುನಂ ಮನದೊಳ್ ಅಪಶಕುನಮೊಂದದಂ ಬಗೆದು
ಚಿಂತೆಯಿಂ—ಹೇ, ಶ್ರೀಕೃಷ್ಣಾ ! ನೀನತಿಗೂಢಾದ್ಗೂಢತರಂ.
ಯೋಚಿಸಿದೊಡಂ ಅರ್ಥೈಸಲಾರೆನ್ನೈ !

ಶ್ರೀಕೃಷ್ಣ–ಕೇಳ್ ಪಾರ್ಥ ! ಜೀವನದೊಳ್ ಭಂಗ ಬವಣೆಗಳ ಬನ್ನಂ ಪೊಸತೇಂ ನಿನಗೆ ?

ಅರ್ಜುನಂ–ಪೊಸತಲ್ಲವೆಂಬುದು ದಿಟಂ. ಆದೊಡಂ ಇಂದಿನೀ ತಳಮಳದ ರೀತಿಯೆ ಬೇರೆಯಿರ್ಕುಂ. ಹಾ, ಎಂತು ಸೈಪೆಂ ? ಎಂತು ಪೋರ್ವೆಂ ? ನೀನೆನ್ನ ಕದಡಿದ ಮನಕೆ ಶಾಂತಿಯಂ ನೀಡೈ. ೩೧೦

ಶ್ರೀಕೃಷ್ಣಂ–ಕೇಳ್ ವಿಜಯ ! ನೀನೇ ಮನದೊಳ್ ಹದನರಿತು ಪರ್ಯಾಲೋಚಿಸು. ಸುಕದುಕ್ಕವಿಲ್ಲದ ಬಾಳ್ತೆ ಎಲ್ಲಾದೊಡಿರ್ಕುಮೆ ? ಜುದ್ದಮೆಂಬೊಡೆ ಇಕ್ಕೆಲದೊಳ್ ಕಷ್ಟನಷ್ಟಮಿರ್ಕುಂ. ಎಲ್ಲಂ ವೀರೋಚಿತಮಪ್ಪ ಸಾವಧಾನದಿಂ ಸಹಿಸಲಕ್ಕುಂ.

ಅರ್ಜುನಂ–ಅರಿತಿರ್ಪೆಂ. ಜಗದೆ ಸಂಕಷ್ಟದೊಳ್ ಪಳಂಗಿದರ್ಗೆ ಕಷ್ಟನಷ್ಟಂ ಪಿರಿದಲ್ತು. ಅದಂತಿರ್ಕೆ, ಎನ್ನೊಡಲ ತಳಮಳದೊಂದವಸ್ಥೆಗೆ ಏವೇಳ್ವೆನೊ ಕೃಷ್ಣಾ ! ನೀನೆನ್ನ ಸಂಕಟಕ್ಕೆ ತನಿಯೆರೆಯಲಕ್ಕುಂ. ೩೨೦

ಅಂತೆನುವನಿತರೊಳ್ ಬೆಮರ್ತು ನೀರಾದ ಮೊಗಮಂ ಚೇಲಾಂಚಲದಿಂ ಒತ್ತಿ ಒರಸಿ ಪೂಸಿ ನಿಡುಸುಯ್ಯು ಚಿಂತಾಬ್ಧಿಯೊಳ್ ಮುಳುಂಗಿದವೊಲ್ ಮಿಣ್ಣನಾದಂ.

ಪೊಳಲವೀಥಿಯ ಇಕ್ಕೆಲದೊಳ್ ಸಾಲೊಡೆದ ನೆಲೆವನೆಗಳಲಿ ನೆಲೆಮಾಡನೇರ್ದು ಇತ್ತಂ ಕಟ್ಟೆಚ್ಚರಿಯಿಂದೀಕ್ಷಿಸುತಿರ್ದ ಬಾಲಕ ಬಾಲಕಿಯರ್ ಕೈಪರೆಗುಟ್ಟುತುಂ ಹೋಯೆಂದೊರಲ್ದರ್ ಪುರುಪುಂ ಪುರುಡುಂ ಒಗ್ಗೂಡಿ ನೈವೆತ್ತವೊಲ್ ಮತ್ತಮಾ ನಿಡುಗುಂಕುಮದ ಮುತ್ತೈದೆಯರ್ ಬೋಳಿಯರ್ ಮೊಗಸಾಲೆಯೊಳಿರ್ದು ನೋಡುತಿ

ರ್ದರ್ ನಿಣುನಿಣುಕಿ. ಮತ್ತಮಾಗಳ್ ಎದುರುವಕ್ಕದಿಂದೈತರುತಿರ್ದ ೩೨೦
ಲೋಗರ್ ಕೈಮುಗಿದು ನಾಡೊಡೆಯರ ಕಟ್ಬಾಳ್ತನದ ಬೀರದ ಬಿನ್ನ
ಣದ ಮಾಳ್ಕೆ ತನ್ನೊಂದು ನಿಡುವಾಳ್ಕೆಯ ಸೊಮ್ಮಿನಭ್ಯುದಯಕ್ಕೆ
ಕತಮಪ್ಪುದೆಂದು ಬಗೆದು ನಾನಾ ವಿಚಾರಂಗಳೊಳ್ ಮನೋರಥದ
ವಾಜಿಯಂ ಮೇಯಬಿಟ್ಟು ಚಿಂತೆಗೊಳುತಿರ್ದರ್ ತಂತಮ್ಮೊಳ್.

ಮುನ್ನಡೆಯ ಅಶ್ವಪದಸಂಘಾತಸಂಜಾತರೇಣುಜಾತಮಂಬರ
ಕ್ಕೇರ್ದು ನವಿರ್ದ್ದರೆಯೊಲ್ ಮುಸುಂಕುತಿರ್ದುದು ಹೊನ್ನವರ್ಣದಿಂ.
ಇಂತಿಂತೋರೊಂದು ನೋಡಿಯ ಗಾಡಿಯ ಚಿತ್ರಂಗಳನಭೀಕ್ಷಿಸುತುಂ
ಮನದ ಗಾವರಕ್ಕಿಸಿದಿಸಿದಾಗಿ ಸಮಾಧಾನಮೂಡಿಸಿ ತನ್ನಂ ತಾಂ
ತಳ್ಕೈಸುತುಂ ಮುಂಬಯಣದೆ ಪುರುಪಿನೊಳಿರ್ದ ತೇಜಿಗಳಂ
ನೋಡಿ 'ಏಂ ಪುರುಪು' ಎಂದುಸಿರ್ದಂ ಕಿರೀಟಿ. ೩೪೦

ಶ್ರೀಕೃಷ್ಣಂ–ಚಿಂತೆಯ ಗಾವರಮಿಲ್ಲದಿರ್ದುದರಿಂದಲ್ತೆ ಇಂತ
ಪ್ಪ ಪುರುಪು ?

ಅರ್ಜುನಂ–ಸ್ವಾಮಿ! ನಿನ್ನಿಂದಂ ಅನುಗಾಲಮುಪದೇಶ
ಪಡೆದೊಡಂ ಇನ್ನೆಬರಂ ನೆನ್ನಮನಂ ಬಲಿಯಲಿಲ್ಲಮೆನೆ ಬೇವ
ಪ್ಪುದು ಚಿತ್ತಂ.

ಅಗಳಾ ಶ್ರೀಕೃಷ್ಣಂ ಮೆಲ್ಲನೆ ರಥದಚ್ಚಂ ಉಂಗುಟದಿಂದೊ
ತ್ತಿದಂ. ಮುಂತೆ ಮುಂತೆ ಪೋಪೊಂದು ಪುರುಡಿನೊಳಿರ್ದ ತುರಗಂ
ಗಳ್ ಮುಗ್ಗರಿಸಿ ಬಿಳ್ದು ರಥಚಕ್ರಂಗಳ್ ಮಣ್ಣದಿಣ್ಣೆಯೊಳ್ ಸಿಲ್ಕಿ
ಏರುಪೇರಾಗೆ ಈರ್ವರುಂ ರಥದಿಂ ದುಮ್ಮಿಕ್ಕಿ ಚಕ್ರಂಗಳನೆತ್ತಿ ಸರಿ
ದಾರಿಯಂ ಪಿಡಿಸಿದರ್. ೩೫೦

ಶ್ರೀಕೃಷ್ಣಂ–ಇಂತೊಂದು ಏರುಪೇರುಗಳ್ ಸಾಮಾನ್ಯಮಲ್ತೆ
ಬದುಂಕಿನೊಳ್ ಪಾರ್ಥ ?

ಅರ್ಜುನಂ—ಅರಿತೆಂ.

ಶ್ರೀಕೃಷ್ಣಂ—ಎಲ್ಲರುಂ ಪುಟ್ಟುವುದು ಕರ್ಮಂ ಸಮಯಲ್ತೆ ?

ಅರ್ಜುನ—ಅಪ್ಪುದು ಕೇಶವ.

# ಏಕಾದಶಾಶ್ವಾಸಂ

ಪೊನ್ನೇಸರ್ ಜಗದೆ ಪೊಂಬಿಸಿಲಂ ಪರ್ವೆ ಮೇಲೆ ಮೇಲೇರ್ವ ಪೊಳ್ತಿನೊಳ್ ಪದ್ಮವ್ಯೂಹದ ಮೋಹರಂ ದಟ್ಟಣಿಸಿ ಕೊರ್ವಿನಿಂ ಸೊರ್ಕಿನಿಂ ಗಜಬಜಿಸಿ ಜವನಾಳ್ಗಳ ಜಂಗುಳಿಯಂತೆ, ಮಿಂಚಿನ ವೇಗದಿಂ ಸಿಡಿವ ಸಿಡಿಲಿನಂತೆ, ಪೆರ್ಗಡಲೊಳ್ ಉರ್ಕಿಳಿವ ಪೆರ್ದೆರೆಯ ಮೊರೆಯಂತೆ, ಮುಂಗಾರ ಮಳೆಗಾಳಿಗಳ ಆರ್ಭಟದಂತೆ ಜರ್ವಿ ಜಂಕಣಿಸಿ ನಾಲ್ದೆಸೆಗಂ ಧೀಂಕಿಟ್ಟುದು ಜವಹುರವಂ ಒರ್ಮೆಗೇ ಧರೆಗಿಳಿಪಂತೆ! ನಾಡಿನ ಸರ್ವತೋಮುಖರ್ ಚಲದಿಂ ಬಲದಿಂ ಶಕ್ತಿಯಿಂ ಕೆಚ್ಚಿನಿಂ ಕಿಚ್ಚಿನಿಂ ಜಕ್ಕಳಿಸಿ ಎಣೆಯಿಲ್ಲದೊಲ್ ಸಂಘಟಿಸಿ ಪಗೆಗೆಚ್ಚಿಂ ಒರ್ವನೊರ್ವರುಂ ಎದುರ್ಚೆ ಕೂರ್ವಾಳಿಂ, ಕಡಿಗತ್ತಿಯಿಂ ಮುಸುಂಡಿಯಿಂ ಗದೆಯಿಂ ಬಗೆವಗೆಯ ಅಸ್ತ್ರಶಸ್ತ್ರಂ ೧೦
ಗಳಿಂ ಪೊಣರ್ದರ್ ನಂಟುಂ ಬಂಟುಂ ತೊರೆದುಂ ಹೋಯೆಂದುಂ ಘೇಯೆಂದುಂ ಹೊಡಿಯೆಂದುಂ ಬಡಿಯೆಂದುಂ ಕಡಿಯೆಂದುಂ ಜರ್ವಿ ಜಾಲಾಡಿ ಎದುರ್ವೆತ್ತ ಪಗೆಯಂ ಕಡಿದು ಕೊಚ್ಚಿ ನೆತ್ತರಂ ಚೆಲ್ಲಿ ಸೂಸಿ ರಣಭೂಮಿಯುಂ ತಣಿಸಿದರ್ ಓಕುಳಿಯಾಡಿದವೊಲ್.

ಪವಮಾನ ಸುತಂ ದ್ರುಪದಂ ಸಾತ್ಯಕಿ ವಿರಾಟಂ ದೃಷ್ಟದ್ಯುಮ್ನಂ ಕುಂತೀಭೋಜ ಮುಂತಪ್ಪ ಧರಣಿಪರ್ ಮುನ್ನುಗ್ಗಿ ರಿಪುಮೋಹರದಗ್ಗಿ ಧಗಧಗಿಸಿ ಕೆನ್ನಾಲಿಗೆಗಳಂ ಚಾಚಿ ಚಾಚಿ ನೊಣೆದು ನುಂಗುವ ಕಾಳ್ಕಿಚ್ಚಿನಂತೆ ರಣರಣಿಸಿದುದು ಕಡುಕಾಯ್ಪಿನಿಂ. ಮಹಾ ಮಂಡಳಿಕರ್ ಕನಲ್ಧು ಜರ್ವಿಕೊರ್ವಿ ಜಡಿದುಂ ಬಡಿದುಂ

ಕಡಿದುಂ ಗಾಯಃವಟ್ಟು ಮೈನೆತ್ತರಂ ಬಸಿದು ಬಳಲ್ದು ಸೋಲ್ತು ೨೦
ದುಗುಡ ದುಮ್ಮಾನಂಗಳ್ಗೆ ನಿಜಗುಣಮಂ ತೆತ್ತು ಪಿಂದಿರುಗಿ ಪಡಿ
ಮೊಗದಿಂ ಬೀಡಿಗೈತರಲ್ ಪವಮಾನ ಸುತಂ ಇಂತೆಂಗುಂ–ಶಿವ,
ಶಿವಾ! ಪದ್ಮವ್ಯೂಹಂ ಬಲ್ ದುರ್ಭೇದ್ಯಂ! ಈಯೊಂದು ತಂತ್ರಂ
ಎಮಗಳವಲ್ಲಂ. ಮುಂತೇಂ ಬಟ್ಟೆ? ಕೃಷ್ಣಾರ್ಜುನರ್ ಪಿಂದಿರು
ಗದೆ ಗತಿಯಿಲ್ಲೈ ಧರ್ಮಜ !

ಇಂತಾಡಿದ ಭೀಮಸೇನನ ನುಡಿಗಳಂ ಕೇಳ್ದು ಧರ್ಮಜಂ
ಚಿಂತೆವೆತ್ತು ಮೊಗಂ ಬಾಡಿ ಕುಂದಿ ಕುಂದಿ ಬಣ್ಣಂಗೆಡಲ್ ಮಾದ್ರೇ
ಯರುಂ ಕಡುರೋಷದಿಂದೆಳ್ದು ತಾವ್ ಪದ್ಮವ್ಯೂಹಭೇದನಂ
ಗೆಯ್ವುದೆ ನಿಶ್ಚಯಮೆಂದು ಬಗೆದ ಅಗ್ರಜನ ಅಪ್ಪಣೆಯಂ ಪಡೆದು
ಸಕಲ ಶಸ್ತ್ರಾಸ್ತ್ರಂಗಳಂ ಕೈಕೊಂಡು ರೋಷದಿಂದುರ್ಬಿ ದಿವ್ಯತೇಜಿ ೩೦
ಗಳನೇರ್ದು ನಾಗಲೋಟದಿಂ ಸಾರ್ದು ರಣರಂಗಮಂ ಮುಟ್ಟೆ,
ಅರಿಗಳ ನಿಡುಗೋಂಟೆಯಂ ತಾಗಿ ಸೈಂಧವನ ಮೇಲಾಯ್ದು ಶಲ್ಯ
ಕೃಪರಂ ಎದುರ್ಚಲ್ ಮೋಹರಂ ಗಜಬಜಿಸಿದತ್ತು ವೀರೋಚಿತ
ಮಪ್ಪಿ. ಈಯೆಡೆಯ ಸಾಸಿಗರ್ ಜವ್ವನಿಗರ್ ತಾಗಿ ಕಾದಿ ಮೋದಿ
ಪಿಂಜರಿಯೆ ಮಾದ್ರೇಯರುಂ ಕೈಸೋತು ಮೈಸೋತು ಗಾಯವಟ್ಟು
ಕೆನ್ನೆತ್ತರಿಂ ಮಜ್ಜನಂಗೆಯ್ದು ಮೈಯೊಳ್ ನಟ್ಟೊತ್ತಿನಾಂಟಿರ್ದ
ಕೂರ್ಮೊನೆಯ ವಿಶಿಖಾವಲಿ ಸಹಿತಂ ಉಸ್ಸೆಂದು ನಿಡುಸುಯ್ದು
ಪಿಂತಿರುಗಿದರ್ ಬೀಡಿಂಗೆ.

ಧರ್ಮಜಂ ಒಡವುಟ್ಟುಗಳ್ ಪದ್ಮವ್ಯೂಹದ ಮೋಹರಕೆಯ್ದಿ
ಭಂಗಬವಣೆ ಬಟ್ಟೊಡಂ ಕೈಸಾಗದೆ ಸಾಸದ ರಣಬಿಜ್ಜೆಯ ಕಜ್ಜದ ೪೦
ಗತಿಯುಂ ಕೋಳುವೋಗಿ ಪಡಿಮೊಗದಿಂ ಪಿಂತಿರುಗಿದುದಂ ಕಂಡು
ಕಾತರಂಬಟ್ಟು ಕಳವಳಿಸಿ, ಇನ್ನೆಂತಿದಂ ಬಗೆಹರಿಪುದೆಂದು ಚಿಂತೆ
ವೆತ್ತು ಮೊಗಂ ಬಾಡಿ ಮಿಣ್ಣನಿರ್ದ ಸಮಯದೊಳ್ ಸೋಮ
ಕುಲಜರ್ ಕೆನ್ನೀರ್ ಬೆವರ್ನೀರ್ ಸೋರ್ದು ಬಾಡಿ ಬೆಂಡಾಗಿ ಇಳಿ

ಮೊಗದಿಂ ಬಂದು ಧರ್ಮಜನ ಎದುರ್ವೆತ್ತು ಕೊರಳ್ಕುಸಿದು ನೋ
ರ್ದನಿಯಿಂದಿಂತಾಡಿದರ್-ಧರಣಿಪ! ಇಂತಪ್ಪ ಮೋಹರಂಬೊಕ್ಕು
ಮಾರಾಂತಿದಿರ್ಚಿ ಪಳಂಚಿ ಪೊಣರ್ಚಿದೊಡಂ ಆಗದೆ ಮಾಗದೆ ಪಜ್ಜೆ
ಗೆಟ್ಟು ಬಗೆಗೆಟ್ಟು ಎರ್ದೆಗೆಟ್ಟು ಅಳ್ಕಿಬಳ್ಕಿ ಬೆಮರಿಳಿಸಿ ಬೆಂಗೊ
ಟ್ಟೋಡಿ ಬಂದುದಾಯ್ತು ! ಕೇಳ್, ಅರಸ ! ಪೂಣ್ದೆಂಬೆಂ ; ಇದಂ
ಸಾಮನ್ಯರ್ಗಳವಲ್ಲಂ ! ಏಂಗೆಯ್ಯಲಕ್ಕುಂ ಪೇಳ್ ? ಎಂತಿದರ ೫೦
ಮಾಳ್ಕೆಯೊ ಅರಿಯಲಾರ್ಗಳವು ? ಕಷ್ಟಂ ಕಡುಕಷ್ಟಂ !

ಧರ್ಮಜಂ ನಿಡುಸುಯ್ದು ಮುಂತೇಂ ಗತಿಯೆಂದು ಮನ
ದೊಳ್ ಚಿಂತಿಸುತುಂ ನವೆದುಂ ನೊಂದುಂ ನುಡಿದನಿಂತು-ಆನೇಂ
ಪೇಳ್ವೆಂ ತಮ್ಮಾ ಇಂದೆಮಗಂ ಮಹಾದೇವನೇ ಮುಂಬಟ್ಟೆಯಂ ತೋರ
ಲಕ್ಕುಂ. ಇಳೆಯೊಳ್ ಕೃಷ್ಣಾರ್ಜುನರ್ ಪದ್ಮವ್ಯೂಹ ಭೇದಮಂ
ಅರಿತಿಹರ್ ಮತ್ತಂ ಬೇರೊಬ್ಬರಂ ಕಾಣೆನೀದಿಸೆಯೊಳ್. ಅಂದ
ಬಳಿಕ್ಕಂ ಈ ಅಪದೆಸೆಯೊಳ್ ಆಂ ಕೈಕಟ್ಟಿ ಕುಳಿರ್ಪುದು ತರವಲ್ಲಂ.
ಆನೀಗಳ್ ಪೋಗಿ ಅರಿಗಳನೆದುರ್ಚುವೆಂ. ಕೃಷ್ಣಾರ್ಜುನರ್ ಪಿಂದಿ
ರುಗುವನ್ನೆಗಂ ಕಾದಿರ್ಪುದು ತರವಲ್ಲಂ, ಗಡ !

ಆಗಳಲ್ಲಿಗೆಯ್ತಂದ ಅಭಿಮನ್ಯುಂ ಸಿರಿಮೊಗದೊಳ್ ಎಳೆನ ೬೦
ಗುವಂ ಅರಳಿಸಿ ಪುರುಡಿನಿಂ ಪುರುಪಿನಿಂ ಪಿರಿಯಯ್ಯನ ಪತ್ತೆ ಸಾರ್ದು
ಅಡಿಗಳ್ಗೆರಗಿ ಪೇಳ್ದನಿಂತು-ಬೊಪ್ಪ! ಇಂದೆನಗೆ ಅಪ್ಪಣೆಯಂ ನೀಡ
ಲಕ್ಕುಂ. ಆಂ ಪದ್ಮವ್ಯೂಹ ಭೇದಮಂ ಅರಿತಿಹೆನ್. ನೀಂ ನಿಶ್ಶಂಕೆ
ಯಿಂ ನಿಶ್ಚಿಂತೆಯಿಂ ರಣವೀಳ್ಯಮಂ ನೀಡಿ ಎನ್ನಂ ಪರಸಿ ಕಳಪುಂ.
ಆಂ ಕೆಚ್ಚೆದೆಯಿಂ ಪದ್ಮವ್ಯೂಹದ ಪೆರ್ಮೋಹರಂ ಬೊಕ್ಕು ಅರಿಗಳ
ತಲೆಗಳಂ ದಿಂಡುರುಳ್ಚಿ ಚೆಂಡಾಡಿ ರಣಕಾಳಿಯ ಕೊರಳ್ಗೆ ರುಂಡ
ಮಾಲೆಯಿಕ್ಕಿ ಕುಲಕೀರ್ತಿಯಂ ಬೆಳಗಿಪೆಂ! ಇದಂ ನಿಕ್ಕುವಂ !

ಕಿರಿಯನೆಂದ ಪಿರಿನುಡಿಯುಂ ಕೇಳ್ದ ರಾಜಸಭೆಯುಂ ಬೆಕ್ಕಸ

ಬೆರಗುಗೊಂಡು ಇದೇನಚ್ಚರಿಯೆಂದು ಕಣ್ಣರಳ್ಚಿ ನೋಡುತಿರೆಯಿರೆ
ಧರ್ಮಜಂ ನಲ್ಮೆಯಿಂ ಬಲ್ಮೆಯಿಂ ಕುವರನಂ ಬರಸೆಳೆದು ಎರ್ದೆಗಪ್ಪಿ ೭೦
ಮಂಡೆಯಂ ಮೂಸಿ ಮುಂಡಾಡಿ ಪೆರ್ಮೆಯಿಂ ಪಡಿನುಡಿದನಿಂತು–
ಎಲೆ, ಕಂದ! ನೀನಿಂತು ಅವಸರಿಪ ಕತಮಿಲ್ಲಂ. ಎನಿತೆನಿತೊ
ಧರಣಿಪರ್ ಮಹಾ ಮಂಡಳಿಕರ್ ರಣಕೆ ಬೆಂಗೊಟ್ಟು ಬಂದಿರೆ ನೀಂ
ಸಲ್ವುದೆಂತ್ತೈ ? ತಾಳ್, ಬಾಳ್! ನಿನ್ನೊಳ್ ಎಣೆಯಿಲ್ಲದ ಬಲ್ಪಂ
ಇರ್ಕುಮೆಂಬುದಂ ಬಲ್ಲೆಂ. ಆದೊಡಂ ಸಿಸು ನೀನೆಲೆ ಮಗನೆ!
ರಣರಂಗದ ಕಟ್ಟುಬ್ಬರದ ಕೂರಗಜ್ಜಂ ನಿನಗಕ್ಕುಮೆ ಕಂದ ! ಇದಂ
ನೀನೆಂತು ಸೈಪೆಂ ?

ಅಭಿಮನ್ಯು ಕೆಚ್ಚಿನಿಂ ಪುರುಪಿನಿಂ ವೈವೆರ್ಚಿ ತೆಕ್ಕನೆ
ನುಡಿದಂ–ಬೊಪ್ಪ! ಎನ್ನಂ ಕಿರಿಯನೆಂದುಂ ಸಿಸುವೆಂದುಂ ಅಳ್ಕರೆಯಿಂ
ಪಿಂತಿಕ್ಕದಿರ್. ಆಂ ಸರ್ವ ಸಾಸದಿಂ ಪದ್ಮವ್ಯೂಹಮಂ ಭೇದಗೆಯ್ವೆಂ. ೮೦
ಅದರ ಮರ್ಮಮಂ ಅರಿತಿಹೆನ್. ಒಳಪುಗುವ–ಪೊರಗೆಯ್ದುವ
ಸಾಸವೆನಗೆ ತಿಳಿದಿರ್ಕುಂ. ಬೊಪ್ಪ! ನೀಂ ಪಿಂಜರಿಯದಿರ್ ;
ಅಳ್ಕದಿರ್ ನಿಚ್ಚಟ ಮನದಿಂ ಕಳಿಪೆನ್ನಂ ಎಂದು ಬೇಡಿಕೊಳ್ವೆಂ.

ಧರ್ಮರಾಯಂ–ಕೇಳ್, ಮಗನೆ! ಆಂ ನಿನ್ನಂತಪ್ಪ ಪಸುಳೆಯಂ
ಪೊಣರ್ಕೆಗಟ್ಟಲಕ್ಕುಮೆ? ತೋಳ್ಬಲ್ಪಂ ಬಿಲ್ ಬಿಜ್ಜೆಯುಂ ಎನಿತಿ
ದೊರ್ಡಂ ಪದ್ಮವ್ಯೂಹಂ ಪಿರಿಯಮೋಹರಂ ಕಂದ ! ಇದರೊಳ್
ನೀತಿಗೆಟ್ಟರ್ ಕೂಳರ್ ಕೀಳರ್ ಪೊಲ್ಲರ್ ಧೂರ್ತರ್ ಮತಿಹೀನರ್
ಅನೀತಿಯೊಳ್ ಅಧರ್ಮದೊಳ್ ಕಾದಿ ಮೋದಿ ತಲೆಯಂ ತರಿವರ್.
ನೀಂ ಇಂತಪ್ಪ ಗಡಣದಿಂ ದೂರಮಿರಲಕ್ಕುಂ. ಪಿರಿಯರ್ಗೆ ಕಲಿ
ತರ್ಗೆ ನುರಿತರ್ಗೆ ಮಾತ್ರಮೆ ಸಾಧ್ಯಂ ಕಣ ಪದ್ಮವ್ಯೂಹಂ ! ೯೦

ಅಭಿಮನ್ಯು–ಓ ಇದೇಂ ಬೊಪ್ಪ! ಮನದೊಳ್ ಇಂತೊಂದು
ಸಂಕೆ ? ಆಂ ಅರಿಯನೇಂ ರಣ ಪಂಡಿತರಂ ? ಧೂರ್ತರಂ ತರಿದು

ತುರಿದು ಗರ್ವ್ವನೆ ಬಾಣಸುಗೆಯ್ಯದಿರ್ದೊಡೆ ಆಂ ಅಭಿಮನ್ಯು ವಲ್ತು ; ಆರ್ ಕಾಣರೆನ್ನ ತೋಳ್ವಲಮಂ ?

ಧರ್ಮರಾಯಂ–ಅಕ್ಕೆ ಮಗನೇ! ನಿನ್ನ ಬಲ್ಪುಂ ಕೆಚ್ಚುಂ ಕಟ್ಟಾಳ್ತನಂಗಳಂ ಕಂಡಿರ್ಪೆನ್ ; ಅರಿತಿರ್ಪೆನ್. ಆದೊಡಂ ಸಿಸು ನೀನೆಂದೊಡೆ ಬೇಸರಿಸದೆ ಬೇಯದೆ ನೋಯದೆ ವಿಣ್ಣಾನಿರ್ ಕಂದ! ಕೂರರಣಮೆಂದೆಂದಿಗುಂ ಎಳಯರ್ಗಲ್ತು.

ಅಭಿಮನ್ಯು ಆ ಮಾತಿಂಗೆ ಕಿವಿಗೊಡದೆ ಅಸವಸದಿಂ ಇಂತೆಂದಂ–ಬೊಪ್ಪ! ಇಂತಪ್ಪ ದುಶ್ಶಂಕೆಯಂ ನೀಂ ಮನದೊಳಿಡಲಕ್ಕುಮೆ? ನೀನೆಲ್ಲಂ ಬಲ್ಲವನಿರ್ದು ಇಂತೆಂತು ಬಲ್ಪುಂ ಕೆಚ್ಚುಂ ಕುಸಿದು ಮಣ್ಣಾಯ್ತು ? ಇಂತೇಂ ಕಳವಳಂ? ಚಿಂತೆಯ ಗಾವರಂ? ಇದಂ ನಿಜ ಬಲ್ಪಿಂಗೆ ಕುತ್ತಲ್ತೆ ?

ಧರ್ಮರಾಯಂ–ಕೇಳ್ಳೈ ಕುವರ! ದಗದಗಿಪಗ್ಗಿಯಂ ಪಾಯಲಕ್ಕುಂ! ಮರಿಸಿಂಗನೊಡನೆ ಸೆಣಸಲಕ್ಕುಂ! ಅಂಬುಧಿಯ ಸುಳಿಯೊಳ್ ಸರಸವಾಡಲಕ್ಕುಂ! ಪದ್ಮವ್ಯೂಹದ ಗಡಣಂಗಳೊಳ್ ನುಗ್ಗಿ ಗೆಲ್ಲಲಹುದೆ ಪೇಳ್ ?

ಅಭಿಮನ್ಯು–ಬಿಡು, ಬಿಡು. ಈ ಚಿಂತೆಯ ಗಾವರಮಂ ! ಬೊಪ್ಪ ! ಆನೀ ಎರ್ದೆಯೊಳುಸಿರುಳ್ಳನ್ನೆಬರಂ ಬೆದರದೆ ಪಿಂಜರಿಯದೆ ಅರಿಗಳ ತಲೆಯಂ ಸೆಂಡಾಡಿ ರಣದೇವಿಗೆ ಬಿರ್ದಿಕ್ಕುವೆಂ. ೧೨೦

ಧರ್ಮರಾಯಂ–ಎಲ್ಲಂ ತಿಳಿದಿರ್ಪೆಂ ಕಂದ ! ಆದೊಡಂ ಇಂತಸವಸದಿಂ ಪುರ್ಚುಗೊಳ್ಳದೆ ಯೋಚಿಸಲ್ವೇಳ್ಕುಂ. ಕಂದ! ವೈರಿರಕ್ಕಸರೊಡಂ ಪೋಣರ್ಕೆಯೊಳ್ ಪೋರ್ವುದು ಎಳೆಯರ್ಗಕ್ಕುಮೆ? ಧೂರ್ತಧೂರ್ತರೆನಿಪ ಕೃಪ, ರಾಧೇಯ, ಶಕುನಿ, ಗುರುತನಯ, ಭೂರಿಶ್ರವ, ಜಯದ್ರಥರ್ ದಟ್ಟಣಿಸಿ ನಿನ್ನ ಪಿಂದುಮುಂದ್ವೈದುವರ್ ಕಂದ ! ಕುರಿಯಂ ಕಂಡು ತೋಳಂಗಳ್ ಸುಗ್ಗಿವಂತಾದೊಡೇನಕ್ಕುಂ ?

ಅಭಿಮನ್ಯು ಅಕ್ಕೆ, ಅಕ್ಕೆ ! ಇನ್ನುಮಿನ್ನುಂ ನೂರಾರು ಮಂದಿ ಶೂರಾಧಿಶೂರರಿರ್ದೊಡಂ ಭಯಮಿಲ್ಲಂ. ನೀಂ ಚಿಂತೆಯಂ ಬಿಟ್ಟು ಪರಸಿ ಕಳಿಪ್ಪೈ. ಪದ್ಮವ್ಯೂಹದೊಳಡಂಗಿ ರಕ್ಷೆವಡೆದ ವೈರಿ ೧೩೦ ಕುಲಮಂ ಜವದ ಜೋನಮಂಗೆಯ್ಯದೆ ಮಾಣ್ದೆನಾದೊಡಾಂ ಅರ್ಜುನನ ಸೂನಲ್ತು !

ಅಂತೆಂದ ಕುವರನ ಬೆನ್ನಂ ನೀವಿ ಅಕ್ಕರೆಯಿಂ ಕೇಳಿಸಿದನಿಂತು ಧರ್ಮರಾಯಂ–ಅಯ್ಯ, ಕುವರ! ನಿನ್ನೆಳತನದೊಂದು ಕಟ್ಟುಬ್ಬರದ ಬಲ್ಪು ನಿನ್ನೊಳಿರ್ಕುಮೆಂದೊಡಂ ನೀಂ ನಿಧಾನಿಸಲಕ್ಕುಂ. ಎನಿತೆಸಿತೊ ಬಲ್ಪಿನ ಬೀರರುಂ ಪದ್ಮವ್ಯೂಹಂ ಭೇದಿಸಲ್ ಆಗದೆ ಮಾಗದೆ ಕೈಸೋತು ಮೈಸೋತು ಬೆಂಗೊಟ್ಟು ಪಿಂದಿರುಗಿ ಬಂದಿರ್ಪುದಂ ಕಣ್ಣಾರೆ ಕಾಣುತುಂ ಇಂತವಸರಂ ಸಲ್ಲದು ಮಗನೇ !

ಅಭಿಮನ್ಯು–ಕೇಳಿನ್ನ ಪಿರಿಯಯ್ಯ! ಸಿಂಗಂ ಬೊಳ್ಳುಗಳ್ಗೆ ಬೆದರುವುದುಂಟೆ? ಆನೆ ತೋಳಂಗಳ್ಗೆ ಅಳ್ಕುವುದುಂಟೆ ? ಇದು ೧೩೫ ಬರೀ ಸಂಕೆಯ ಸೊಲ್ಲಲ್ಲದೆ ಮತ್ತೇನಲ್ಲಂ. ಬಾಲನಿವನೆಂದಿನ್ನುಂ ನೋಯದಿರ್ ಮರುಗದಿರ್. ಆಂ ರಣರಂಗಮಂ ಪೊಕ್ಕು ಬಲ್ಪಿನ ಬೀರರಂ ಎದುರ್ಚಿ ಪೊಣರ್ವೆಂ. ಇದಂ ಪೊಳ್ಳಲ್ತು; ಬಡಿವಾರಮಲ್ತು. ಅರಿ ರಕ್ಕಸರ್ ಭೀಮಾದಿ ವೀರರಂ ಬಡಿದು ಜಡಿಗುಟ್ಟಿ ಪಿಂತಿಕ್ಕಿದೊಡಂ ಎನ್ನೊಡಂ ಸಂಗರಂಗೆಯ್ದು ಅರಿಯಲಕ್ಕುಂ ಬಲ್ಪಿನ ಬೀರತನಮೇನೆಂಬುದಂ ಬೊಪ್ಪ !

ಧರ್ಮರಾಯಂ–ನಿನ್ನ ಬಲ್ಪುಮಂ ಆನರಿಯೆನೆಂದಿಲ್ಲಮಿಲ್ಲಂ. ನೀಂ ಕಲ್ತು ಬಲ್ತು ಅರಿತು ನುರಿತು ಎನ್ನ ಮಾತಂ ಮಾನಿಸದಿರ್ದೊಡೆಂತು ? ಇಂತಪ್ಪ ಚಲಂ ಆರ್ಗಂ ಸಲ್ಲದು ಕಣಾ !

ಅಭಿಮನ್ಯು–ಈಗಳ್ ತಾಳ್ಮೆಗಂ ಪೊಳ್ತಿಲ್ಲಂ. ಸಂಕೆಯ ೧೪೦ ಗಾವರಮಂ ಬಿಟ್ಟು ಅಪ್ಪಣೆಯಂ ನೀಡಿಮೊಡೆ ಸಾಲ್ಗುಂ. ಪೋರ್ಪುದು ಗೆಲ್ವುದು ಎನಗಕ್ಕುಂ !

ಧರ್ಮರಾಯಂ ತನ್ನೊಳ್ ಮರುಗಿ–ಕಂದ! ಇಂ ನಿನ್ನಿಚ್ಚೆಯಣಮಂ ಕಿಡಿಸಿ ಪಿಂತಿಕ್ಕುವುದು ಸರಿಯಲ್ತೆಂದು ಕಳಿಪುವೆಂ. ಪೋಗಿ ಬಾರ್ಕೈ ಮಗನೆ! ಕೊರ್ವಿನ ಸೊರ್ಕಿನ ಕೈದುಗಾರರ ಬಿಗುಹಂ ಪೊಯ್ದು ದಿಂಡುರುಳ್ಚುವೊಡೆ ನೀಂ ತಕ್ಕಿನ ಬೀರ ಜೋದಂ ಕಣಾ! ನಿನಗೆ ಒಳ್ಳಿತಕ್ಕೆ ಮೇಲಕ್ಕೆ ಶುಭಮಕ್ಕೆ! ನಿನಗೆಮ್ಮ ಕುಲದೈವದ ರಕ್ಷೆ! ರಣ ಕಾಳಿಯ ರಕ್ಷೆ!

ಆಗಲಾ ಚಣದೊಳ್ ಕೊರಳ್ ಬಿಗಿದು ಸುಕದುಕ್ಕಗಳಿಂ ಬಣ್ಣಗೆಟ್ಟುದು ಮೊಗಂ. ಎಳಯನಂ ಬಿಗಿದಪ್ಪಿ ಮೈದಡವಿ ಮುಂ ೧೬೦ ಡಾಡಿ ಪೊನ್ನ ಹರಿವಾಣದಿಂ ರಣವೀಳ್ಯಮಂ ಕೊಂಡಿತ್ತು ಎರ್ದೆತುಂಬಿ ಒಳ್ನುಡಿಗಳಿಂ ಮತ್ತಂ ಮತ್ತಂ ಪರಸುತೆ ಅಪ್ಪಣೆಯಂ ನೀಡಿದಂ. ಅಭಿಮನ್ಯು ಸಂತಸವಟ್ಟು ಗಂಡುಗಚ್ಚೆಯಂ ಬಿಗಿದು, ದಟ್ಟಿಯಂ ಬಿಗಿಗಟ್ಟಿ ಕತ್ತುರಿಗಂಧಮಾಲ್ಯಾದಿಗಳಿಂದೊಪ್ಪಂಗೊಂಡು ಪಣೆಯೊಳ್ ತಿಲಕವಿಟ್ಟು ಕಿರೀಟಮಂ ತೊಟ್ಟು, ಪೊಳೆಪೊಳೆವ ಕೂರ್ವಾಳಂ ಕೈಕೊಂಡು ಕೆಚ್ಚಿನಿಂ ಪುರುಡಿನಿಂ ಪೊರಡಲಣಿಯಾದಂ ಕೆಚ್ಚಿನ ಕಿಡಿಯೇ ಮೈವೆತ್ತು ನಿಂದವೊಲ್.

ಸಿಸುವಿವನಂ ರಿಪುಗಳ್ ಸೂಳಯಿಸಿರ್ದ ಕಾಳ್ಗಿಚ್ಚಿಗೆ ನೂಂಕುವರೆ? ಶಿವ,ಶಿವಾ ತಣ್ಗೊಳದ ಕನ್ನೈದಿಲೆಯುಂ,ಎಳೆಗದಳಿಯ ಸುಳಿಯುಂ, ಸುರಲತೆಯ ಕುಡಿಯುಂ ಧಗಧಗಿಪ ದಾವಾನಲಮಂ ಪುಗಲಕ್ಕುಮೆ? ೧೭೦ ಪಾಪಿಗಳಪ್ಪ ಲೋಗರ್ ಎಳಮಗನಂ ಕಂಡು ಕಾಣದ ಮಾಳ್ಕೆಯಿಂ ಜವನ ಜೂಜಿನ ಕಾಳೆಗದ ಕಣಕ್ಕಂ ನೂಂಕಿದರ್! ಎಂದುಮೆಂದು ತಂತಮ್ಮೊಳ್ ಪಳಯಿಸಿದುದು ಅಮರಗಣ ಮತ್ತಮಾ ಪರಿವಾರಂ ರಣವಿಜ್ಜೆಯುಜ್ಜುಗದೊಳ್ ಸಜ್ಜುಗೊಳ್ಳುತುಂ–ಅಕ್ಕಟಕ್ಕಟಾ! ಕುಮಾರ ಕಂಠೀರವಂ ಪೊರವಂಟನೆ ಮಹಾಮೋಹರಂ ಪುಗಲ್? ಹಾ! ಇಂತೆಂತು ನಿರ್ದಯನಾದನೈ ಧರಣಿಪಂ. ಅಹಹ! ಯೋಗದ ಚಾಗದ ಓಜೆಯ ಬಿಜ್ಜೆಯ ಕುಲಕೀರ್ತಿಯ ಕುವರನಂ ಕಿಚ್ಚಿಗಿಕ್ಕಿ ಬರ್ಪ

ರಾಜ್ಯಮಂ ಸುಡಲಕ್ಕುಂ! ಎಂದಾಡಿ ನಿಡು ಸುಯ್ಯೆ ಒಡಲ್ಬಳ್ಳಿಯುಂ ಸಂಕಟದಿಂ ನಲುಂಗಿ ಸುರುಂಟಿದುದು ತಾಯ್ಗರುಳಂತೆವೋಲ್.

ರಣಾಂಗಣಕೆಂದು ಅಣಿಯಾದ ತುರಗತತಿಯು ನಲ್ಗೆಜ್ಜೆಗಳ್ ಗಲ್‌ಗಲ್ ಎನಿಪಂತೆ ಚೆಚ್ಚರದಿಂ ಮುಂಚಿಬರಲ್ ರಾವುತರ್ ಭೋಯೆಂದೊರಲ್ದು ಮುಂಬರಿಯೆ ಘೀಯೆಂದು ಘೀಳಿಡುವ ಪೇರಾನೆಗಳ್, ಗಡಬಡಿಸುವ ವರೂಥಗಳ್ ಮತ್ತಂ ಸಾಮಂತರ್ ಪಡೆವಳರ್ ಕೂಡಿ ಮುಂದ್ವೈಸಿ ಸಂಗ್ರಾಮ ಕೋಲಾಹಲಂ ಗಡಣಿಸಲ್, ಪಾಂಡು ಕುಲ ಲಲಾಮನ ಪೊಂದೇರ್ ವಗೆವಗೆಯ ಘನಾಸ್ತ್ರಗಳಿಂ ತುಂಬಿ ಪೇರ್ವೈಸಿ ಚೆಚ್ಚರದಿಂ ಮುಂದೆಯ್ದು ನಿಜಪತಾಕೆಯ ಸಿಂಗರದಿಂ ನಿಲ್ದುದು ಕಣ್ಗೆಡ್ಡವಾಗಿ. ೧೮೦

ಅಂತಪ್ಪುದುವಾಗಳುರ್ಕಿದ ಬಲ್ಪಿನ ಬಿಲ್‌ವಿಜ್ಜೆಯ ತೋಳ್ವಲದ ಚಪಳಂ ಪೊಸಪುರುಪಿನಿಂ ಮೆಯ್ಯುಂ ಆವರಿಸಿ ರಥಮಂ ಏರಿದ ಕುವರನಂ ಬೀಳ್ಕೊಡುತ್ತೆ ಪಿತೃಚತುಷ್ಟಯರುಂ ಕಿರಿಯನೆಂದು ನಲ್ಮೆಯಿಂ ಬಲ್ಮೆಯಿಂ ಎಡಬಲದೊಳ್ ನಡೆದರ್ ಪೊಳಲ್ ದಾಂಟುವನ್ನೆಗಂ; ಕೊರಳ್ತುಂಬಿದುದು ಮನಂ ತುಂಬಿದುದು ಕರುಣೆ ಕಟ್ಟೆಯೊಡೆದು ಕೋಡಿವರಿದವೊಲ್. ಪದ್ಮವ್ಯೂಹಮಂ ಗುರಿಗೊಂಡ ಸೇನೆ ಬೊಬ್ಬಿರಿದು ಸೂಳೈಸಿದುದು ಲಗ್ಗೆಯ ಬುಗ್ಗೆಯಿಂ ಸಿಡಿಲ್ ಗುಡಿಗುಡಿಪಂತೆ. ಕೊಂಬು ಕಹಳೆಗಳ್ ಮೊಳಗಿ ಅರಿರಾಯರ ಕುಲಕೀರ್ತಿಯಂ ಜಾಲಾಡಿ ಕೊಡವಿ ಮೂಂಕರಿಸಿ ಹೂಂಕರಿಸಿ ರೋಷದಿಂ ಬಲ್ಪಿನಿಂ ರಣವಿಜ್ಜೆಯ ಪುರುಪಿನಿಂ ಮುಂಬಯಣಮಂ ಬೆಳಸಲೊಡಂ ಧರ್ಮಜಂ ಪರಸಿ ಅನುಜರೊಡಂ ಬೀಳ್ಕೊಟ್ಟಂ. ೧೯೦

ಪೊಂದೇರ್ ಮುಂಬಟ್ಟೆಯಂ ಪಿಡಿದು ಸಾರ್ದು ಕುರುಕ್ಷೇತ್ರದ ಪಥಮಂ ಪಿಡಿಯೆ ಸಾರಥಿ ಇಂತೆಂಗುಂ—ಅಯ್ಯ! ವೀರಕುಮಾರ! ನೀನಳವಿಯೊಳ್ ಎರ್ದೆಗೊಟ್ಟು ನಿಲ್ಲಲರಿತುಂ ಕೊರಳ್ ಬಲುಹ ನರಿ

ಯದಿರ್ದೊಡೆಂತೈ ? ಕೃಪಂ, ಗುರು ತನೂಜಂ, ತರಣಿತನಯಂ, ದ್ರೋಣಂ, ಜಯದ್ರಥಂ ಮುಂತಪ್ಪ ಕುರು ವೀರರಂ ವೆಗ್ಗಳಿಯ ರಕ್ಕುಂ. ನೀನಿದೇ ಮೊದಲಲ್ತೆ ರಣರಂಗಮಂ ಪುಗುವುದು ? ರಣಕೆ ಬಗೆವಗೆಯ ಕೂರಾತಿಕೂರ ವಿಜ್ಞೆವೇಳ್ಕುಂ.

ಅಭಿಮನ್ಯು–ಕೇಳ್ ಸಾರಥಿ ! ನೀನರಿಯೆ ನಮ್ಮ ನವಿಶ್ವಾಸ್ಥಿತ್ಯಂತರಮಂ. ಇಂತಪ್ಪ ಪುಲ್ಮಾನಿಸರಂ ಗಣ್ಯರೆಂದೊಡೆ ಏಂ ಬಹುದು ?

ಸಾರಥಿ-ಅಯ್ಯ, ವೀರವರ ? ಏಗಳುಂ ತಾಮೆ ಜಗದಾದಿ ವೀರರೆಂಬರಲ್ತೆ ಅರಿಕುಲಜರ್ ? ೨೧೦

ಅಭಿಮನ್ಯು-ಇರಿರ್, ಈಗಳ್ ಇಂತಾಡಿ ಫಲವೇಂ? ಒರ್ಮೆ ಕುರುಕ್ಷೇತ್ರಮಂ ಪೊಕ್ಕೊಡಹುದೆನಿಪೆಂ.

ಸಾರಥಿ–ವೀರ ! ನಿಕ್ಕುವಂ. ನೀನೀಗಳ್ ಎಚ್ಚರಿರವೇಳ್ಕುಂ. ಎಂದುಮೆಂದುಂ ಇಂತಪ್ಪ ಮೋಹರದೊಳ್ ನೀತಿನಿಯಮಂಗಳ್ ಧರ್ಮಕರ್ಮಂಗಳ್ ಒಪ್ಪಂಗೊಳ್ವುದು ಕನಸು ಕಣಾ !

ಅಭಿಮನ್ಯು–ಇಂತಿದರೊಳ್ ಮೋಹರವೇನೆಂಬುದಂ ಮನ ದರಿಕೆಯೊಳಕ್ಕಿ ಪದ್ಮವ್ಯೂಹಮಂ ಪುಗುತಿರ್ಪೆಂ. ಅರಿಗಳಂ ಸದೆ ಬಡಿದು ರಣದೊಳ್ ಹೋರಾಡಿ ತೋಳ್ಬಲಮಂ ಪೂರೈಸಿ ರಣ ದೇವಿಗೆ ಪರಕೆಯಂ ಸಲಿಪೆಂ.

ಸಾರಥಿ–ಆಯ್ತಾಯ್ತು ; ಒಪ್ಪಿದೆಂ. ವೈರಿ ಗಂಡ ಚಂಡ ಮಾರ್ತಾಂಡರೆನಿಪ್ಪ ಅರ್ಜುನ ಸೂನು ನೀನಲ್ತೆ? ನೀಂ ನಿನ್ನಯ್ಯ ನಂ ವಿಶ್ವಾದರ್ಮ ಏಳ್ಗೆವಡೆದು ಚಿರಕಾಲಂ ಬಾಳ್ಗೆ. ೨೨೦

ಅನಿತರೊಳ್ ಕುರುಕ್ಷೇತ್ರದ ರಣಾಂಗಣಂ ಕಂಡು ಬರೆ ನೆಟ್ಟ ಕಣ್ಣಾಲಿಗಳಂ ಕೀಲಿಸದೆ ಅಭಿಮನ್ಯು-ಸಾರಥಿ ! ಬೀರ ಕೈದುಗಾರರಂ ಸಮಂತು ಕವಡು ಮಾಯೆಯ ಪೊಲ್ಲದಾಟದ ಪ್ರಚಂಡ ತಂಡಮಂ ನೋಡ್ದೈ.

ಸಾರಥಿ-ಕುವರ ! ನಿನಗೊಳ್ಳಿತಕ್ಕೆ ! ರಣದೇವಿಯ ರಕ್ಷೆ ನಿನಗಿರ್ಕುಂ. ಆಕೆ ನಿನ್ನ ತಲೆಗಾಯ್ವಳ್ಕೆ !

ಅಭಿಮನ್ಯು ಬಿಲ್ಲನಾರಿಯಂ ಜೇವಡೆಸಿ ಜುದ್ದವಂ ಸಾರ್ದು ಅಣಿಯಾದಂ. ಆಗಳ್ ನಿಡುಸೈನ್ಯಂ ಒರ್ಮೆಗೆ ತಂತಮ್ಮ ಬಿಲ್ಲ ನಾರಿಯಂ ಜೇವಡಸಿಯುಂ, ಕೂರ್ವಾಳಂ ಜಳಪಿಸಿಯುಂ, ಶಸ್ತ್ರಾಸ್ತ್ರಂಗಳಂ ಠಂಕಾರಂಗೆಯ್ದುಂ ಹೋಯೆಂದುಂ, ಭೋಯೆಂದುಂ, ಜೈಕಾಳಿಯೆಂದುಂ, ಜೈಶಂಭೋಯೆಂದುಂ ಮೊರೆಯುತಂ ಕುರುಕ್ಷೇತ್ರಮಂ ಸೇರ್ದು ನಾರ್ವ ಪೆಣಂಗಳ ಬಣಂಬೆಯಂ ದಾಂಟಿ ಮುನ್ನಡೆದುದು ಧೈರ್ಯಸ್ಥೈರ್ಯದಿಂ. ೨೩೦

ಕುರುಕ್ಷೇತ್ರದ ವೀರರ್ಕಳ್ ಕಟ್ಟಚ್ಚರಿಯಿಂ ಬೆಕ್ಕಸಬೆರಗುಗೊಂಡು ಇಂತು ಸೂಳ್ಳೈಸಿ ಮಂದ್ಯೆಸಿ ಅಬ್ಬರಿಸುತಂ ಕೆಚ್ಚಿನಿಂ ಕಿಚ್ಚಿನಿಂ ಮುನ್ನುಗ್ಗುವ ದಂಡಿಂಗೆ ಪೊಚ್ಚ ಪೊಸ ದಳಪತಿಯೆನಿಸಿ ಪೊಂದೇರನೇರ್ದು ಬಿಲ್ಲನಾರಿಯಂ ಜೇವಡೆಸುವನಾರಿರ್ಕುಂ ? ತ್ರಿವಿಕ್ರಮನೊ ? ತ್ರಿಪುರಾರಿಯೊ? ಸುರಪತಿಯೊ? ಮೇಣಾವ ವೀರಾದಿವೀರನೊ ? ಆರಿರ್ಕುಮೆಂದಾಲೋಚಿಸಿ ಸಂಕಿಸಿ ಕೊರಳಂ ಕೊಂಕಿಸಿ ಕಣ್ಣೊಳ್ ಕಣ್ಣಿಟ್ಟು, ಬಿಲ್ಲಂ ಜಂಕಿಸಿ ವಿಶಿಖಮಂ ತೆರುಂಬಿ ಸಜ್ಜುಗೊಂಡ ಸೌಬಲ ಜಯದ್ರಥರುಂ ಬಿಲ್ಲಂ ಬಿಗಿವಿಡಿದು ಬಾಣಮಂ ಪೂಡಿದರ್. ಮನದೊಳ್ ಕುಲದೈವದ ನೆನವರಿಕೆಯಿಂದೆ. ಎದುರುವಕ್ಕದ ಶೌರ್ಯಾಟೋಪದ ಭಂಗಿಯಿಂ ಮನಂಗೆಡುತಿರೆ ಎರ್ದೆ ನಡುನಡುಗಿ ಕಳವಳದಿಂ ದಣಿಯಾಗಲ್ ಸೌಬಲಂ ಅಳ್ಕಿ ಬಳ್ಕಿ ೨೪೦

ಜಯುದ್ರಥಂಗೆಂದಂ–ಇಂದೆನ್ನ ಕರಕೌಶಲಂ ಬುದ್ಧಿ ಕೌಶಲಂ ಕೆಟ್ಟು ಸುಟ್ಟುರಿದು ಪಾಳಾಗುವೊಲ್ ತೋರ್ಪುಂ. ಪದ್ಮವ್ಯೂಹದ ರಣ ಬೆಂಕೆಗೆ ನಾವೆ ಪ್ರಥಮ ಆಹುತಿಯುಪ್ಪುದೆ ದಿಟಮೆನಿಸುಗುಂ!

ಜಯದ್ರಥ-ದಳಪತಿಯ ರಥಂ ಕಣ್ದಿಟ್ಟಗಿನ್ನುಂ ದೂರ ಮಿರ್ಕುಂ, ದಳಪತಿ ಯಾರೆಂದರಿಯದೆ ಇದರ ನಿರ್ಣಯಂ ಕಡು ಕಷ್ಟಂ. ಆ ರಥಂ ಮುಂಬರಿದು ಬಳಿಸಂದ ಬಳಿಕ್ಕಂ ವಿಚಾರಂ. ೨೫೦

ಸೌಬಲಂ–ಎನ್ನೆರ್ದೆಯುಂ ತಳ್ಳಂಕಗೊಂಡಿರ್ಪುದು ಕಣ! ಆರಂ ಮುಂದೂಡಿರ್ಪರೊ ಪಾಂಡವರ್ ಕಾಣೆಂ. ಏಂ ಅಟ್ಟಹಾಸಂ? ಏಂ ಸೊರ್ಕುಂ? ಏಂ ಕೊರ್ವುಂ? ಆಹ ವೀರಾತಿವೀರನೆನೆ ಮಿಕ್ಕು ಮಿಗಾರಿದ ಶೌರ್ಯಾಟೋಪಂ ಪೊಣ್ಮುತಿರ್ಕುಂ. ಜವಂ ಧರೆಗಿಳಿದು ಬರ್ಪನೊ ಎನಲ್ಕೆ ಜರ್ವಿ ಜಂಕಣಿಸುತಿರ್ಪುದು ಸೇನೆ, ಗಡ!

ಅನಿತರೊಳ್ ಪಾಂಡವ ಸೇನೆಯುಂ ತರಿಸಂದು, ಪೊಂದೇರ್ ಮುಂದೆಯ್ದಿ ಅಭಿಮನ್ಯು ಕಣ್ಗೆಸೆಯಲ್ ಜಯದ್ರಥಂ ತೆಕ್ಕನೆ ತಾತ್ಸಾರಂಬಟ್ಟು ಮೂಂಕರಿಸಿ ಹೂಂಕರಿಸಿ ಅಟ್ಟಹಾಸಂಗೆಯ್ದು ಕೊರ್ವಿನಿಂ ಸೊರ್ಕಿನಿಂ ಜರ್ವಿ ತೋಳ್ಚಪ್ಪರಿಸುತಂ ನುಡಿದಂ–ಎನ್ನೈ ತ್ರಿಪುರಾರಿಯೊಲ್ ವೀರಾತಿವೀರತನದಿಂ ಮುಂದೆಯ್ದು ಬಂದೈ? ಇದೇಂ ಸೊರ್ಕಿನುರ್ಕೊ? ನಿಜ ಬಲ್ಪಿನಬ್ಬರವೊ? ಏಂ, ನಿನ್ನ ಪಿರಿಯರ್ಕಳ್ಗೆ ಎರ್ದೆಯಿಲ್ಲ ನಿನ್ನಂ ನೂಂಕಿದರೇಂ ರೊಚ್ಚಿನ ಕಿಚ್ಚಿನ ಪೆರ್ ವೋಹಕೆ ಯಜ್ಞಪಶುವಂಗೈದು? ೨೬೦

ಅಭಿಮನ್ಯು–ಆಹ, ಏಂ ಬೀರತನವೊ? ಇಂತು ಕೀಳ್ನುಡಿಗಳಿಂಗಳಪುವುದಲ್ಲದೆ ಇನ್ನೇಂಗೆಯ್ಯಬಲ್ಲಿಂ? ಇದಲ್ತೆ ನಿನ್ನ ಶೌರ್ಯಾಟೋಪಂ?

ಸೌಬಲಂ–ಓವೋ! ಇನಿತೊಂದು ಕೊರ್ವಿನಿಂ ನುಡಿವೊಡೆ

ನೀನಾವ ಬೀರನೊ? ಇನ್ನುಂ ಕಣ್ಣುಂ ತೆರೆಯದಿರ್ದೊಡೆಂ ಅಟ್ಟ ೬೮೦
ಹಾಸವೇಂ ಕಮ್ಮಿಮ್ರಯಿಲ್ಲಂ. ಕೊರ್ವಿನಿಂ ಬಿಲ್ಲನಾರಿಯಂ ಜೇವಡೆಸಿ
ದೆಲೈ ಮೂಳ! ಕೇಲಿವನವೆಂದು ಭಾವಿಸಿ ಬಂದೆಯಲ್ತೆ ಪದ್ಮವ್ಯೂ
ಹಮಂ? ಅಹ್ಹಹಾ ! ಇದಂ ನಿನ್ನಂತಪ್ಪ ಮರುಳಂಗೆ ಸಲ್ವುದುಂ;
ನೀನೀಗಳೆ ರಣಕೆ ಬೆಂಗೊಟ್ಟು ನರಿಯಂತೆ ನಾಯಂತೆ ಬಾಲಮಂ
ಮುದುಡಿ ಪೇಳದೆ ಕೇಳದೆ ಪೋಗೆಲವೊ ಕೂಳ! ಅಂತಃಪುರದೊಳ್
ಕದ್ದಡಂಗೆ ನೀಂ ತಕ್ಕಂ ಕಣಾ !

ಜಯದ್ರಥಂ ಮುಂದೆಯ್ದಿ ಕೊರ್ವಿನಿಂ ತಳರ್ನಾಲಿಗೆಯಿಂ
ಕೀಳ್ಮಾಡಿ ರೋಷದಿಂ ತೋಳ್ಚಪ್ಪರಿಸಿ ನುಡಿದನಿಂತು–ಎಲೆ, ಎಲವೊ
ಕೂಳ ! ಇಂದು ರಣದೇವಿಗೆ ನೀನಲ್ಲದಿನ್ನಾರಂ ಕೊಚ್ಚಿಬಿರ್ದಿಕ್ಕಲ
ಕ್ಕುಂ? ಮಿಳ್ತುವಿನ ಬಾಯಂ ಪುಗಲ್ ಏಂ ದೆಖ್ಖಾಳತನವೊ ದಕ್ಕ ೬೯೦
ಡಿಗ ! ಇಂತಾತುರ ಕಾತರವೇಕೆ? ಈ ಲೋಕ ತೃಷ್ಣೆಗೆ ಎಣೆ
ಯಿಲ್ಲೈ! ನಿನ್ನವರ್ ನಿನ್ನಂ ಮಿಳ್ತುವಿಂಗೆ ಬಲಿಗೊಡುವುದು ನೆಲಂ
ಬಡೆಯಲೆಂಬುದಂ ಕಾಣೆಯಾ ? ಚೀಃ ಏಂ ಪುರ್ಚು ? ಏಂ ಮರು
ಳ್ತನಂ! ಏಂ ಬಯಲಾಸೆ ! ಕುರಿಯೊಲ್ ಬಲಿಗೊಡಲ್ ನೀಂ ತಕ್ಕಂ
ಮೂಳ !

ಇಂತೆಂದು ಬಿರುನುಡಿಯನಾಡಿ ಕೆಕ್ಕರಿಸಿ ನೋಡುತುಂ ಬಿಲ್ಲ
ನಾರಿಯ ಜೇವಡೆಸಿ ಬಾಣಮಂ ಬಿಲ್ಲಕೊಪ್ಪಿಂಗೆ ಪೂಡಿದುದಂ ಕಂಡ
ಅಭಿಮನ್ಯು ಕಲಿಯಂತೆ ಕನಲ್ದು ಮಾರ್ಕೊಂಡು ಬಿಲ್ಲನಾರಿಯಂ
ಸೆಳೆದು ಕೂರ್ಗಣೆಗಳಂ ಪೂಡಿ ಗಂಡರ ಗಂಡರಂ ಮಿಾರ್ದು ಸೆಳೆದು
ವಿಡೆ ಪೂಂಖಾನುಪುಂಖಮಾಗಿ ವಾಯುವೇಗದಿಂ ರೊಯ್ಯನೆ ೬೯೦
ಸಾರ್ದು ಅರಿರಕ್ಕಸರ ಕಿರೀಟಮಂ ಪತಾಕೆಯಂ ಮತ್ತಮಾ
ಕೈಯ್ಯ ಬಿಲ್ಗಳಂ ಪುಡಿಪುಡಿಗೆಯ್ದುದು ಅರೆ ಚಣದೊಳ್.

ಜಯದ್ರಥಂ ಕನಲ್ದು ಕಿಡಿಕಿಡಿಯಾಗಿ ಪಲ್ಕಚ್ಚಿ ಎಲವೊ
ಧೂರ್ತ ! ಎಳಯನೆಂದೆಂದು ಮುದ್ದಿನಿಂ ಮಾಣಿಸಿದೊಡೆ ನೀಂ

ಚಲದಿಂ ಕೊರ್ವಿನಿಂ ಕೂರ್ಬಾಣವುಂ ತೊಟ್ಟೆಯಲ್ತೆ? ಇಗೋ ಸೈರಿಸು! ಎನುತೆ ಬೇರೆ ಬಿಲ್ಲಂ ಕೈಕೊಂಡು ರೋಷಾವೇಷದಿಂ ಬಗೆವಗೆಯ ವಿಶಿಖಗಳಂ ಪೂಡಿ ಕೆಚ್ಚಿನಿಂ ಒಡಲ್ಕಿಚ್ಚಂ ಕಾರುತುಂ ಬಿಲ್ಲನಾರಿಯುಂ ಸೆಳೆದು ಕೊಪ್ಪರಿಸಿದಂ. ಆಗಳಿರ್ಕೆಡೆಯೊಳ್ ಕೆಚ್ಚಿನ ಕಾಯ್ಪೇರ್ದು ನಿಡುಗೋಲ ಬಲ್ಸರಿ, ಬಡಿಗೋಲ ಜಡಿ, ಸರಳ್ಗೋಲ ದಿಟ್ಟ ಸೋನೆ ಎತ್ತೆತ್ತಲುಂ ಕರೆದತ್ತು. ಇಂತಪ್ಪುದು ೩೦೦ ರ್ಕಿನ ಸೊರ್ಕುಂ ಜೆರ್ಕಾಗಲೊಡಂ ನೋಡಿ ಬಂಡೆಳ್ದಯೋಧರೆಲ್ಲ ರುಣವಣಿಸಿ ಮುಂಬರಿದೊತ್ತಿ ಜರ್ವಿ ಕಾದಿ ಮೋದಿ ತಾಂ ತಮಗೆ ಮಾರಾಗಿ ಜವಹುರದ ಪುಳುಗಳಾದರೇಸೊ ಮಂದಿ!

ಅಭಿಮನ್ಯು ಭೋಂಕನೆ ತನ್ನೆಡೆಗೆ ನುಗ್ಗಿವರ್ಪ ಎದುರಾಳಿಯ ಬಾಣವುಂ ನಡುವಟ್ಟೆಯೊಳ್ ಕತ್ತರಿಸಿ ಮರುಬಾಣವುಂ ಕೈಕೊಂಡು ಮರಿಸಿಂಗನಂತೆ ಬೊಬ್ಬಿರಿದು ರೊಚ್ಚಿನಿಂ ಗಂಡಗರ್ವದಿಂ ಬೇರೆವೇರೆ ಕೋಲ್ಗಳಿಸುಗೆಯೊಳ್ ಕುಂದಿಲ್ಲದ ಕೈಚಳಕದಿಂ ಅರಿಕುಲವುಂ ಘಾತಿಸಿ ಭೀತಿಸಿ ನೋಯಿಸಿ ನಡುಗಿಸಿ ಕೇಳಿಸಿದನಿಂತು-

ಎಲೆ, ಧರಣಿಪ! ಆನರಿಯೆನೇಂ ನಂನಮ್ಮ ಸಾಸದಿರವಂ? ಬರಿದೆ ಗಳಪಿದೊಡೇಂ ಬಾಳ್ತೆಯೊ? ಏಗಳುಂ ನಾಯಧಿಂ ವರ್ತಿಸಿ ಮಾ ೩೧೦ ನದಿಂ ಬರ್ದುಕಲಕ್ಕುಂ. ಕೀರ್ತಿಶಾಲಿ ಧರ್ಮಜನಂ ಗೆಲ್ವ ನರರುಂಟೆ? ಇಂತೀ ಅನೀತಿಯ ಪೊಣರ್ಕೆಯಿಂ ಆರಾರ್ಗೆ ಕಷ್ಟನಷ್ಟಂ?

ಸೌಬಲಂ-ನಿನ್ನ ಮಾತಿನ ಗಾಡಿಯ ಮೋಡಿಯ ಕಜ್ಜಂ ಸಾಲ್ಗುಂ. ಇದೋ ಸೈರಿಸು!

ಕಡುಕೋಪದಿಂ ಕಾಳ್ಗಿಚ್ಚೊಸರ್ವ ಕೂರ್ಗೋಲಂ ಪೂಡಿ ಆಕರ್ಣಾಂತಂ ಸೆಳೆದುಬಿಟ್ಟು ತನ್ನಂ ತಾನೆ ಮೆಚ್ಚಿದವೊಲ್ ತೋಳ್ಚಪ್ಪರಿಸಿ ಕುಡಿಮೀಸೆಯುಂ ತಿರುಪಿ ಹೂಂಕರಿಸಿ 'ಸೈರಿಸು!'

ಎಂದು ಮತ್ತೆ ಬೊಬ್ಬಿರಿದಂ. ಅಭಿಮನ್ಯುವಾಗಳ್ ಚೆಚ್ಚರದಿಂ
ಮೇಲ್ವಾಯ್ದು ಬರುತಿರ್ದ ಕೂರ್ಬಾಣಮಂ ಕಂಡಿಸಿ, ಬಡಿಗೋಲಂ
ತೊಟ್ಟು ಬಿಗಿವಿಡಿದು ಕಿವಿ ಮುಟ್ಟೆ ಸೆಳೆದುವಿಟ್ಟಂ. ತಸಿಗಿಡಿಯಂ ೩೨೦
ಕಾರುತೆಯ್ದ ಕೂರ್ಬಾಣಮಂ ಕಂಡು ಸೌಬಲಂ ನಡುಗಿ ಎರ್ದೆಗೆಟ್ಟು
ನೆಲಂಗಚ್ಚಿ ತಲೆಯಂ ಉಳಿಸಿಕೊಂಡಂ. ಮತ್ತಂ ಅಭಿಮನ್ಯು
ಮೂಡಿಗೆಯಿಂ ಪೊಸವಗೆಯ ಬಾಣಮಂ ಕೈಕೊಂಡು ದಿಗದೀಶರ್
ಬೆರ್ಚುವಿನಂ ಬೊಬ್ಬಿರಿದು ಯಥಾವಿಧಿ ತೆಗೆದೆಚ್ಚು, ಮಾರ್ಗಣೆಗಳಂ
ಕೂರ್ಗಣೆಗಳಂ ಬಲ್ಗಣೆಗಳಂ ಕಡಿದು ಕತ್ತರಿಸಿಯುಂ ಕಟ್ಟಳವಿಯ
ಹರಿಬಂ ನುಗ್ಗು ನೂಂಕಪ್ಪಿನೆಗಂ ತನಗಂ ಸಾರಥಿಗಂ ತೇಜಿಗಳ್ಗಂ
ತೇರ್ಗಂ ಇನಿತುಂ ಹಾನಿ ತಟ್ಟದವೊಲ್ ಕಾಪಿಟ್ಟು ಮುಟ್ಟೆವಪ್ಪ
ಪ್ರತಿಭಟರಂ ಪಟುಭಟರಂ ಹತ್ತಿಕ್ಕಿ–ಇರಿರ್, ಇಂ ಮುಂಗೆಯ್ದೊಡೆ
ಹರಣಂ ಜೋಕೆ ! ವೇಗಮಂ ತಡೆಗಟ್ಟಿಯುಮೆನ್ನಂ ಗೆಲ್ದಂ
ಬಾಳ್ವ ಪಗೆಗಂಡರು ಮೊಳರೆ ನಿಮ್ಮೊಳ್ ? ಜಳಿಕ ರಕ್ಕಸರಂ ೩೩೦
ಗೆಲ್ವೊಂದು ತಂತ್ರದಿಂ ಗೆಯ್ದ ಟಕ್ಕಿನ ಬಾರ್ತೆಯುಂ ಎನ್ನ ತೋಳ್ವ
ಲಕಳವೇಂ ? ಪೊ, ಪೋಗಿರೆ ! ಎಂದಂ, ತನ್ನೊಂದು ದಿಟ್ಟತನದಿಂ.

ಜಯದ್ರಥಂ ತನ್ನೊಳೆ ಅಚ್ಚರಿವಟ್ಟೊಡಂ ತೋರಲಾಸಿಸದೆ
ತನ್ನೊಂದು ಕರಕೌಶಲದಿಂ ನಲ್ಗುರಿವಿಡಿದು ಬಡಿಗೋಲಂ ತೆಗೆದೇ
ಸಾಡಿದಂ. ಒಡನೆಯೆ ಅಭಿಮನ್ಯು ಪಗೆಯುನಸ್ತ್ರಜಾಲದಿಂ ಮುಚ್ಚಿ
ಕೋಪಾಟೋಪದಿಂ ತಾಗಲ್ ಪಗೆಯ ತೇರ್ ಜಜ್ಜರಿವೋಯ್ತು !
ಆಗಳುಮಿರ್ವರುಂ ಕಣದೊಳ್ ಸಮದಂಡಿಯಿಂ ಕಾದಿ ಮೋದಿ
ಪೋಣರ್ದು ಒರ್ವರನೊರ್ವರ್ ಜರಿಯುತುಂ ಪಳಿಯುತುಂ ತರ
ತರದ ಕೂರಂಬುಗಳಂ ಸಾಟಿಯಿಂ ಸೂಟಿಯಿಂ ನಾರ್ದೆಚ್ಚರ್.

ಮತ್ತಾ ಜಯದ್ರಥಂ ಕಿಸುಗಣ್ಣಿ ಸಿಡಿಮಿಡಿಗೊಂಡು ಕಡುರೋ ೩೪೦
ಷದಿಂ–ನಿನ್ನಂ ಪಿಂಡಮರ್ದನಂ ಮಾಡದೆ ಬಿಡುವೆನೆ ನೋಡೆಂದು ತಿರೆ
ಯನೊದ್ದು ಪಲ್ಕಚ್ಚಿ ಬೇರೆ ರಥವನೇರ್ದು ಎದೆಗಿಚ್ಚಿನಿಂ ಒಡಲ್ಗಿ

ಚ್ಚೆನಿಂ ಪಡಿಸರಲನೇಸಾಡಿದಂ ಅಭಿಮನ್ಯು ರಣವಿಜ್ಜೆಯ ಪ್ರಥಮಾಂ
ಕದೊಳೆ ನೃಪ ಜಯದ್ರಥನಂ ಬಲವಂದಿದಿರ್ಚಿ ಬಲ್ಪಿನ ಕಟ್ಟುಬ್ಬರ
ದಿಂ ಗಳಗೆಗಳಿಗೆಯಿಂದೇಳ್ಗೆವೆತ್ತು ವಿಲಯ ವಿಕ್ರಮ ಪವನಸಂ ತಾ
ಪೋಲ್ತು ಮೆರೆದನಭ್ಯುದಯದಿಂ. ಪಡೆಯೊಳ್ ಆನ್ ತಾನ್ ಮುಂ
ತೆಂದು ಮುನ್ನುಗ್ಗುವ ಮಾವುತರ್ ರಾವುತರ್ ಸಂದಣಿಸಿ ತೆಕ್ಕೆ
ಗೆಡೆಯೆ ರೊಚ್ಚಿಗೆದ್ದು ಪೆರ್ಕಳಿಸಿದ ಸೊರ್ಕಿದಾನೆಯನೇನೆಂಬೆಂ?
ಹಾ, ಅಳವಿಯ ಗಡಣದೊಳ್ ಜಕ್ಕಳಿಸಿದಂತೆಯುಂ ಸೊರ್ಕುಕ್ಕಿ
ದಂತೆಯುಂ ಘೀಳಿಟ್ಟು ಮೇಲ್ವಾಯ್ದು ನುಗ್ಗಿ ಕಾಲಾಳ್ಗಳಂ ಮೇಲಾ ೩೫೦
ಳ್ಗಳಂ ತತ್ತಳ ತುಳಿಯಲೊರಲೊರಲ್ದು ಮಿಲಿಮಿಲಿ ಒದ್ದಾಡಿ
ಪೊರಳ್ದು ನರಳ್ದು ಜವನನಗರಿಯ ಪದಂಬಿಡಿದು ಗೋಳ್ಗರೆದರ್.
ಮತ್ತಾಗಳ್ ಅಭಿಮನ್ಯು ಕೂರ್ಬಾಣದಿಂ ಕೈಕೊಟ್ಟನಮಮ! ಮುಕ್ಕ
ಣ್ಣಂ ತಾನ್ ಅಚ್ಚರಿವಡುವಂತು! ಎಳಯನ ಪೋದದಾಟಕೆ
ಪೆಮ್ಮಾರಿಯ ಪೊಯ್ಲಾದುದು ವೈರಿ ಕುಲಸಂಜಾತರ್ಗೆ! ಕದಳಿಯ
ಬನದೊಳ್ ನುಗ್ಗಿದ ಮರಿಯಾನೆಯಂ ಪೋಲ್ದುದು ತರಳನ ತೋಳ್ವ
ಲಂ. ಕದನಕಲಿಗಳಂ ತಾಗಿಯುಂ ರಥಂಗಳಂ ಮುರಿದೊಟ್ಟಿಯುಂ
ಕಾಲಾಳ್ಗಳಂ ಮೇಲಾಳ್ಗಳಂ ಜಡಿಕುಟ್ಟಿ ಹೊಡೆದಬ್ಬರಿಸಿ ಪಿಂತಿಕ್ಕಿ
ಯುಂ ರಾವುತರಂ ಮಾವುತರಂ ತುಪ್ಪುಳದಂತೆ ತೂರಿಯುಂ ಕೊರ್ವಿನ
ಕೇಡಾಡಿಗಳಂ ಚಲದಿಂ ಬಲದಿಂ ಬಡಿದು ಬಾರಿಸಿಯುಂ ಕಡುಗಲಿ ೩೬೦
ಯಾಗೆ ಕಾಲಲೀಲೆಗೆ ಕೂಳಾಯ್ತು ವಿಷಮ ರಣರಂಗಂ!

ಆವ ಮಾಯೆಯಿಂ ಕೂರಂಬುಮಂ ತೊಡುವನಾವಜೆಚ್ಚರದಿಂ
ಸೆಳೆದುಬಿಡುವನಾವಕಾಲಸಗರಡಿಯ ಸಾಧನೆಯಿದೆಂದು ದಿವಿಜರುಂ
ಕಟ್ಟಚ್ಚರಿಯೊಳ್ ಕಣ್ಣರಳ್ಚುವಂತೆ ತೊಡರ್ಚಿ ಜಾಡಿಸಿ ಕೊಡವಿದಂ
ರಿಪುವ್ರಜಮಂ. ಆಗಳಿರ್ಕಡೆಯೊಳ್ ಜರ್ವಿ ಜಂಕಣಿಸಿ ಮುತ್ತಿ
ಮುಂದೊತ್ತಿ ಪಿಡಿದಾಂಕಲಿಳೆಸಿದ ರಾವುತರ ತಂಡತಂಡಮಂ ಉರುಬಿ
ನಿಂದುರವಣಿಸಿ ಬಲ್ಪಿನ ಗೋಣ್ಮುರಿದು ಜತ್ತುಕದ ನಿಶಾಟನುರ್ಬಿನ
ಕೊರ್ವಂ ಕೊಚ್ಚಿ ಕೊಡವಿದಂ ಪಳುವಂ ಬಡಿದು ಕೆಡವಿದಂತೆ;

ಮತ್ತಂ ಕಂಗೆಟ್ಟು ಕಳ್ಕನೆ ಕಡಂಗಿ ಕವರ್ವ ಅತಿರಥರ ಮಹಾರಥರ ೩೭೦
ಷಡುರಥರ ಕೈಯ ಬಿಲ್ಗಳಂ ಕಡಿದು ಕೆಡಹಿ, ತೇರ್ಗಳ ಪೊಂಗಳಸಮಂ
ಜಡಿಗುಟ್ಟಿ ಪುಡಿಪುಡಿಗೆಯ್ದು ರವಣಿಸಲ್ ಹಾ! ಹಾ! ಎಂದುದು
ಅರಿಬಲಂ ತಳಮಳಿಸಿ. ಎತ್ತಣಿಂದೆತ್ತಲುಂ ಜೋದರ್ ಕಾಲಾ
ಳ್ಗಳ್ ನೋಲಾಳ್ಗಳ್ ಬೆದರಿ ಗಾರುಗೆಟ್ಟು ಪಜ್ಜೆಗೆಟ್ಟು ಮುಂಗೆಟ್ಟು
ಅತ್ತಿತ್ತಂ ಪರಿದಾಡಿ ಜೀವದಾಸೆಯಿಂ ಬೆಂಗೊಟ್ಟೋಡುವ ಅವಸರ
ದಿಂ ಉಡಿದಾಡುತಿರ್ದುದಪದೆಸೆಯೊಳ್. ಖತಿಗೊಂಡ ಖಳಭಟರ್
ಅಖಿಲ ಮನ್ವಂತರದ ಕಡೆಯೊಳ್ ಕಡುಹಿನ ಸಾಸದಿಂ ತಂತಮ್ಮ
ಸೇನೆವೆರಸಿ ರಕ್ಕಸನಿದಿರ್ಚುವೊಂದು ಮಾಳ್ಕೆಯೊಳ್ ಮುಂದೊತ್ತಿ
ಮುತ್ತಲ್ಕೆ ಇಟ್ಟಿಯುಂ, ಕಕ್ಕಡೆಯುಂ, ಕೂರ್ವಾಳುಂ, ಮುದ್ಗರಂ,
ಮುಸುಂಡಿಯುಂ, ಕೂರಂಕುಸಂ, ಸುರಿಗೆಯುಂ, ಜಳಜಳನೆ
ಪೊಳೆದುವಖಿಲ ದಿಸೆಯೊಳ್ ಪೊಂಬಿಸಿಲ ಪ್ರತಿಫಲನದಿಂ. ಆಗಳಾ ೩೮೦
ಅಭಿಮನ್ಯು ಅರಿಕುಲಂ ಬೆಕ್ಕಸ ಬಡುವಂತೆ ಕಕ್ಕಸದನಿಯಿಂ–ಎಲೆಲೆ!
ಇಂತೇಂ ಎಲ್ಲರುಂ ಮುನ್ನುಗ್ಗಿ ಮಿಳ್ತುವಿಂಗೆ ಬಿರ್ದಾಗುವಿರಿ? ಕಾಲ್ದ
ಳದ ಕೈದುಗಾರರ್ ಪಿಂತಿರ್ದು ಅತಿರಥರ್ ಮಹಾರಥರ್ ಷಡು
ರಥರ್ ಘನಕರಿಘಟೆಯ ಜೋದರ್ ಸಾಮಂತರ್ ಪಡೆವಳರ್
ಮುಂದೆಯ್ದಿ ಎರ್ದೆಗೊಟ್ಟು ನಿಲ್ಲಲಕ್ಕುಂ !

ಆ ಮಾತಿಂಗೆ ಕೌರವಾನುಜಂ ಮುಂಕೊಂಡು ರೋಷದಿಂದುಬ್ಬಿ
ಕೆಕ್ಕರಿಸಿ ನೆಟ್ಟ ಕಣ್ಣಾಲಿಯಿಂ ನಿಟ್ಟಿಸಿ ಕಟ್ಟುಚ್ಚರಿಯ ಕಟ್ಟುರದಿಂ
ಬೊಬ್ಬಿರಿದು ಕೇಳಿಸಿದಂ–ಎಲವೊ ಕೂಳ! ಇನ್ನೆಬರಂ ಪೊಲ್ಲದ
ಸಲ್ಲದ ಪೊಣಕೇಯೊಳ್ ಮುಂದೆಯ್ದಿ ಜೀವಡೆದೆನೆಂದುಬ್ಬರದಿಂ
ಕೊರ್ಬಿದೆಯಲ್ತೆ? ಇನ್ನದು ತಗದು ಕಣಾ! ಈ ಚಣದೊಳ್ ರಣ ೩೯೦
ರಂಗಮಂ ಬಿಟ್ಟೋಡಿ ಮಂಡೆಯಂ ಮರೆಸಿ ಬಾಳಿಲವೊ ಮೂಳ !
ಇಂತೇಂ ಸೊರ್ಕಿನಿಂ ನಿನ್ನಂ ನೀನೆ ಮೆಚ್ಚಿ ನುಡಿವೆಂ? ಸಾಲ್ಗುಮಾ
ಪ್ರತಾಪಂ ! ಗಂಡೆರ್ದೆಯಿರ್ದೊಡೆ ಎನ್ನನೆದುರ್ಚಿ ನಿಲ್ಲಲಕ್ಕುಂ !

ಬಾಲಹತ್ಯಮಂಗೆಯ್ಯಲಿಚ್ಚೆಸದಿರ್ದೊಡೆಮ್ಮ ಧರ್ಮಚಿಂತನಂ ನಿನ್ನ ಸೊರ್ಕಿನೇಳ್ಗೆಗೆ ಬಿತ್ತಾಯ್ತಲ್ತೆ? ಕೊಳುಗುಳದಗ್ಗಿಗೆ ನಿನ್ನ ನೂಂಕಿದ ಪೆಂಬೇಡಿ ಪಿರಿಯರ್ಕಳಂ ನೆನೆದು ನಿಲ್! ಇಂದಿನೀರಣಗಳಿಗೆಯೊಳ್ ನಿನ್ನಂ ಪೆಮ್ಮಾರಿಗೆ ಬಲಿಗೂಳಿನ ಬರ್ದಿಕ್ಕುವೆನೆಂದು ಪೂಣ್ದು ಕೈಕೊಂಬೆನೆನ್ನೀಬಿಲ್ಲಂ! ಇಂ ತೋರೆಲವೊ ನಿನ್ನ ಧೈರ್ಯ ಸಾಸಂ ಗಳಂ? ಹೂಂ, ಇಗೊ ಸೈರಿಸು! ಎನ್ನುತ್ತಲೊಡಂ ಬಿಲ್ಲಕೊಪ್ಪಿಂಗೆ ಕೂರಂಬುಮಂ ತೊಟ್ಟು ಅಟ್ಟಹಾಸಂಗೆಯ್ಯಲ್ ಅಭಿಮನ್ಯು ಚಣದೊಳ್ ಮಾರಕಾಸ್ತ್ರಮಂ ಪೂಡಿ ಮುಂಬರಿಯದೊಲದಂ ನಡುವಟ್ಟಿಯೊಳ್ ಕಂಡರಿಸಿ ತುಂಡು ತುಂಡುಗೆಯ್ದು ಬಿಲ್ಲನಾರಿಯಂ ಜೀವಡಿಸೆ ಅಳವಿಗಂಜಿದ ರಥಿಕರ್ ರಥದಿಂ ದುಮ್ಮಿಕ್ಕಿ ಬಿಳ್ದೆಳ್ದು ಓಡುತಿರಲ್, ರಾವುತರ್ ಕೈಮುಗಿದು ಕೊರಳಂ ಕೊಯ್ಯದಿರೆಂದು ಬೇಡುತಿರೆ, ಕೌರವಾನುಜಂ ಕೃತವರ್ಮಂ ಮೇಣ್ ಭೂರಿಶ್ರವರುಂ ಕಟ್ಟಚ್ಚರಿ ಯಿಂ ಬೆರಳಿಟ್ಟರ್ ಬಾಯೊಳ್! ದರದುರದ ದೆಖ್ಖಾಳತನದಿಂ ಮುಂಕೊಂಡ ಶಲ್ಯನುಂ ಬಿಲ್ಲಿಂಗೆ ಬಡಿಗೋಲಂ ಪೂಡುವಸಿತರೊಳ್ ಅಭಿಮನ್ಯು ಪ್ರಳಯ ಭೈರವನಂತಿರಾಜಿಯೊಳ್ ಕುದಿಕುದಿದು ರಣಕೇಳಿಯಂ ಲೀಲಾಜಾಲದೊಳ್ ನಡೆಸಿ ಸುರರ್ ಬೆಕ್ಕಸಬಡುವಂತೆ ಸರಳ ಸರಳಿಂದವನಂ ಬಡಿದು ಸೈಗೆಡೆದಂ! ಆಗಳ್, ಶಲ್ಯಾನುಜಂ ೪೧೦ ಕನಲ್ದು ಮಾರಾಂತು ಬರೆ ಮತ್ತಂ ಬಿಲ್ಲಿಂಗೆ ಕೂರ್ಗೋಲಂ ತೊಡರ್ಚಿ ಬಿಗಿಸೆಳೆದುವಿಡಲಾ ಅರ್ಜುನಸೂನು, ತೆಕ್ಕನೆ ತನಿಗಿಡಿ ಯಂ ಉಗುಳ್ದು ರೊಯ್ಯನೆ ತಾಗೆ ಮೈಸೋತು ಬಳಲ್ದು ಸೊಪ್ಪು ಸೊಗಡಪ್ಪಿನಂ ಸೋಯಂದಪ್ಪಿ ತೆತ್ತನಸುವನಲ್ಲೆ ಶಲ್ಯಾನುಜಂ, ಕೆನ್ನೆತ್ತರಂ ಕಾರ್ದು.

ಅರಸಂ ಮಡಿಯಲೊಡಂ ಪಡೆಯುಂ ಕಂಗೆಟ್ಟು ಗಾರುಗೆಟ್ಟು ಬಗೆಗೆಟ್ಟು ಬೆದರಿಬೆಬ್ಬುಳಿವೋಗಿ ದೆಸೆದೆಸೆಗೆದ್ದೋಡುತಿರೆ ಕೌರವಾನು ಜಂ ಜರ್ವಿ ಜಕ್ಕಣಿಸಿ ಬೆಂಗೊಟ್ಟು ಪಡೆಯಂ ಒಗ್ಗೂಡಿಸಿ ಬೊಬ್ಬಿ ರಿದು ನಿಲ್ಲಲ್ ಕೂರಾರ್ಗಳ್. ಮತ್ತಂ ತಿರುಗಿ ಬಿಳ್ದರ್ ತೋಳಂಗಳುಂ

ಪಿಂಡೈಸಿ ಬಂದೆರಗಿದಪೊಲ್. ಆಗಳುಂ ಕೂರಾರ್ಗಳ ಕಟ್ಟೊಡೆಯುಂ ೪೨೦
ಬೊಬ್ಬಿರಿದು ಕೈಹೊಯ್ದು ಇರ್ವಡಿಯಿಂ ಮುಮ್ಮಡಿಯಿಂ ಪುರಿದುಂ
ಬಿಸೆ ಉಬ್ಬಿಗದುಬ್ಬುರದಿಂ ಪೊಣರ್ಕೆಗಳದಂ. ಗಳಿಗೆಗಳಿಗೆಗು ಮೊಹ
ರಂ ಕಡುಕಾಯ್ಪೇರಿ ರಣದಗ್ನಿಯುಂ ಧಗದಗಿಸಿ ಕುರುಭೂಮಿಯುಂ
ಕೆನ್ನೆತ್ತರಿಂ ತೊಯ್ಸಿದುದು ಲೀಲಾವೇಶದಿಂ. ಆಗಳಾ ವೀರ ಅಭಿ
ಮನ್ಯು ಸಾರಥಿಗಿಂತು ಕೇಳಿಸಿದಂ—ಎಲೆ, ಸಾರಥಿ ! ಅಂಜದಿರ್,
ವಾಘೆಯುಂ ಬಿಗಿವಿಡಿದು ತೇಜಿಗಳನ್ನಿತ್ತ ತಿರುಪ್ಪೈ. ಕಡುಧೂರ್ತರಂ
ಪಾಪಾತ್ಮರಂ ರೋಡೆಗರಂ ಚಣಚಣದೊಳ್ ಯಮಲೋಕಮಂ
ಮುಟ್ಟಯಿಸಿ ಭೂಲೋಕದ ಕಂಟಕಮಂ ಕಳೆವೆಂ! ಎನ್ನೀ ಧಮನಿ
ಗಳೊಳ್ ನೆತ್ತರ್ವನಿ ಇರ್ಪನ್ನೆಗಂ ಅರಿರಕ್ಕಸರಂ ಕೊಚ್ಚುವುದೊಂದೆ
ಗುರಿ! ಆವಾದ ಎಡೆಯೊಳ್ ಅರಿಗಳ್ ನುಗ್ಗಿ ಬಂದಪರೊ ಆಯೆಡೆಗೆ ೪೩೦
ರಥಮಂ ಚಿಚ್ಚರದಿಂ ತಿರುಗಿಸಲಕ್ಕುಂ !

ಅಭಿಮನ್ಯು ಮಾರಕಾಸ್ತ್ರಮಂ ಪೂಡಿ, ನಿಡಿದೊಂದರಗಿನ
ಮನೆಯುಂ ದಳ್ಳುರಿಗಡಕಿದಂತೆಯುಂ ಚತುರಂಗ ಬಲಮಂ ತನಿಗಿಡಿ
ಯುಗುಳ್ವ ಬಾಣಂಗಳಿಂ ದಳ್ಳಿಸಿದಂ. ಹಾಹಾ, ಎಂದೊರಲುತಿರೆ
ವಿಕ್ಕುಳಿದ ಕುರುಸೇನೆ. ಭಲೆ! ಭಲೆ! ಎಂದುದಮರಗಣಂ. ಆಗಳ್
ಕೌರವಂ ರೋಷದಿಂದಿದಿರ್ಚಿ ಬಿಲ್ಲಕೊಪ್ಪಿಂಗೆ ಪತ್ತಂಬುಗಳಂ ಪೂಡಿ
ಕುಲದೈವಮಂ ನೆನೆದು ಚಾಪದೇಳ್ಗೆಗೆ ತೋಳ್ಬಲಮಂ ಬುದ್ಧಿಬಲಮಂ
ಕ್ಷಾತ್ರತೇಜಮಂ ಬಸಿದು ಆಕರ್ಣಾಂತಂ ಸೆಳೆದುವಿಟ್ಟು ನೋಡುತಿರೆ
ಯಿರೆ ನಡುವಟ್ಟೆಯುಂ ಸೇರ್ವ ಮುನ್ನಮೆಯೆ ಎದುರಾಳಿಯ
ಯಥೋಚಿತಮಾಗತದಿಂ ಪುಡಿಪುಡಿಯಾಗಿ ಗಾಳಿಗಡರಿ ದಿಸೆದಿಸೆ ೪೪೦
ಗೆಯ್ದುದಾಚಣದೊಳ್ !

ಅರ್ಜುನಗುವರಂ ನಗುನಗುತುಂ—ಎಲೆ, ಕೌರವರಾಯ !
ಇಂತಪ್ಪ ಶಂಡಭಂಡ ರಥಿಕರಂ ಕೂಡಿ ಮೈವೆರ್ಚಿ ಅಂಕೆಸಂಕೆಯಿಲ್ಲದೆ
ಇಂತಳವಿಗಿಳಿದೊಡೆ ಏಂ ಫಲಂ ? ಕುನ್ನಿಕೂಳರ್ ಪೆರ್ಬುಲಿ

ಯಂ ತಾಗಿದೊಡೆಂತಂತು ವ್ಯರ್ಥಂ. ಕೇಳ್! ನೀನಿಲ್ಲಿಂದಂ ತಲೆ
ಮರೆಸಿ ಮರಳ್ಚಿದೆಯಾದೊಡದು ಶೂನ್ಯಂ ! ಮಾನ್ಯಂ !

ಕೌರವರಾಯಂ—ಓಹೋ ! ಅಂತೇಂ ? ಇನ್ನೆಬರಂ ಗೆದ್ದ
ಕೊರ್ವು ನಿನ್ನಂ ಗಗನಕ್ಕೆತ್ತಿದುದಲ್ತೆ? ತೆಗೆ, ತೆಗೆ, ಕಡುಮೂರ್ಖ !
ಇಂದೀಗಳ್ ಮುಲೋಕದಾಣ್ಮಂ ಬಂದಿದಿರ್ಚಿದೊಡಾಂ ಸೋಲಂ
ಬಗೆವೆನೆ? ಇಂ ನಿನ್ನ ಬಲ್ಪೆತ್ತಣದು ಪೊ ! ಪೊ ! ನೀನಿಂದು ೪೫೦
ಬರ್ದುಂಕುವೊಡೆ ಅಂತಃಪುರದೊಳ್ ಕದ್ದಡಂಗಿ ತಲೆಯಂ
ಉಳುವಿಕೊಳ್ಳಲಕ್ಕುಂ. ಜೋಕೆ, ದುಡುಕದಿರ್ !

ಅದರ್ಕಾ ಅಭಿಮನ್ಯು ತಲೆಯಂ ತೂಗಿ ನಸುನಗುತುಂ—
ಒಡಲಗಿಚ್ಚಿನಿಂ ಬರಿದೆ ಗಳಪಿದೊಡೇಂ ಫಲಂ? ಧರಣಿಪ! ರಣರಂಗ
ದೊಳ್ ತೋರಲಕ್ಕುಂ ಕ್ಷಾತ್ರ ಶಕ್ತಿಯಂ.

ಕೌರವರಾಯಂ—ಸಾಲ್ಗುಂ! ತರುವಲಿತನದುದ್ರೇಕಂ! ಪಿರಿ
ಯರ್ಕಳ ಮುಂತೆ ಒದರದಿರ್ ಬಳ್ಳು ನಾಯ್ಗಳಂತೆ! ಭೀಮ
ಫಲುಗುಣರಿಂತು ಇದಿರ್ಚಿದೊಡೆ ಒಳ್ಳಿತೆಂದು ತಾಗುತಿರ್ದೆಂ.
ನಿನ್ನಂತಪ್ಪ ಕುನ್ನಿಕೂಳನೇನೆಂದಾಂ ಪೊಯ್ವೆಂ? ಪೋಗೆಲವೊ
ಅವಿವೇಕಿ ! ನಿನ್ನೊಡನೆ ಸೆಣಸಾಟಂ ಅನರ್ಥಂ, ವ್ಯರ್ಥಂ ! ೪೬೦

ಅಭಿಮನ್ಯು—ಅಹ....! ಏಂ ಮಾತೊ ? ನಿನ್ನನಿದಿರ್ಚುವೊಡೆ
ಭೀಮಾರ್ಜುನರುಂ ಬರವೇಳ್ಕುಮೆ ? ಕೊಚ್ಚೆಯೊಳ್ ಪೊರಳ್ವ
ಪಂದಿಯುಂ ಸಾಗರಮಂ ಕಾಲ್ವಾಯಿಯೆಂದೆಂಬ ಭಂಡತನಕ್ಕೆತ್ತೊ
ಡೇಂಬಹುದು ? ಈಗಳೆನ್ನಂ ಗೆಲ್ದು ಅನಂತರಂ ಭೀಮಾರ್ಜುನರಂ
ಬಯಸಲಕ್ಕುಂ! ಇದೊ, ನಿನ್ನೊಡಲಂ ಬಗೆದು ತಿಳಿನೆತ್ತರಿಂ
ತಾಯ ತುರುಬಂ ತೀಡಿ ರಣಮಾರಿಯುಂ ತಣಿಪೆಂ!

ತೆಕ್ಕನೆ ಕನಲ್ದ ದುರ್ಯೋಧನಂ ಬಿಲ್ಲಿಂಗೆ ನೂರಂಬುಗಳನೊ

ರ್ವಗೆಪೂಡಿ ಸೆಳೆದುವಿಡಲ್ ವಿಶಿಖ ಪುಂಜಂ ಪುಂಖಾನುಪುಂಖ
ಮಾಗಿ ರಣರಂಗಮಂ ಮುಸುಂಕಿ ಪೆರ್ದ್ದೆರೆಯಂ ಕಟ್ಟಿದಂತಾಗಲೊಡಂ
ಅಭಿಮನ್ಯು ಮೂಡಿಗೆಯಿಂ ಕೂರ್ಗಣೆಯನೆತ್ತಿ ಮಂತ್ರದುಕ್ತಿಯಿಂ ೪೭೦
ಬಿಲ್ಗೆ ಪೂಡಿ ಸೆಳೆದುವಿಡೆ ರಣರಂಗಮಂ ಮುಂದೈಸಿರ್ದ ವಿಶಿಖಾ
ವಲಿಯ ತೆರೆಯಂ ಸೌವ್ವನೆ ಸೀಳ್ದುಂ ತರಿದುಂ ಮುರಿದುಂ ಬೇರೊಂದು
ವಿಶಿಖಮಂ ತೊಟ್ಟು ಉರಿಗಿಡಿಯಂ ಏಸಾಡಿದಂ! ಪಟುಭಟರ್
ಅತಿರಥರ್ ಮಹಾರಥ ಕಟ್ಟೆಚ್ಚರಿಯಿಂ ಬೆರಗುವಟ್ಟುರ್ ಮೂಗಿ
ನೊಳ್ ಬೆರಳಿಡೆ ಅಭಿಮನ್ಯು ಮನದೊಳಿಂತು ಚಿಂತಿಸಿದಂ-ಈಗಳೆ
ಕುರುರಾಯನ ಮಂಡೆಯನುರುಳ್ಚುವೆನೆಂದೊಡೆ ಪಿತಂ ತನ್ನ ಪೂಣ್ಕೆ
ಗೇನೆಂದಪನೊ, ಭೀಮಸೇನ ಬೊಪ್ಪನುಂ ಭಾಷೆಗೇನೆಂದಪನೊ
ಕಾಣೆಂ. ಇಂತಿದನರಿತು ಕೊಂದೊಡೆ ಕಜ್ಜಮಂಗೆಯ್ದು ಜಸಮಂ
ಕೆಡಿಪ ಉಜ್ಜುಗಮಾಯ್ತು; ಎಂಬ ಕತದೊಳ್ ಬಲ್ಗೋಲಂ ಪಿಂತಿಕ್ಕಿ,
ಇಂದಿನೆನ್ನ ಸಜ್ಜೆನೆಳಗೋಲ ಸವಿಯ ಸೊಗಮಂ ಇನಿಸಿನಿಸು ಕಾಣಿ ೪೮೦
ಸುವೆನೆನುತುಂ ಪಲವು ಪುಣಂಬುಗಳಂ ತೊಡರ್ಚಿ ಸೆಳೆದುವಿಡೆ
ರೊಯ್ಯನೆ ಪಾರ್ದು ಪಿರಿವಿಂಡೆನೆ ಮುತ್ತಿ ನಟ್ಟೊತ್ತಿ ನಾಂಟೆ ಕೆನ್ನೆ
ತ್ತರಂ ಸೂಸಿ ಗಾರುಗೆಟ್ಟುಬ್ಬಸವಡಿಸಿದಂ ! ಇಂತುಮಿಂತು ಎಡೆ
ವಿಡದೆ ಮೂಡಿವರ್ಪ ಶರಹತಿಯಿಂ ನಿಬ್ಬೆರಗಾದುದಖಿಲ ಕೌರವ
ಬಲಂ. ಆಗಳ್, ಎದುರ್ವೆತ್ತ ಕರ್ಣಂ ಕನಲ್ದು ಕಣ್ಣೊಳ್ ಕಿಡಿ
ಗಳಂ ಕಾರುತಂ ಪಲ್ಕಚ್ಚಿ ಉರಿದುರಿದು ಬಿಲ್ಲಕೊಪ್ಪಿಂಗೆ ವಿಶಿಖಮಂ
ಅಳವಡಿಸಿಸುತಿಂತು ಕೇಳಿಸಿದಂ-ಕೇಳ್ವೈ ಪಾರ್ಥಾತ್ಮಜ ! ಇನ್ನೆವರಂ
ಎಳಯನೆಂದು ತೋರ್ದ ಬಲುಮೆಗಿನ್ನುಂ ಬೆಲೆಯಿಲ್ಲಂ. ಏಗಳುಂ
ಚಿನ್ನರೊಡಂ ಅಳವಿಗಳವಲ್ಲಮೆಂದು ಭಾವಿಸಿರ್ದುದು ನಿನ್ನ ಗೆಲ್ಮೆಗೆ
ಕತಮಲ್ತೆ ? ನೀನಿಂತು ಬಲದಿಂ ಚಲದಿಂ ಕೊಳುಗುಳಕ್ಕಿಳಿದೊಡೆ ೪೯೦
ಬೀರರ್ಗೆಮಗೆ ಸಿಸುಯುದ್ಧಂಗೆಯ್ಕಲ್ ಬರ್ಕುಮೆ ? ಇಂತಿರವಂ
ಕಂಡುಂಡು ಪೊಲ್ಲದಾಟದೋಟದೊಳ್ ವ್ಯೆವೆರ್ಚಿ ನೀಂ ಗೆಲ್ದ ಗೆಲ್ಲ
ಮೆಯೊಂದು ಗೆಲ್ಮೆಯೇಂ? ಇನ್ನೆಬರಂ ಸಂದುದು ಸಾಲ್ಗುಮೆಂದು

ನೀನಿನ್ನುಂ ಚೆಚ್ಚರದಿಂ ಕೊಳುಗುಳವುಂ ಬಿಟ್ಟು ಪೋಪುದೊಳ್ಳಿತು. ಈಯೊಂದು ತೀರ್ಪು ನಿನಗೊಗ್ಗದೆ ಪೋದೊಡೆ ಗೆಲ್ಮೆಯು ಸೊಗ ದಂಕವುಂ ಬಯಸಿ ನಿನ್ನೊಡಲನಿಲ್ಲಿ ತೆಗೆದೊಗೆದು ಪೋಪೆಂ! ಇದು ನಿಕ್ಕುವಂ! ಸೊರ್ಕಿನಿಂ ಕೊರ್ವಿನಿಂ ಪೊಡರ್ಪಿಗಿಳಿದೊಡೆ ಕೇಡಕ್ಕುಂ!

ಆ ಮಾತಿಂಗೆ ಅಭಿಮನ್ಯು ಬೇಸರಿಸದೆ ಗುರುವಿನ ಮಂತ್ರ ದುಕ್ತಿಯಂ ಮನದೆ ನೆನೆದು ಏಗಳುಂ ಬಿಟ್ಟ ಬಾಣಂ ಮತ್ತೆ ದಕ್ಕ ಲೆಂದು ಮನವಿಗೆಯ್ದು ನಂತರಂ-ಅಯ್ಯ, ಬೀರ. ಇಂತೊಂದು ಬಿನ್ನ ಣದ ಮಾತೇಕೆ? ಆನೆಳೆಯನಾದೊಡೆ ಕೋಲ್ಗಳೊಳೊಂದೆಳವೆ ಯಿರ್ಕುಮೆ? ಗೊಂದೆಯಂತು ಪುಟ್ಟಿ ಬೆಳೆದು ಮುಂದಾದೊಡೇಂ ಫಲಂ? ಮರಿಸಿಂಗನೆಂತಂತು, ಮದ್ದಾನೆಯೆಂತಂತು ಕಡುಪುಂ ಕೆಚ್ಚುಂ ಇರವೇಡ? ೯ ಆನುಂಟು ಎನ್ನ ತೋಳ್ವಲಮುಂಟು! ಎಂದುಮೆಂದು ಕಣೆಯ್ಯೆದರಿಂ ಕರ್ಣನ ಧನುವುಂ ಪುಲ್ಕಣೆಯಂ ಮುರಿದೊಗೆದಂತೆವೊಲ್ ಕಣಕ್ಕನೆ ಮುರಿದೊಗೆಯಲ್ ರಾಧೇಯಂ ಕಡುರೋಷದಿಂ ಕಿಡಿಯಾಗಿ-ಎಲಾ ಮರುಳೆ! ಅಂತಿಂತು ಕೆಲಬ ರೊಳ್ ಗೆಲ್ಲಂಬಡೆದ ದರ್ಪಮುಂ ಆದೊಡಂ ತೋರ್ವೆನೆಂಬುದು ನೆನ ಪಿಡವೇಳ್ಕುಂ! ಎನುತಂ ಕೂರ್ಮೊನೆಯ ಮೂರಂಬುಗಳಂ ತೊಟ್ಟು ಸೆಳೆದುವಿಡಲ್ ಜೇಯೆಂದು ಮರಿದುಂಬಿಗಳ್ ಕೆಂದಾವರೆಯಂ ಕವಿವಂತೆ ಎಳಮೆಯ್ಯಂ ಮುತ್ತಿ ಚುಚ್ಚಿ ಕೆನ್ನೀರಂ ಬಸಿದುದು ಧಾರೆಧಾರೆಯಾಗಿ.

ಆಗಳಾ ಅಭಿಮನ್ಯು-ಎಲೆರಾಯ! ಪಿರಿಯಂಕುಸದಿಂದೌಂ ಕಿದೊಡಂ ಮೈಯುರಿಯುದೈರಾವತಂ ಕರ್ಬಿನ ಜಲ್ಲೆಯೊಳಿರಿದೊಡಂ ಜುವುದೇಂ? ಎನುತಬ್ಬರಿಸಿ ಮಿಹಿರಸೂನುವಿನ ಪಜ್ರಕಾಯವುಂ ಹುಗಿಲಿರಿದಂ ಮುಮ್ಮೊನೆಯ ಕೂರಂಬುಗಳಿಂ; ತೇರ್ ತೊಯ್ಸಿದ ನೆತ್ತರುಂ ಪೊಂಬಿಸಿಲ ಪೊಳಪಿಂ ಕೆಂಗಲಿಸಿದುದು. ಮತ್ತದೊ ಅತ್ತ ಮಿತ್ತ ಚದರ್ದ ಹಿಳುಕುಂ ಪಟುಭಟನ ಮೈಕೈಯಂ ಮುತ್ತಿ ತಳ

ಘಳನೆ ಮಿನುಗುತಿರ್ದುವು, ಕಾರಿರುಳೊಳ್ ಮರಗಿಡಮಂ ಮುತ್ತಿದ ೫೨೦
ಮಿಂಚುಂಬುಳು ಮಿನುಗಿದಂದದಿಂ! ಬಾಲನ ಬಾಲವಿಜ್ಜೆಯ ಬವ
ರದಿಂ ಬಳಲ್ದು ಕಂಗೆಟ್ಟು ಕೌರವ ಬಲಮಂ ಕಂಡು ಕರ್ಣಾತ್ಮಜಂ
ಮುನ್ನೀರ್ವೆಂಕೆಗೆ ಬೆಂಗದಿರಂಗೆ ಮತ್ತಮಾ ಮುಂಗಾರ ಸಿಡಿಲ್ಗೆ
ಇರ್ಮಡಿ ಕಾಯ್ಪಿನಿಂ ಕಾಯ್ದು ಕೈಕೈ ಮಸಗಿ ಹೊಸಗಿ ಉರಿದು
ರಿದು ಪೆರ್ಕಳಿಸಿ ಕಳೆದುಳಿದ ಪಡೆಯಂ ಬಲವಂದು ಮುಂದೈಸಿ
ಪೊಣರ್ಕೆಯುಗ್ಗಿಗೆ ನೂಂಕಿ, ಬಲಗಡೆಯಿಂ ಪಾಯ್ದು ರಣದುಬ್ಬರ
ಮಂ ಚೆಚ್ಚರದಿಂ ತಗ್ಗಿಪೊಂದು ಹಂಬಲದಿಂ ಮಿಂಚಿನ ವೇಗದಿಂ
ಪಿತನ ಬೆಂಬಲಕೆಂದಲ್ಲಿಗೆಯ್ದಿದಂ. ಬಳಿಕ್ಕಂ ಕರ್ಣ–ಕರ್ಣಾತ್ಮಜರುಂ
ಬೇರೆವೇರೆ ರಥಮನಡರ್ದು ಮುಮ್ಮೊಗಕೆಯ್ದಿ ಬಲ್ಪಿನ ಬೀರತನದಿಂ
ಗಂಡ ಗರ್ವದಿಂ ಠೀವಿಯಿಂ ಸಾಟೆಯಿಂ ಬಾಣಂಗಳ ಬಲ್ಸರಿಯಂ ೨೩೦
ಸುರಿಯೆ, ಅರ್ಜುನಸೂನು ಐದೈದು ಬಾಣಂಗಳಂ ಪೂಡಿ ಕರ್ಣನ
ರಥಮಂ ಜಡಿಕುಟ್ಟಿ ತುಂಡರಿಸಿ ತಿರೆಗೆಡವಿ ಕರ್ಣಾತ್ಮಜನ ಶಿರವಂ
ಪುಲ್ಲಂ ತರಿವಂತೆ ತೆಕ್ಕನೆ ತರಿದು ದಿಂಡುರುಳ್ಚಿದಂ !

ಇಂತಪ್ಪ ಸಂಗ್ರಾಮ ಕೋಲಾಹಲಂ ಚೆಚ್ಚರದಿಂ ಬಲ್ಪಿನ
ಬೀರರಂ ಜವಹುರಮಂ ಮುಟ್ಟಿಸೆ ಜವನ ಜಂಗುಳಿಯುಂ ರಣವಿ
ಜ್ಜೆಯ ಕಜ್ಜದೇಳ್ಗೆಗೆ ವೈರ್ವೆರ್ಚಿ ಮರುಳ್ಪಡೆಯಂತೆ ಕುಣಿಕುಣಿ
ದಾಡಿ ಸೊರ್ಕುಕ್ಕುವ ಜವ್ವನಿಗರಂ ತಿಕ್ಕಿ ತಿಕ್ಕಿ ತೆಕ್ಕೆಯಾಡುವೆ
ವೆಂದುರ್ಬಿದುದು ಕುರುಕ್ಷೇತ್ರದೊಳ್ !

ಅಭಿಮನ್ಯು ಎಂದುಮೆಂದುಂ ಬರಿದಪ್ಪದ ತನ್ನ ಮೂಡಿಗೆಯ
ತ್ರಣಿಂ ವೈರ್ವೆರ್ಚಿ ಪುರುಡುವೆರ್ಚಿ ಕೆಂಕಮಾಗೆಸೆಯೆ ಬಾಲಶಿವ ೫೪೦
ನೊಲ್ ! ವೈರಿ ಭಟರ್ಗೆ ಎಂತಿಂತು ವಿಶಿಖಾವಲಿಯಂಬಡೆವನಾವ
ದಾವಮಾಟದಿಂತೊಡುವನಾವಚಳಕದಿಂಪೋರ್ವನಾವತೆರಮೆಂದೆಂ
ದುಂ ಬಗೆಯಲ್ಬಾರದಾಗೆ ತಲ್ಲಣಿಸಿದರೆಲ್ಲರ್ ಎರ್ದೆ ನಡುಗಿ! ನಡು
ನಡುಗಿ ! !

# ದ್ವಾದಶಾಶ್ವಾಸಂ

ಇಂತಿಂತು ಕ್ಷಾತ್ರಕುಲ ಸಂಜಾತರ್ ಮುಂಬೆಳೆದಕೊಯ್ಲೆನೆ ತಲೆತಲೆಯಂ ತರಿದೊಟ್ಟಿದ ಸಂಗ್ರಾಮ ಕೋಲಾಹಲದುಬ್ಬಟೆಯಿಂ ವಿರೋಧ ವರೂಥಿನಿಗಳ್ ಅರ್ಜುನ ಸೂನುವಂ ರಂಗತ್ರಿಣೇತ್ರ ನೆಂತಂತು ಕಂಡು ಕಾಣುತುಂ ಕೆಲಂ ಬೆದರಿ ಜೈ ತಿಟ್ಟು, ಕೆಲಂ ಸೈಗೆಟ್ಟು ಮುಚ್ಚೆವೋಗಿ ಕೆಲಂ ಅಸುವಂ ತೆತ್ತು ಪಗೆಯೊಡ್ಡು ಬಕ್ಕ ಬಯಲಾಗೆ ಅಳಿದುಳಿದ ಯೋಧರುಂ ಸಾಮಂತರುಂ ಪಡೆಯುಳ್ಳರುಂ ಕಂಗೆಟ್ಟು ಬಟ್ಟೆಗೆಟ್ಟರ್. ಇಂತಪ್ಪುದುವಾಗಳುರ್ಕಿದ ಬೀಗದಿಂ ಹಾ! ಹಾ! ಎಂದೊರಲುತಿರೆ ಕೌರವಬಲಂ, ಕನಲ್ದು ಕಾವೇರಿದ ಆಳೆವಾಳರುಂ ಏಂಗೆಯ್ಯಲಕ್ಕುಮೆಂದು ಮುಂಬಟ್ಟೆಯುಂ ಅರಸುತಿರ್ದರ್ ; ಎಂತಾ ದೊಡಿವನಂ ಕೊಚ್ಚಿ ಕಂಡರಿಸಿ ಕೊಲೆಗೆ ಕೂಳಿಕ್ಕಲ್ವೇಳ್ಕುಮೆಂದು. ೧೦ ಮತ್ತಮಾ ಅಳ್ಕಿರ್ದಯ ಸಾವಂತರ್ ಪಡೆವಳರ್ ಅಳ್ಕಿ ಬಳ್ಕಿ ಇನ್ನೇಂ ಗತಿಯೆಂದೆಂದು ನರಿಯಂತು ನಾಯಂತು ಬಾಲಮಂ ಮುದುಡಿ ನಡೆಗೆಟ್ಟು ಕಡೆಗಾಲಕೆಂತ:ತು ಬೆಳತುಳ್ ಬೆಂಡಾಗಿ ಬೇಗುದಿಯೊಳ್ ಬೇಯುತಿರೆ ಪೊಳೆಯುತಿರ್ದ ಅಚ್ಚ ಪೊನ್ನ ಕಿರೀಟದ ಪೊಚ್ಚ ಪೊಸ ಮುತ್ತಿನ ಗೊಂಡೆಯುಂ ಕಿತ್ತೀಡಾಡಿ ಚೆಲ್ಲಿ ಸೂಸಿರ್ದುವು ತಿರೆ ಯೊಳ್. ಅರಿರಕ್ಕಸರೊಳದಂದುಗೆವಗೆಯ ಪಾಪದ ಮೊತ್ತಮೊ ಎನೆ ಮನಂಗೆಟ್ಟು ಬಾಡಿ ಸೊಗಡಾದ ಮೊಗಂ ಕಳೆಗುಂದಿ ಕರ್ಪುಗುವ ಕಳ್ತಲೆಯಂ ಪೋಲ್ವಂತಿರ್ದುದು ಎಲ್ಲೆಡೆಯುಂ.

ಕಾರ್ಮುಗಿಲ್ ಕೆಮ್ಮನೆ ಕಾರ್ಗತಿವೃಷ್ಟಿಯೊಬ್ಬುಳಿಯೋ ಎನೆ ಬಡಿ ಗೋಲ್ಗಳ ಸೂಳ್ಸರಿಯಂ ಸುರಿದು ಮುಂದುಗೆಡಿಸಿರೆ ಪದಾತಿಗಳಂ

ಪಡೆಗಳಂ ಸಾಮಂತರಂ ಕಂಡು ನೊಂದು ಸೈಗೆಟ್ಟು ರೊಚ್ಚಿಗೆದ್ದ ಕುರುರಾಯಂ ಮುಂದೆಯ್ದು ಅಭಿಮನ್ಯುವಂ ಕುರಿತು–ಎಲೆ ಸೊರ್ಕಿ ನುರ್ಕಿನ ಬೀರ! ಗುಣಕೆ ಮಚ್ಚರಮಿಲ್ಲೈ, ನೀಂ ಪಿಂದಿರುಗುವೊಡೆ ಹುರುಡಂ ಮರನೆ ಮಗನೆ! ಪಾಂಡುಕುಲದ ಕ್ಷಾತ್ರತೇಜಂ ನಿನ್ನ ಬಲ್ಪಿನ ಬಿಜ್ಜೆಯಿಂ ಸಾರ್ಥಕಂ ಎನೆ ಸಾಲ್ಗುಂ! ಎಂದು ಜವದಿಂ ಪಿಂದಿರುಗಿ ಸೊಪ್ಪುಸೊವಡಾದ ತನ್ನ ಸೇನೆಯಂ ಪುರಿದುಂಬಿಸಿ ಅಭಯವಚನವಿತ್ತು ಪಿಮ್ಮೆರಳಲೆಳಸಿರ್ದ ಜನಪರಂ ಜರಿದು ಜರ್ವಿ ಸಾಮಂತರಂ ಮೂದಲಿಸಿ ಮೊನೆಗಣೆಯ ಕೈಕೊಂಡು ಫಲ್ಗುಣನಂದನನ ರಥಮಂ ತರುಬಿ ಅಡ್ಡೈಸಿ ಒಂದೆ ಪೊಯ್ಲಿಂ ಸೀಳ್ವ ಪೋಳ್ವ ಹಳದಿಂ ಕೂರ್ಗಣೆಯ ಉರವಣಿಸಿದಂ, ಕೂರ ರಕ್ಕಸರಂ ಇದಿರ್ಚುವೊಂದು ರೋಷದೊಳ್! ಆಗಳ್ ಮನವೆರ್ಚಿ ಮೈವೆರ್ಚಿ ಸಾಸಿಕೆಯ ಕಡುಗಲಿತನದಿಂ ಕೆಂಪಡರ್ದು ಮುಂದೆಯ್ದು ಶಲ್ಯಂ ತನ್ನ ಪಡೆಯೊಡನೆ ಬಂದು ಕೌರವರಾಯನಂ ಬೆಂಬಲಿಸಿದಂ. ಮತ್ತಾಗಳ್ ಕೌರವ ನಂದನರ್ ನೂರ್ವರುಂ ಮುಂದೈಸಿ ಬೊಬ್ಬರಿಯುತೆ ಸಾಸದರಿಕೆಯ ಕಟ್ಟಂಕದ ತೋಳ್ವಲದ ಸೊರ್ಕಿನುರ್ಕಿನ ಸಿಂಗನೆರ್ದೆಯ ಗಂಡುಗಲಿತನದಿಂ ಸಂಗರದಂಗಕೆಯ್ದಿದರ್ ತನ್ನಯ್ಯನಂ ಬೆಂಬಲಿಸೆ; ರಣರಂಗಂ ತರುವಲಿಗಳ ಸಂದೋಹದಿಂ ಕೂರಾಳ್ಗಳ ಕಟ್ಟುಬ್ಬರದಿಂ ರಥ ತುರಗ ಪೇರಾನೆಗಳ ಗಡಣದಿಂ ಮತ್ತೆ ಮೊರೆದುದು ಸಪ್ತಸಾಗರಂಗಳ ಮೊರೆಯೊಲ್. ೩೦

ಅಭಿಮನ್ಯು ಇಂತಿವರ ಸಂಚಿನ ಹೊಂಚಿನ ಶಕ್ತಿಯ ಯುಕ್ತಿಯ ಅನೀತಿಯ ಅಧರ್ಮದ ಗಣದಿಂದಿನಿತುಂ ಬೆದರದೆ ಪಿಂಜರಿಯದೆ ಬಡಿಗೋಲ್ಗಳಂ ತೆಗೆದೆಚ್ಚಂ. ಓವೊ! ಆಗಳೇನೆಂಬೆಂ? ಆನೆತಟ್ಟುಗಳ್ ಉರುಳುರುಳಿ ಬಿಳ್ದುವು ಕರ್ಬಂಡೆಗಳ್ ದಡದಡನುರುಳ್ವಂತೆ! ಮುಂದೆಯ್ದಿದ ಕಾಂಭೋಜದ ತೇಜಿಗಳನುರುಬಿ ಪೊಯ್ದು, ತೇರ್ಗಳ ತಿಂತಿಣಿಯಂ ಮುರಿದೊಟ್ಟೆ ಕಾಲ್ದಳಮಂ ಸದೆದಂ ಪಳುವಂ ಕಡಿದು ೪೦

ಸದೆದಂತೆ. ಕೌರವಂ ಅಚ್ಚರಿಯಿಂ ಬೆಕ್ಕಸಬೆರಗುವಟ್ಟು ವರಿಸಿಂಗ
ಮಂ ಮದ್ದಾನೆಗಳ್ ಮುತ್ತುವಂದದೆ ಸುತ್ತುವರಿದು ಮುತ್ತಲ್
ತನ್ನವರ್ಗೆ ಪುರಿದುಂಬಿಸಿ ದುರ್ಯೋಧನಂ–ಎಲೆ, ಮಗುವೆ! ನೀ
ಕೆಡಬೇಡ. ರಣಕೆ ಬೆಂಗೊಟ್ಟು ಪೊ....ಪೋಗೆಲೈ! ಎಂದೆನುತುಂ
ಅಗಣಿತಾಸ್ತ್ರಂಗಳ ಸೂಳ್ಸರಿಯಂ ಸುರಿಸಲೊಡನೆ ಎತ್ತಲುಂ ಹಿಂದು ೫೦
ಮುಂದೆನ್ನದೆ ಮಿಂಡೆಳ್ದ ಅರಿಕುಲದ ಸೊರ್ಕಿನುರ್ಕಿನ ಬಲ್ಪಿನ ಬಿಲ್ಲಾ
ಳ್ಗಳುಂ ಒಗ್ಗೂಡಿ ಬಡಿಗೋಲ ಬಲ್ಸರಿಯಂ ಕರೆದರ್. ಅಭಿಮನ್ಯು
ತೆಕ್ಕನೆ ಪ್ರತಿಭಟಿಸಿ ಕೂರ್ಮೊನೆಯ ಸರಳ್ಗಳ ಸೂಳ್ಸರಿಯಂ ಕರೆ
ಯಲ್ ಇಬ್ಬಣದ ಬಲ್ಪಿನುಬ್ಬರಂ ದೆಖ್ಖಾದೆಖ್ಖಿಯಾಗೆ ಅದ್ಭುತ
ಪಾರಾವಾರದೊಲ್ ಬೊಬ್ಬಿರಿದುದು ಸೇನೆ!

ಅಭಿಮನ್ಯು ಪುಟಿಪುಟಿಯುವ ಸೆಂಡಿನೊಲ್ ಪುರುಡುಗೊಂಡು
ಸಾರಥಿಯಂ ಬೆಚ್ಚದಿರೆಂದು ಪುರಿದುಂಬಿಸಿ ಸಿಂಹನಾದಂಗೆಯ್ದು
ಒರ್ಮೆಗೆ ಸೂಳ್ಸರಿಯ ಸರಮಾಲೆಯಂ ಕರೆಯಲ್ ಸಾಯಿರ
ಸಾಯಿರ ದಿಟ್ಟ ಕರಿಘಟೆಗಳ್ ರಥತುರಗಂಗಳ್ ಶಸ್ತ್ರವೊತ್ತ
ಕಾಲಾಳ್ ಮೇಲಾಳ್ಗಳ್ ಅರಸರ್ ಸಾಮಂತರ್ ಧೀಮಂತರ್ ಕೆಡೆ ೬೦
ದರ್ ಶಸ್ತ್ರ ಶಯ್ಯೆಯಲಿ ಹಾ! ಹಾ! ಎನುತಂ, ಸಾಲು ಸಾಲೈಸಿ!

ಕರುರಾಯನ ಸಹಭವಂ ವೈರಿಯ ಬಾಣಾಹುತಿಯಿಂ ಧರೆಗೆ
ಕೆಡೆದ ತನ್ನವರಂ ಕಂಡಳ್ಕಿ ಅಹ! ಕೈತಪ್ಪಾಯ್ತು! ಇವನಂ ಇಂತು
ಮಿಂತೆಂದರಿಯದೆ ಎದುರ್ವೆತ್ತು ನುಗ್ಗುನುರಿಯಾಯ್ತೆಮ್ಮ ನಿಡು
ಸೈನ್ಯಂ. ಶಿವ, ಶಿವಾ! ಇನ್ನುಮಿನ್ನು ಕುಂದುವುದೆ ಸಿಸುವಿವನ
ಬಲ್ಪಿನ ಬಿಲ್ಲಾಳ್ತನದ ಸೊರ್ಕಿನುಬ್ಬಟೆಯ ಕಟ್ಟುಬ್ಬರಂ? ಎನಲ್ಕೆ
ಸುಭಟರುಂ ಎರ್ದೆಯಳ್ಕಿ ಪಿಂಜರಿಯೆ ಅಳಿದುಳಿದ ತುರಗಂಗಳ್
ಬೆದರಿ ಬೆರ್ಚಿ ಪಿಂದೆಗೆಯೆ ಸಾರಥಿಯುಂ ಪಿಂತಿರುಪಿದಂ ರಥಮಂ.
ಒಡನೊಡನೆ ಮಿಹಿರಸುತಂ ತಡೆಹಾಯ್ದು ರೋಷದಿಂದುರ್ಬಿ ಕೆಚ್ಚಿನ
ಕಿಡಿಯುಂ ಕಾರಿ ಕಕ್ಕಸದನಿಯಿಂ ಜರ್ವಿದಂ–ಎಲೆ, ಎಲವೊ! ಕೂಳ! ೭೦

ನಿಲ್, ನಿಲ್! ಪಸುಳೆಯಾಟದ ಪುರುಪಿನಿಂ ಪುರುಡಿನಿಂ ಕೂರಂಬು
ಗಳಂ ತೊಟ್ಟು ಗೆಲ್ದೊಂದು ಗೆಲ್ಲವೆಯೇಂ? ನಾಮುಂ ಸಿಸುವಿವ
ನೆಂದು ಮಾನಿಸಿದುದರಿಂದಲ್ತೆ ನಿನ್ನ ಸೊರ್ಕಿನುರ್ಕಿಗೆ ಬಿತ್ತು?
ಇನ್ನೆಬರಂ ಕೆಯ್ದುಗೆಯ್ದು ಈಗಳಿನ್ನಾರ ಬಸುರಂ ಪುಗುವೆ?
ಯೋಧರ್ ವ್ಯೈಗಾಪಿನ ತುಳಿಲಾಳ್ಗಳ್ ನಿನ್ನ ಕೂರ್ಗೋಲ ಪೊಯ್ಗೆ
ಬಸವಳಿದುದೊಂದು ಪೆರ್ಮೆಯಲ್ತು. ಇದಿರ್ವೆತ್ತ ವೀರ ಕರ್ಣನ
ಕೋಲ್ಗಳ ಕೋಂಟೆಯುಂ ಭೇದಿಸಿ ಬಾಳ್ವೆ! ಆರೊ ಮುಚ್ಚಿಗೆ
ಸಂದರೆಂದು ಆನೆತುರಗಂಗಳ್ ಅಸುವಂ ತೆತ್ತುವೆಂದು ಕೊರ್ವಿ ಮೆರೆ
ಯದಿರ್! ಎನುತುಂ ಸಿಂಗಂ ಸಿಂಗಮುನೆದುರ್ಚುವಂತೆ ಬಿಲ್ಲಂ
ಜೇವಡಿಸಿ ಬಡಿಗೋಲ್ಗಳೆಚ್ಚಂ! ೮೦

ಅಭಿಮನ್ಯು ಚಂಡತನದಿಂ ವ್ಯೆಮನಮುರ್ಬೆ ಬಡಿಗೋಲಿಂದ
ದಂ ತುಂಡಿಸಿ ಮತ್ತಂ ಕೂರಂಬುವಂ ಶರಾಸನದೊಳ್ ಹೂಡಿ
ಏಸಾಡಿ ಮಿಹಿರಸೂನುವಂ ಕಂಗೆಡಿಸಿದಂ. ತೆಕ್ಕನೆ ಕೂರ್ಮೆನೆಯ
ಮುಳ್ಳಿನ ಕಣೆಗಳ್ ಮೆಯ್ಯಂ ಮುತ್ತಿದಂತಾಯ್ತಲಾ ಎನುತುಂ
ಪಲ್ಕಡಿದ ರಾಧೇಯಂ ವ್ಯೆಕೊಡವಿ ಕೂರ್ಗಣೆಗಳಂ ದೂರ ತೂರಿ
ಚೆಚ್ಚರದಿಂ ಮಾರಕಾಸ್ತ್ರಮುಂ ತೊಟ್ಟು ಬಿಲ್ಲನಾರಿಯುಂ ಆಕರ್ಣಾ
ತಂ ಸೆಳೆಯುತಿರ್ದುದಂ ಕಂಡ ಅಭಿಮನ್ಯು ಪಡಿಬಾಣದಿಂದವನ
ಬಿಲ್ಲನಾರಿಯುಂ ಕತ್ತರಿಸಿ ಕೆಡಂಗಿದಂ. ಆ ಪೊಳ್ತಿಂಗೆ ಸಾಸಿಕೆಯ ನೆಚ್ಚು
ಕರಗಿದಂತೆಯುಂ ಸೊಮ್ಮಳಿದಂತೆಯುಂ ಮೊಗಂ ಬಣ್ಣಂಗೆಟ್ಟ ಕರ್ಣಂ
ಕನಲ್ದು ಕಿಡಿಕಿಡಿಯಾಗಿ ಕೈಸೋತ ಒಡಲ್ಗಿಚ್ಚಿನ ಮಚ್ಚರದೊಳ್ ೯೦
ಕುದಿಕುದಿದು ಕಡೆಗಾಲದ ಬಿಗುರ್ವರಿಜನೊಂದಾಟೋಪದಿಂ ಇಂದಿ
ನೀವಿಸಸನದೊಳರಿಯ ಬಲ್ಪಿನ ಬಿಲ್‌ವಿಜ್ಜೆಯ ನಿಶಾಟನುಬ್ಬಿನ
ತೋಳ್ವಲದ ಗೋಣ್ಮುರಿದು ಮುಡಿಗಟ್ಟಲಾನೆ ಸಾಲ್ವೆಂ. ಇಂತಿದ
ರೊಳ್ ಪಿಂಜರಿದೊಡೆ ಆಂ ಬಲ್ಪಿನ ಬೀರನಲ್ತು; ಆಂ ರವಿಸುತನಲ್ತು;
ಆಂ ಕರ್ಣನಲ್ತು! ಕಾಡೊಳ್ ಕೊರ್ವಿನಿಂ ಬೆಳೆದ ಪೇರಾನೆಗಳ
ಕುಂಭತಳಮುಂ ಎನ್ನೊಂದು ಕೈಯಪೊಯ್ಲಿಂ ನೀಳ್ದು ಇಕ್ಕಡಿ

ಗೆಯ್ವನೆಗಂ ಇವನ ಮಾತೇಂ? ಕೂಳ ಖಲನಂ ಪೊಳಕು ಪೆಳಕಪ್ಪಿ
ನೆಗಂ ತರಿದು ತುಳಿದು ಹೊಸಕಿ ಮೂದೆಸೆಗಿಕ್ಕದಿರ್ದೊಡಾಂ
ಕೀಳನ ಕೂಳನ ದುರ್ಗತಿಗಿಳಿವೆಂ, ಒಂದು ತನ್ನೊಳೆ ಪೂಣ್ದು
ಪಲ್ಮಸೆಗಿ ಹೂಂಕರಿಸಿ ಮಾಂಕರಿಸಿ ಪೊಡರ್ಪಿನ ಪರ್ಪರಿಕೆಯ ೧೦೦
ರೋಷದ ಬೀರದ ಬಲ್ಪಿನ ಜವನ ದೂತನೆನೆ ಕಡು ಕಾಯ್ಪಿನಿಂ
ಕೆಂಗಲಿಸಿ ಬೇರೆ ಬಿಲ್ಲಂ ಕೈಕೊಂಡು–ಎಲೆ ಅಭಿಮನ್ಯು ! ಇಂದಿನೀ
ಬಲ್ಗೋಲ ಕವೆಗೋಲ ಇರ್ಕುಳಿಯ ಕರಗಸದ ಶೂಲದ ಜಾಲದ
ಕೈಚಳಕಮಂ ನೋಡಿ ಮೆಯ್ಗೊಂಡು ಕೆನ್ನೆತ್ತರ್ ಕಾರ್ದೊಡೆ ನೀಂ
ತಕ್ಕಂ! ಎಂದೆಂದು ಜರ್ವಿ ಅಬ್ಬರಿಸಿ ಮಾರಾಂತು ಬಿಲ್ಲಾಳ್ತನದ
ಬಿಗುಹಿನಿಂ ಪನ್ನತಿಕೆಯ ಗಂಡಗರ್ವದ ಚಂಡಭಟತನದಿಂ ಮಿಂಚಿನ
ವೇಗದೊಳ್ ಕವೆಗೋಲಂ ತೆಗೆದೆಚ್ಚಂ !

ಅಭಿಮನ್ಯುವದಂ ಆ ಚಣದೊಳ್ ಕತ್ತರಿಸಿ–ಇದೊ, ಸೈರಿಸು!
ಎನುತುಂ ಬಿಡಿ ಸರಳ್ಗಳ್ಗೈದಂ ಒಟ್ಟಿಗೆ ಸೆಳೆದುವಿಟ್ಟೊಡನೆ ಉರಿಗಿಡಿ
ಯಂ ಕಾರುತುಂ ಕಾಳ್ಗಿಚ್ಚು ಪೊತ್ತುರಿದುದೋ ಎನಲ್ಕೆ ನುಗ್ಗಿ ೧೧೦
ಬರುತಿರೆಯಿರೆ ರವಿಸುತನದಂ ಮಾರೊಡ್ಡಿ ಕತ್ತರಿಸಿ ಗಂಡಗರ್ವದಿಂ
ಬೀಗಿ–ಸಾರು ಸಾರೆಲವೊ ಕೂಳ! ಎಲ್ಲರಂತೆನ್ನಂ ಭಾವಿಸಿದೊಡೆ
ನಿನ್ನ ಘಟವನಿಲ್ಲೆಸೆದಪೆಂ ! ಜೋಕೆ !!

ಅಭಿಮನ್ಯು–ಅಹ! ಅಂತೆಂಬೊಡೆ ಪತ್ತೆರ್ದೆಯಿರ್ಕುವೋಂ
ನಿನ್ನೊಳ್ ರಾಧೇಯ ? ನಿನ್ನ ರಣವಿಜ್ಜೆಯುರಟಣೆಯಂ ನೋಡ
ಲಕ್ಕು ! ಎರ್ದೆಗೊಟ್ಟು ನಿಲ್ಲೈ ?

ಅಂತೆಂದು ಕೂರ್ಗೊನೆಯ ಬಿಡಿಸರಳ್ಗಳಂ ತೊಟ್ಟು ಕರ್ಣನ
ಬಡಿಗೋಲ್ಗಲುರವಣೆ ಮುಂದರಿಯದೊಲ್ ಕತ್ತರಿಸಿ ಕಡಿದೊಗೆದು
ಪೊಸಮಸೆಯ ಮೂರಂಬುಗಳಂ ಪೂಡಿಬಿಡಲ್ ಕರ್ಣನ ಮೈ
ಮತ್ತೆ ತೊಯ್ದುದು ಕೆನ್ನೀರಿಂ ಹಾ ಎನುವನಿತಱೊಳ್. ೧೦೨

ಕರ್ಣಂ ಕನಲ್ದು ಬಡಬಾನಲದವೊಲ್ ಉರಿದುರಿದು–ಎಲೆ ಮರುಳೆ! ನಿನ್ನ ಪುಲ್ಲಂಬು ತಾಗಿದೊಡಳ್ಕುವೆನೆ? ನೋಡು ನೋಡು ತ್ರಿರೆನ್ನ ಬಲ್ಪಂ ! ಎಂದೆನುತುಂ ಚೆಚ್ಚರದಿಂ ಬಡಿದೆಚ್ಚೊಡಾಗಳಿಗೆಯೊಳ್ ರೊಯ್ಯನೆ ಶಬ್ದವೇಗದಿಂ ಪಾರ್ದ ಸರಳ್ಗಳುಂ ಎಳ ಮೆಯ್ಯಂ ಕವಿಯೆ ಹಿಳುಕು ಮಿನುಮಿನುಗಿದುವಿರುಳ ಮಿಂಚುಂ ಬುಳು ಪೊಳೆಪೊಳೆವಂತೆ. ಆಗಳಾ ಅಭಿಮನ್ಯು ವ್ಯೆಯೊದರಿ ನಸು ನಗುತುಂ ಮೂಡಿಗೆಯಿಂ ನಿಡುಸರಳಂ ತೆಗೆದು ಕೊಪ್ಪಿಂಗಳವಡಿಸಿ ಬಲದಿಂ ಚಲದಿಂ ಸಿಡಿಲ ಕಾಯ್ಪಿನಿಂ ಸೆಳೆದುವಿಡಲ್ ರಣಕೇಳಿಯುಂ ಜಕ್ಕಳಿಸಿ ಮೆರೆದುದು ರಣರಂಗವಂ ಜಂಕಣಿಸಿ.

ಹಾ! ಹಾ ! ಎಂದೊರಲ್ದುದು ಅರಿಗಣಂ. ೧೩೦

ಭಲೆ ! ಭಲೆ ! ಎಂದುದಮರಗಣಂ.

ರಾಧೇಯುಂ ಅಭಿಮನ್ಯುವಿನ ಕೈಯ ಕೈದಂ ಮುರಿಯಲ್ ಹೊಂಚಿ ತೆಕ್ಕನೆ ಸರಿಯೆ ಭೋಂಕನೆ ಮುಸುಂಕಿದ ಅಭಿಮನ್ಯುವಿನ ವಿಶಿಖಾವಲಿ ಸಾಯಿರ ಸಾಯಿರ ರಾವುತರಂ ಮಾವುತರಂ ತರಿದಿಕ್ಕಿ ದು ದರೆಚಣದೊಳ್. ಕೌರವಾನುಜರ್ ಮೆಯ್ಯ ಬಾದಣದಿಂ ಮನಂ ಬೇವಾಗಿ ತಕ್ಕಳಿದು ರೋಷದಿಂ ತಾಪದಿಂ ಬೇಗುದಿಯಿಂ ನಲುಂಗಿ ಸುರುಂಟೆ ತನ್ನೊಂದು ಅಪದೆಸೆಯಿಂದಂತುಟೊದವಿದ ಗಂಡದಿಂ ಪಾರಾಗುವ ಚಿಂತೆಯೊಳೆಂತಿವನಂ ಕೊಂದು ಕೊಲೆಗೆ ಕೂಳಿಕ್ಕಲಕ್ಕುಮೆಂದು ಮನದೊಳ್ ಬಗೆದು ಪ್ರತಿಭಟಿಸುತೆ–ಎಲೆ, ವ್ಯೆಕೊರ್ವಿನ ಪುಚ್ಚಳಿಯ ಬೀರ ! ಇನ್ನೇಂ ನಿನ್ನ ಕೊರ್ವು ಕುಗ್ಗಿ ೧೪೦ ಬಲಂ ತಗ್ಗಿ ಮಿತ್ತುವಿನೂರ ಚಾವಡಿಗೆ ಉಸಿರಂ ತೆತ್ತು ಮೆಯ್ಯಂ ತಿರೆಗೊಗೆದು ಪೋಪುದು ದಿಟಂ ! ಈಗಳೆಮ್ಮಂ ಇದಿರ್ಚೆ ಬಾಣಾವಲಿಯ ಸವಿಯಂ ನೋಡ್ವೈ!· ಎಂದುಮೊಂದು ಜರ್ವಿ ಪತ್ತಂಬುಗಳಂ ಚಂಡತನದಿಂ ಹದನರಿತು ಸೆಳೆದುವಿಟ್ಟು ಬೊಬ್ಬಿರಿಯೆ

ಕೌರವ ಕುಮಾರಕರ್ ಸೇನೆವೆರಸಿ ರಣದಗ್ಗಿಯುಂ ಹೋಯೆಂದು ಪೊಕ್ಕರ್ ಜವನ ಮಂತಣದಿಂ ನ್ಯೆವೆರ್ಚಿ.

ಮತ್ತಂ ಜಂಕಣಿಸಿದುದು ರಣಕೇಳಿ!

ಕಿರುಪಿಸಾಸೆಯು ಪೊದರ್ದಳಿಯು ಎಳಮೆಯ್ಯ ಜವ್ವನಿಗರ ಬಲ್ಪಿನ ಬಿಲ್ಲಾಳ್ತನದ ಸೊರ್ಕುಕ್ಕುವ ಸೊರ್ಕಾಳ್ತನದಿಂ, ಪೊಸ ಮಸೆಯ ಕೂರ್ಗಣೆಯು, ಇಟ್ಟಿಯು, ಕಕ್ಕಡೆಯು, ಇರ್ಕುಳಿಯು, ೧೫೦
ಸೂಲದ ಕೊಡಲಿಯು, ಗಂಡುಗತ್ತರಿಯು, ದಂಡದ ಉರುಟಣೆ ಯುಂ ಜವನ ಜೂದುಗಾರರ ಜಂಗುಳಿಯು ಪಡಗರದ ದಳವುಳದಿಂ ಮುತ್ತಿದುದೊ ಎನೆ ಜವ್ವನಿಗರ ಜೀವಾತ್ಮಮುಂ ಸೆರೆವಿಡಿದತ್ತು.

ಇತ್ತಲ್ ಧರಣಿಪತಿ ರಣದೊಳ್ ಕಂದಂ ಏಂಗೈವನೊ ಎಂದು ಮರುಗಿ ಕರಗಿ ಚಿಂತೆವೆತ್ತು ಭೀಮ ನಕುಲ ದ್ರುಪದ ದೃಷ್ಟ ದ್ಯುಮ್ನರಂ ಕರೆಸಿ ಸೌಭದ್ರಂಗೆ ಬೆಂಬಲಮಾಗಿ ಈಗಳೆ ಪೋಗಿ ರೆಂದು ಕಳುಪಿದಂ. ಅನಂತರಮಾ ಕಟ್ಟಂಕದ ತೋಳ್ವಲರ್ ಸಾಸಿ ಗಳ್ ತರತಮ್ಮ ಅಸ್ತ್ರಂಗಳಂ ಕೈಕೊಂಡು ಚೆಚ್ಚರದಿಂ ಪೊರಮ ಟರ್ ಕುರುಕ್ಷೇತ್ರಕೆ. ಭೀಮಸೇನಂ ಗದೆಯುಂ ತಿರ್ರನೆ ತಿರುವುತುಂ ಬೆಟ್ಟು ನಡೆವಂತೆ ನಡೆಯುಉತುಂ ಸಿಂಹನಾದಂಗೈಯ್ಯುತುಂ ೧೬೦
ಕಂದನಾವೆಡೆಯಿಹನೆಂದು ಕಣ್ಣೊಳ್ ಕಣ್ಣಿಟ್ಟು ನೋಡುತುಂ ಅಳವಿತಿರಿಯೊಳ್ ನಕುಲನೊಡಂ ಮುನ್ನಡೆದಂ. ಮಿಕ್ಕುಳಿದೆಲ್ಲರ್ ಅತ್ತಮಿತ್ತಲ್ ನುಗ್ಗಿ ರಣರಂಗದ ಘೋರರೂವಿನ ಜಂಕಣೆಯೊಳ್ ಅಭಿಮನ್ಯುವಿನ ಸೆಲೆಯುಂ ಕಂಡು ರಥಮುಂ ತಿರುಪಿರದತ್ತಲ್. ಪದ್ಮವ್ಯೂಹದ ಪೆರ್ಬಾಗಿಲೊಳ್ ಕಾವಲಿರ್ದ ಸೈಂಧವಂ ಅಡ್ಡೈಸಿ ಒಳಪುಗಲೀಯದೆ ಖಲನ ಕೂಳನ ಪೊಳಕು ಪೆಳಕಪ್ಪಂತೆ ಒಲ್ ಬಿರುಸಿನ ಕಾಳಿಗಮುಂ ಪೂಡೆ ನಕುಲ ಸಹದೇವ ಭೀಮಾದಿಗಳ್

ಒಗ್ಗೂಡಿದರ್. ಇರ್ಕಡೆಯುಂ ಮೈವೆರ್ಚಿ ಪಳಂಚುತಿರೆಯಿರೆ
ಅರಿರಕ್ಕಸರ ಕೈಯ ಕೋಲ್ಗಳುಂ ಶಿರದ ಶೀಸಕಮುಂ ಮೈಯ
ಬಜ್ಜರದಂಗಿಯುಂ ಕಡಿಪಡೆದುದು ಸೌವ್ವನೆ ಸೀಳ್ದು. ಮೊಗ ೧೭೦
ಮೊಗಂಗಳ ಕಳೆ ಪಗೆಯ ಕಾಯ್ಪಿಂಗೆ ಸುಟ್ಟುರಿದು ನಡುವಗಲ
ನೇಸರ ಕಾಯ್ಪಿಂಗೆ ಪಾಸಟಿಯಾಗೆ, ತೋಳ್ವಲಂ ದಾಸವರುಬ್ಬ
ಟಿಯ ತೋಳ್ವಲಮಂ ಪೋಲ್ತಿರೆ ಕೊಳುಗುಳದ ರಕ್ಕಸವಗೆಯುಂ
ಗಳಿಗೆ ಗಳಿಗೆಗುಂ ಸೋಲುತಿರ್ದೊಡಂ ಕೆಚ್ಚಳಿಯದೆ ಪೊಸವಗೆಯ
ಶಸ್ತ್ರಾಸ್ತ್ರಂಗಳ ಸಂಗರದಿಂ ರಕ್ಕಸವಗೆಯ ಸಾಸದಿಂ ಬೀರರುಂ
ಮುಂದೆಯ್ದು ಕಾಯ್ಪು ಕೊನರುತಿರ್ದುದು ಚಣಚಣಂ.

ಕೊಂಬು ಕಹಳೆಯ ಸಂಕಿನ ಬೊಬ್ಬಿರಿವ ನಾದಂ ಕೊರ್ವಿನಿಂ
ಜರ್ವಿ ನುಡಿಸುವ ಕಕ್ಕಸದ ನುಡಿಗಟ್ಟುಂ ಅಸ್ತ್ರಶಸ್ತ್ರಂಗಳ ಜಂಕ
ಣೆಯ ಸಬುದಗಿಬುದಂ ಗಡಣಿಸಿದುದು ಕಿವಿಗೆ ಕಕ್ಕಸವಾಗಿ.
ಭೀಮಸೇನಂ ರೋಸದಿಂ ಎದುರ್ವೆತ್ತು ತಾಗಿ ಬೀಗಿ ಗದೆಯಿಂ ೧೮೦
ಜಡಿದಾರ್ದು ಘಾತಿಸಿ ಭೀತಿಸಿ ಜರ್ವಿ ಜಂಕಿಸಿ ರಣರಂಗಂ ಕಡು
ಕಾಯ್ಪಿನಿಂ ಜಳಜಳಿಸೆ ಜಯದ್ರಥಂ ಕಿಡಿಗಣ್ಣಿಂ ನೋಡುತುಂ
ಕೇಳಿಸಿದನಿಂತು–ಈ ಬವರದೊಳ್ ಕಲಿಪಾರ್ಥನಲ್ಲದೆ ಪವನ ತನ
ಯಂಗೆ ಪುಣಿಯಲ್ ಜಯದ್ರಥಂ ಗೋವಳಿಗನೇಂ ?

ಭೀಮಸೇನಂ ಆ ನುಡಿಯಂ ಕೇಳ್ದು ಕನಲ್ದು–ಎಲೆ ಜಯ
ದ್ರಥ ! ಮುಕ್ಕಣ್ಣನ ಕೃಪೆಯಿರ್ಪುದೆಂದು ಗರ್ವಿಸದಿರ್. ಎನ್ನ
ಗದೆಯ ಪೊಯ್ಲಿಂಗೆ ಬೆಟ್ಟುಂ ಜರಿವುದು ಕಣಾ !

ಜಯದ್ರಥಂ– ಓ, ಏಂ ಮಾತೊ? ಪೋ! ಪೋ! ನೂರಾರು
ಭೀಮಸೇನರುಂ ಒಗ್ಗೂಡಿದೊಡಂ ಎನ್ನಂ ಗೆಲ್ವುದು ಮೊಲ್ವುದು
ಕನಸು ಕಣಾ ! ಇದೊ ಸೈರಿಸು ! ೧೯೦

ಎನ್ನುತಲೊಡಂ ಬಲ್ಗೋಲಿನ ಸೂಳ್ಸರಿಯಂ ಕರೆಯೆ ದೃಷ್ಟ

ದ್ಯಮ್ನಂ ಎದುರ್ವೆತ್ತು ಪ್ರತಿಬಾಣಂಗಳಂ ಪೂಡಿ ಸೊಕ್ಸರಿಯಂ ಕಡಿ
ದೊಗೆದು ಮಾರ್ಗಣೆಗಳಂ ಪೂಡಿದಂ. ಆಗಳೀಂ ಪೇಳ್ವೆನೋ?
ಕೃಪ ಶಕುನಿ ಸೌಬಲ ಮುಂತಪ್ಪ ಪಡೆಯೊಡೆಯರ್ ಮುನ್ನುಗ್ಗಿ
ಜಯದ್ರಥನಂ ಬೆಂಬಲಿಸೆ, ರಣದುಬ್ಬರಂ ಕವಡುವಿಜ್ಜೆಯ ಮಾಟ
ದಾಟದ ಗತಿಯೊಳ್ ಬಲ್ಪಿನೇಳ್ಗೆಯಂ ಕಟ್ಟುವ ಕುಟ್ಟುವ ಮಗು
ಳ್ಚುವ ಮೆಯ್ಗಲಿಯಾಗಿ ಮಾರ್ಗಣೆಗಳಂ ಮಾರ್ಗಣೆಗಳಿಂ, ಮಾರ
ಕಾಸ್ತ್ರಂಗಳಂ ಮಾರಕಾಸ್ತ್ರಂಗಳಿಂ ಕಂಡರಿಸಿಯುಂ ರಣತೇಜಮಂ
ತಗ್ಗಿಸಿ ಕುಗ್ಗಿಸಿ ಸಮಂತು ಸಲ್ಲದ ಪೊಲ್ಲದ ಸಂಗರದಂಗಮಂ ಪೂಡಿ
ಕೇಳ್ಮಾಡಿ ಹೂಂಕರಿಸಿ ಮಾಂಕರಿಸಿ ಬಿರುನುಡಿಗಳಿಂ ಜರ್ವಿ ಜಾಲಾಡು ೨೦೦
ತಿರೆ ಮತ್ತೊಂದೆಡೆಯೊಳ್ ಪೊಣರ್ಕೆಯುಗ್ಗಿಯುಂ ಜಗಜಗಿಸು
ತಿರ್ದುದು ಹೊಯ್ ಕೈಯಾಗಿ.

ಅತ್ತಲಾ ಅಭಿಮನ್ಯು ಕಡುಗಿ ಕಾದಿ ಬಿಡಿ ಸರಳ್ಗಳಂ ಬೀರಿ
ಕೂರ್ಗಣೆಗಳಂ ತೊಟ್ಟು, ಮಾರಾಂತು ತರಿದನಾನೆಗಳಂ, ತೇಜಿಗಳಂ,
ಪಡೆಗಳ ತಂಡತಂಡಮಂ, ಮತ್ತಮಾ ಅರಿರಾಯರ ಬಲ್ಗೈ ಬಂಟರಂ,
ಲೋಕದೊಳ್ ತನಗೆಣೆಯಿಲ್ಲದವೊಲ್ ಮುಂದೊತ್ತಿ ಮುಕ್ಕುರಿಸಿ
ಜಕ್ಕಳಿಸಿ ರೋಷದಿಂ ತೋಷದಿಂ ಬೀರದೇಳ್ಗೆವೆತ್ತು ರಣರಂಗದೊಳ್
ತ್ರಿವಿಕ್ರಮನಂತೆ ರಾರಾಜಿಸಿದಂ! ಜವ್ವನದುರ್ಜನ ಅಸುರನಂತೆ,
ನಿಜಬಲ್ಪಿನ ಸುರಪನಂತೆ ಕಡುಗಲಿಯಂತೆ ಪೊಣರ್ದು ಅರಿರಕ್ಕಸರಂ
ಸದೆದು ಕೆನ್ನೀರಿಸಿಂ ಜಾಲಾಡಿದಂ ! ೨೧೦

ಆಗಳ್ ಶಲ್ಯಕುಮಾರಕಂ ಕೆಚ್ಚಿನಿಂ ಕಿಚ್ಚಿನಿಂ ರೊಚ್ಚಿನಿಂ
ಪಡೆಯಂ ಮುಂದೈಸಿ ಮುಂದೊತ್ತಿ ಮೇಲ್ವಾಯ್ದು ನುಗ್ಗಿ ಬರೆ ಅಭಿ
ಮನ್ಯು ಅಸವಸದಿಂ ಮಲೆತು ಕೈಯ ಕೂರಂಬಿನೊಳ್ ತಾಗಲ್
ಸಿಡಿಲ್ಗೆ ಸಮನಿಸಿ ಸಬುದಂಗೊಂಡು ಶಲ್ಯಾತ್ಮಜನ ಕೊರಳಂ
ಕೋರ್ಪೈಸಿ ತರಿಯಲ್ಕೆ ಆತನಬ್ಬರಂ ತಟ್ಟನೆ ಕಡಿದಾಯ್ತು
ರಣದೊಳ್ !

ಹಾ ಹಾ ! ಎನುತಿರೆ ಕೌರವ ಬಲಂ; ಮಡಿದನಕಟಕಟಾ ! ತಮ್ಮಯ ಪ್ರಾಣಸುಖನೆಂದು ದುರ್ಯೋಧನಾತ್ಮಜರ್ ಕಾಲರುದ್ರನೊಲ್ ಸಿಟ್ಟನಗ್ಗಿಯಂ ಕಾರಿ, ಉರಿದುರಿದು ಕಣ್ಗಳಂ ಕೆಂಗಲಿಸಿ ಪುರ್ಬಂ ಬಿಗಿದು, ನಮಿರ್ ನಿಮಿರ್ದು, ಗುಡುಗುಡುಗಿ ಮಸಗಿದರ್ ಚಂಡಪ್ರಚಂಡ ಭುಜಬಲದಿಂ. ಕಟ್ಪುರದ ಪೊಡರ್ಪಿನಿಂ ಎಳಯರ ಬಿಲ್‌ಬಿಜ್ಜೆಯೇಳ್ಗೆಯಿಂ ಮುಸುಂಡಿಯ ಕೂರ್ವಾಳದ ಕಠಾರಿಯ ಕೂರ್ಗಣೆಗಳ ಸಬುದದಿಂ ವೋಸಗೀಸದಿಂ ಬೊಬ್ಬಿರಿವ ಬೊಬ್ಬೆಯಿಂ ಬೊಮ್ಮಾಂಡಂ ಬಿರಿವಂತು ಪಳಂಚಿದುದು ರಣರಂಗಂ. ಜಗಜಗಿಪ ಬಜ್ಜರದ ಮುಕುಟದ, ಪೊಳೆಪೊಳೆವ ಕರ್ಣಕುಂಡಲಂಗಳ, ಕೊರಳ ಹಾರಂಗಳ, ಹುರಿಗೆಯ್ದ ಕೆಮ್ಮಾಸೆಯ, ಚದರ್ದ ಪೊದರ್ದಲೆಯ ಕೈಚಳಕದ ಮಿಂಚಿನ ಸಂಚಿನ ಸಂಗರಂ ಮೆರೆದುದು ಕಲಿತನಂ ಮಿಗಾಂ ! ೨೨೦

ಭಾಪುರೇ ! ಭಾಪು !! ಎಂದುದಮರಗಣಂ.

ಕೌರವರಾಯಂ ಸುತರಾಟೋಪಮಂ ಕಂಡುಬ್ಬಸಂಬಡುವಂತು, ಸಾಮಂತರ್ ಅರಸರ್ ಕಟ್ಟಚ್ಚರಿಬಡುವಂತು ದೆಸೆಮೂಲೆಗಳ್ ಮಾರ್ದನಿಗೊಡುವಂತು ಕೋಪಕಿಖಿದಳ್ಳಿಸಿ ಕಿಡಿಕಿಡಿವೋದಂ! ಕೌರವಕುಮಾರಕಂ ಲಕ್ಷ್ಮಣಂ ಪಲ್ಮಸಗಿ ಕನಲ್ದು ಬಿರಿನುಡಿಯಿಂ–ನಿಲ್, ನಿಲ್! ಎಲೆ ಧೂರ್ತ! ಶಲ್ಯಾತ್ಮಜನಂ ಜವಹುರಕ್ಕಟ್ಟಿದ ನಿನ್ನ ಕೊರ್ವಿನೆರ್ದೆಯಂ ಸೀಳ್ದು, ನೆತ್ತರಂ ಚೆಲ್ಲಾಡಿ ಎನ್ನ ಪ್ರಿಯ ಸಖನೆರ್ದೆಯಂ ತಣಿಪೆಂ! ಎನಲೊಡಂ ಮಿಕ್ಕುಳಿದ ಕೌರವಕುಮಾರಕರ್ ನೆಣಗೊಬ್ಬಿನಿಂ ಮ್ಮೆವೆರ್ಚಿ ಬಾಣಂಗಳ ಬಲ್ಸರಿಯಂ ಕರೆದರ್ ದಿಟ್ಟತನದಿಂ. ಆಗಳ್ ಪೊತ್ತುರಿವಗ್ಗಿಯೊಳ್ ನೆಯ್ಯನೆರೆದಂತು ಉರಿದುರಿದು ಬಂಡೆಳ್ದು ಮಾರಾಂತು ತರುಬಿ ಮಾರಂಬುಗಳನೇಸಾಡಲ್ ಅಭಿಮನ್ಯು, ಕಾರೊಡಲ ಪೇರಾನೆಯ ಮೆಟ್ಟ ೨೩೦ ೨೪೦

ನಡಿಯು ನಾರೀಕೇಳದೊಳ್ ನಜ್ಜುಗುಜ್ಜಾಗಿ ಜಜ್ಜರಿವೋದುವು
ರಥಂಗಳ್! ಕುರುಬಲಂ ವೈರಿಯತ್ತಣಿಂ ಇಂತುಂಬುಳಿಗೊಂಡುಂ
ಎರ್ದೆಯಳ್ಕಿ ಮನಮಳ್ಕಿ ಇನ್ನೆಮಗುಳಿಗಾಲವಿಲ್ಲೆಂದು ಮನ
ದೊಳ್ ಬಗೆದು ತಹತಹಿಸಿದೊಡಂ ಲಕ್ಷಣಂ ತನ್ನ ಪ್ರಾಣಸಖನಂ
ಕಳೆಕೊಂಡ ರೊಚ್ಚಿನಿಂ ಕಿಚ್ಚಿನಿಂ ಬಂಡೆಳ್ದು ಪ್ರಾಣಮಂ ಪಣವಿಟ್ಟು
ದಿಟ್ಟತನದಿಂ ಶರದಿನೇಸಾಡಿ ಸಾಸಂ ಮೋಸಂಮೆರಡರಿಂ ವೈವೆರ್ಚಿ
ಮನವೆರ್ಚಿ ಚಲದಿಂ ಬಲದಿಂ ಮುನ್ನುಗ್ಗಿ ಪೊಣರ್ದುಂ ಸಾವನಪ್ಪುವ
ಮುನ್ನಂ ಪಗೆಯುಂ ಗೆಲ್ವೆಂದು ಹಠದಿಂ ಕುಂದದ ಕೋಲ್ಗಳಿಸಿಪ್ಪ
ಕೈಚಳಕದಿಂ ಇದಿರ್ಚಿದಂ. ಈ ಮಾಳ್ಕೆಯಾನಾಜಿಯೊಳಿರಿತವಿಸುಗೆಯು
ಪೊಯ್ಮ ಬಡಿತದ ಕಡಿತದ ಹಣಾಹಣಿಯ ಜುದ್ದಂ ಕೆಯ್ಪು ಗೆಯ್ಪು ೨೫೦
ಸೋತು ಬಳಲ್ದು ಬೇಸತ್ತು ಕೊನೆಗಾವೀರ ಅಭಿಮನ್ಯುವಿನ
ಬಾಣಾಹತಿಗೆ ಮೈಗೊಟ್ಟು ಕಣ್ಣೆತ್ತರ್ ಕಾರ್ದು ಅಸುವಂ ತೆತ್ತಂ
ಲಕ್ಷಣಂ !

ಆಗಳೇನೆಂಬೆನೊ ಕೌರವ ಬಲಂ ಚೀತ್ಕರಿಸಿ ಹೂಂಕರಿಸಿ
ಮೊಂಕರಿಸಿ ಗಜಬಜಿಸಿದತ್ತು ರೋಸದಗ್ಗಿಯೊಳ್ ಬೆಂದು ಬೆಂ
ಡಾಗಿ! ಲಕ್ಷಣನನುಜರ್ ತೊಂಬತ್ತೊಂಬತ್ತು ಮಂದಿಯುಂ
ತಂಡತಂಡಂಗೊಂಡು ಪೌರುಷದಿಂ ಕಡುರೊಚ್ಚಿನಿಂ ಪಗೆಗೆಚ್ಚಿನಿಂ
ಮೊನೆಗಾರರ ಬೀರಸಿರಿಯಿಂ ವೈವೆರ್ಚಿ ಬಲ್ಸೊರೆಯಾಗೆ ಬಣ್ಣ
ವಣ್ಣದಿಂ ರಂಗುರಂಗಿನಿಂ ಕಳೆವೆರ್ಚೆ ಕೆರ್ಚುರ್ಂ ಕುದಿಕುದಿದು ರೋಸ
ದುಬ್ಬಟೆಯೊಳ್ ಮುನ್ನುಗ್ಗಿ ಕೂರಂಬುಗಳಂ ತೊಟ್ಟು ಬೆಂಬಲಿಗರ ೨೬೦
ಬೆಂಬಲದಿಂ ಪಗೆಯುಂ ಮಾರಾಂತು ಇದಿರ್ಚೆ ರೊಪ್ಪನೆ ಸಿಡಿಲೆರಗಿ
ದಂತೆ ಧಗಧಗಿಸಿದುದು ರಣಕೇಳಿ! ಅಭಿಮನ್ಯು ಮತ್ತಂ ಮತ್ತಂ
ಬಿಲ್ಲನಾರಿಯುಂ ಜೇವಡೆಸಿ ಸಿರಿಮುಗುಳಂಬರಿಸಿ–ಎಲೆ ಎಲೆ, ದುರು
ದುಂಬಿಗಳಿರಾ ! ಪೋ ಪೋಗಿರೆ, ರಣಕೇಳಿಯುಂ ಬಿಟ್ಟು ! ನಿಮ್ಮಾ
ಪಸುಳೆತನಕಂ ಬಡಿಗೋಲ್ಗಳ್ವೇಳ್ಕುಮೆ? ಬಾಳ್ವೊಡೆ ದೂರ
ಮಿರಿಂ ! ಇಂತೀ ದುರದುಂಬಿತನದೊಳ್ ಹರಣಂ ಜೋಕೆ ! ಅಲ್ಲ

ದೊಡೆ ಜವಪುರದ ಜಂಗುಳಿಯಾಗಲಕ್ಕುಂ! ಇಂತೇಂ ಸಲ್ಲದ ಚಲಂ? ಪೊಣರ್ಕೆಗಿಳಿದು ಶಾಕಿನಿಡಾಕಿನಿಯರ್ಗೆ ಬಿರ್ದಾಗುವ ಮುನ್ನಂ ಅಯ್ಯರ್ಕಳಂ ಬರಿಪುದೊಳ್ಳಿತು; ನೀಮಿದರೊಳ್ ಎಳಸುಗಳ್ ಗಡ! ೨೭೦

ಆ ಮಾತಿಂಗೆ ತರುವಲಿಗಳ್ ಕನಲ್ದು ಕಿಡಿಕಿಡಿಯಾಗಿ ಜಂಕಿಸಿ ಪಗೆಗಿಚ್ಚಿಂ ಉರಿದುರಿದುಂ ಕಿಡಿಗೆದರ್ವ ಪೊಂಗರಿಯ ನಿಡುಗೋಲ್ಗಳಂ ತೂರಿ ತೋಳ್ಚಪ್ಪರಿಸಿ ಅಟ್ಟಹಾಸಂಗೆಯ್ದರ್! ಆ ಬಳಿಕ್ಕಂ ಅಭಿಮನ್ಯು ಕಡೆಗಾಲದ ಮಿಳ್ತುವಿನೊಲ್ ಕೆಂಗಣ್ಣಿಂ ಉರಿಗಿಡಿಯುಂ ಕಾರ್ದು ದಿಟ್ಟತನದಿಂ ಬಲ್ಗೋಲ ಸೋನೆಯಂ ಕರೆದು ಅಂಕದ ಬಿಂಕದ ಕಟ್ಟಾಳದ ಕೂರಾಳ್ಗಳ ಕೊರಳಂ ತರಿದು ಕರುಳಂ ಬಗೆದು ಕೆನ್ನೀರ್ಗಡಲಂ ಪರಿಸಿ ರಣಕಣದೊಳಲೆವ ಮರುಳ ಬಳಗಮಂ ತಣಿಸಿ ಮಣಿಸಿದಂ! ದುರುಳ ದುರ್ಯೋಧನನ ಕುಮಾರಕರ್ ಸಾಲು ಸಾಲೆನೆ ಶಸ್ತ್ರಶಯ್ಯೆಯೊಳ್ ಕೆಡೆದು, ಪೊಳೆವ ಪದಕದಿಂ, ಬಿಟ್ಟಕಂಗಳ ನೆಟ್ಟ ನೋಟದಿಂ, ತಲೆಗಿಂಬುವೆತ್ತ ತೋಳ್ಗಳಿಂ ಕೆನ್ನೀರೋಕುಳಿಯಿಂ ತೊಯ್ದು ದಟ್ಟಿಯಿಂ, ಬಿಗಿದ ಪುರ್ಬಿನಿಂ, ನಿಡುಗಚ್ಚಿದ ಪಲ್ಗಳಿಂ ಕೆಮ್ಮನೆ ಪವಡಿಸಿದರ್ ಕಾಪುರುಷರ್ ಗೋಣ್ಮುರಿದು ನಲಿವಂತು! ಭೂತಪ್ರೇತಗಣಂ ಬಾಯ್ಬಿಡುವಂತು! ೨೫೦

ಕುರುರಾಯಂ ಶತಕುಮಾರರ ಮರಣಶಾಸನಮಂ ಒಟ್ಟಿಗೆ ಬರೆದಿಕ್ಕಿದ ದುರ್ವಿಧಿಯಂ ಪಳಿದುಂ ಅಳ್ತಳ್ತು ಗೋಳಾಡಿ ಮನನೊಂದು ಒಡಲ್‌ಕರಂಗಿ ಕಡುದುಕ್ಕದಿಂ ಇಂತೆಂಗುಂ–ಹಾ, ಕುಮಾರಕರ್ ಎನ್ನಂ ಕೈವಿಟ್ಟರೇಂ? ಇನ್ನೆಂತಾಂ ಬಾಳ್ವೆಂ? ಇಂದಿನೀ ಗತಿಮತಿಯೊಳ್ ರಣಮುಂ ಕೆಯ್ದುಗೆಯ್ದಲ್ಲದೆ ಬೇರೆ ಗತಿಯುಂಟೆ? ಏಂ ಗೆಯ್ಯಲಿ? ಎಂತು ಪೊಣರ್ವೆಂ? ಎಂತಿದರ ಪರಿಹಾರಂ? ದುರುಳಂ ಬಲವಂದು ಕೊಡಲಿಯನಿಕ್ಕಿದನೆ, ಅಗ್ನಿಯಂ ಪೂವೆಂದು

ಮುಟ್ಟಿದ ಕುಮಾರರ್ಗೆ? ಹಾ, ಚಲದೊಳ್ ಕರ್ಣಾದ್ಯರಂ ಹುಲು
ಕಡ್ಡಿಗೆ ಬಗೆಯದ ಧೂರ್ತಂ ಹೂಹೆಗಳಂ ಗಣಿಪುದುಂಟೇ? ಉರ
ಗಕ್ಕಂಜದಂ ಬಳ್ಳಿಗಂಜುವನೇ? ಇಂತಿದಂ ಅರಿಯದೆ ಕೆಟ್ಟರೆ ಎನ್ನ
ಕುಮಾರರ್? ಹಾ, ಹಾ! ಕೆಟ್ಟೆಂ, ಕೆಟ್ಟೆಂ! ದ್ರೋಣಾದಿ
ಆಢ್ಯರಂ ನಂಬಿದಾಂ ಕೆಟ್ಟೆನಕಟಕಟಾ! ಇಕ್ಕಿದರೆ ಪದ್ಮವ್ಯೂಹ
ದಗ್ಗಿಗೆ ಎನ್ನ ಕುಮಾರರಂ ಮೊದಲ ಬಲಿಯಂ? ಸ್ವಾಮಿದ್ರೋಹಿ
ಗಳ್ ಪೊಕ್ಕಾರಮನೆಯೆಂತುಳಿವುದು? ಈವೊಂದು ಭಂಡಬಾಳ್ಮೆ
ಇರ್ದೊಡೇಂ? ಇಲ್ಲದೊಡೇಂ? ನಲ್ಬಾಳ್ ಬಱಡಾಯ್ತು? ಎಂತು
ತಾಳ್ವೆಂ? ಇನ್ನೆಂತು ಬಾಳ್ವೆಂ? ರಣರಂಗದ ಬವರದೊಳ್ ಎನ್ನ
ಕುಮಾರಕರ್ ಅಸುವಂ ತೆತ್ತು ರಣರಂಗದ ಸಿಡುಹಾಸಿನಲಿ ಕೆಡೆ ೩೦೦
ದೊಡಂ ವೈರಿಯನ್ನೊಬರಂ ದಕ್ಕದೆ ಸಿಕ್ಕದೆ ಪೋದನೆ? ಎನ್ನೀ
ದುಕ್ಕಕೆಣೆಯಿಲ್ಲಂ, ಪಾಂಡವರ ಪುಣ್ಯಕ್ಕೆ ಮಿತಿಯಿಲ್ಲಂ, ಹಾ,
ಇಂತು ಕೋಳುವೋಯ್ತೆ ಸಜ್ಜನ ಬಾಳ್ತೆ??

ಕುರುರಾಯಂ ಇಂತಳ್ತು ಪಳಯಿಸುತಿರೆ ಪೇಳಲೇನಾ ಕುರು
ಕುಲದ ಗಡಿಬಿಡಿಯಂ? ಕಟು ಸೊಗಡಗುವ ರಣಕಣದೊಳ್
ಅಳಲ್ದು ಕನಲ್ದು ಗರ್ಜಿಸಿ ಸಿಡಿವ ಸಿಡಿಲಂತೆ, ಮರುಳ ಮಾರಿ
ಯಂತೆ, ಜವನಾಳ್ಗಳ ಜಂಗುಳಿಯಂತೆ, ಸಿದ್ಧರಂತೆ, ಪ್ರಬುದ್ಧರಂತೆ
ಸಂದಣಿಸಿ ಉರಿವ ಉರಿಮೊಗದಿಂ ಕರ್ಣ ಶಲ್ಯ ಅಶ್ವತ್ಥಾಮ ಕೃಪ
ರಾಧೇಯ ಶಕುನಿ ದುಶ್ಶಾಸನ ಮುಂತಪ್ಪರೊಗ್ಗಿಸಿಂ ಮುಂಬಟ್ಟೆ
ಯಂ ಪಿಡಿದುದು ಕೌರವಬಲಂ. ತರತರದ ಅಸ್ತ್ರಶಸ್ತ್ರಂಗಳುಂ ೩೧೦
ಕೂರ್ಗೋಲ್ಗಳುಂ ಕೂರ್ವಾಳ್ಗಳುಂ ಠೇಂಕರಿಸಿ ಜೇವಡೆಯೆ
ಕಕ್ಕಸದಸಿಯುಬ್ಬರಂ ಕಿವಿಯಂ ಮುಟ್ಟೆ ಪೆಂರ್ಪ್ಯಂ ನಡುಗಿಸಿ ರಣ
ರಣಿಸಿದುದು ರಣಚಣಂ! ಇಂತಪ್ಪುದುಮಾಗಳ್ ಬೀರಸಿರಿಯಿಂ
ಗಡಣಿಸಿ ಮತ್ತಂ ಅಳವಿಗೆಡೆಗೊಟ್ಟುದು ಬದ್ಧಕಂಕಣದಿಂ.

ಏಂ ಪುರುಡು? ಏಂ ಕಾಯ್ಪು? ಏಂ ರೊಚ್ಚು? ಏಂ ಕೆಚ್ಚು?

ಹಾ, ಏನಪ್ಪುದೊ ? ಮುಂತೇಂ ಬಟ್ಟೆಯೊ ? ಎಂದು ನಿಡು
ಸುಯ್ದರ್ ದಸದೆಸೆಗೊಡೆಯರ್.

ಅಕಟಕ್ಕಟಾ! ನಾಯಂ ನಾಯ ಕೇಳ್ದು ದೊಂದಪದೆಸೆಯೊಳ್
ನಾಡ ಮನ್ನೆಯರ ಪ್ರಾಣ ಪಣವಾಯ್ತು ರಣರಂಗದೊಳ್. ಸೋ
ದರರೊಳ್ ದಾಯಾದಿ ಮಚ್ಚರಮಿರ್ಕುಮೆಂದರಿತುಂ ಕಡು ಕೆಯ್ದೊಡೆ ೩೨೦
ಸಾವ ಬೆಸನವಲ್ಲದಿನ್ನೇಂ ಬಟ್ಟೆಯೊ? ರೊಚ್ಚುಂ ಕೆಚ್ಚುಂ ಪಿಂಡ
ಮರ್ದನ ಗೆಯ್ಯುದುಳಿವುದೆ? ಎಂದು ನಿಡುಸುಯ್ದು ದಮರಗಣಂ!

ರಣರಂಗದೊಳ್ ರಣಮಾರಿಗಳ್ ಬಾಯಂ ಚಪ್ಪರಿಸುತುಂ
ಅಂಡಲೆಯುತಿರ್ದುವು ಸುತ್ತಮುತ್ತಲುಂ ಬಿೞ್ದ ಕಡಿಕಂಡದ ತುಂಡು
ಗಡಿದ ಕೈಕಾಲ್ಗಳ ರುಂಡಮುಂಡದ ತಂಡಂ ನೆತ್ತರ್ ಕೋಡಿಯಿಂ
ತೊಯ್ದು ಪೊಣರ್ಕೆಯ ಗತಿಯುಂ ಮೇಣಾಕೆವಾಳರ ಬೀರತನಮುಂ
ಸಾರ್ದು ಸೋರ್ದು ಕಣ್ಗೆ ಭೀಕರಮಾಗಿ ಕಡೆಗಾಲದ ಸಾಕ್ಷಿಯಾದು
ದಂ ಕಣ್ತುಂಬ ಕಾಣುತುಂ! ಇಬ್ಬಣದ ಕೆಚ್ಚಿನ ಪುರ್ಚಿನೊಳ್
ಪೊಣರ್ಕೆಯುಂ ವೀರಾವೇಶದಿಂ ನಡೆದಿರೆ ಕಟ್ಟಂಕದ ಕೈದುಕಾರರ್
ಬಿಲ್ಲನಾರಿಯಂ ಜೇವಡೆಸಿ ವಿಶಿಖದಿಂ ಸೂಳ್ಸರಿಯಂ ಕರೆದರ್ ರಣ ೩೩೦
ರಂಗಮಂ ಮುಸುಂಕಿ ಕೞ್ತಲೆಗವಿವವೊಲ್! ಆಗಳಾ ಅರ್ಜುನ
ಸೂನು ಚೆಚ್ಚರದಿಂ ಮಾರಕಾಸ್ತ್ರಮುಂ ಪೂಡಿ ಕಿವಿಮುಟ್ಟೆ ಸೆಳೆದು
ವಿಡೆ ಪೇಳ್ವುದೇನದಂ ? ವಿಶಿಖಾವಲಿಯ ನಿಡುದೆರೆಯುಂ ಪವ್ವನೆ
ಸೀಳ್ದು ಸುಷ್ಕ ಪತ್ರದವೊಲ್ ದೆಸೆದೆಸೆಗೆ ತೂರ್ದು ಕೈದುಗಾರರ
ಶಿರಮಂ ತರಿದು ಆನೆಗಳಂ ಬೀಳಬಡಿದು, ರಥತುರಗಂಗಳಂ ಪೊಯ್ದು
ಬಡಿದು ಸೆಳೆಮಿಂಚಿನವೊಲ್ ಸೇರಿದುದು ಮತ್ತೆ ಮೂಡಿಗೆಯಂ.
ಜವನ ಜಂಗುಳಿಯುಂ ಮುಂಬರಿದು ಬಾಯ್ದೆರೆದು ಕೈನೀಡಿ ಬಾ
ಬಾರೆಂದು ಮಡಿದರಂ ಜವಪುರಕೆ ಮುಟ್ಟಯಿಸುತಿರೆ, ಗಾರು
ಗೆಟ್ಟು, ಮುಂಗೆಟ್ಟು, ತಹತಹಿಸುತಿರ್ದುದು ಕಳೆದುಳಿದ ಕೌರವ
ವಲಂ. ಅಲ್ಲಲ್ಲಿ ಚಪರಿ ಬಿೞ್ದ ಜೀವನ್ಮೃತರುಂ ಮತ್ತಂ ಆನೆ ೩೪೦

ರಥ ತುರಗಗಳೊಟ್ಟಯಿಸಿದೊಡೆ ಕಾಂಚನಾದ್ರಿಯಂ ಪೋಲ್ವಂತಿರ್ದುದು ನೋಡಾ!

ಕರ್ಣಂ ತನ್ನಂ ಪಡೆಯುಂ ತನ್ನೊಂದು ಪನ್ನತಿಕೆಯ ಮುಂತೆಯೆ ಜರ್ಜರಿವೋದ ಕಡು ಬೆಸನದಿಂ, ಬಲ್ಪಿರ್ದು ಮತಿಗೆಟ್ಟ ಕಿಚ್ಚಿನಿಂ, ವೈರಿ ಶಿಶುವಿರ್ದು ಇಂತೋರಗೆಯಿಂ ಹೊಯ್ಕೆಯ್ಯಾಗಿ ಇದಿರ್ಚೆ ಮೇಲ್ಗೈಯಾದ ರೋಷದಿಂ ಕಟಕಟನೆ ಪಲ್ಕಡಿದು ಕುಡಿಮೀಸೆಯಂ ಹುರಿಗೆಯ್ದು ಕಣ್ಣೊಳ್ ಕಿಡಿಗಳಂ ಕಾರಿ ಸಿಟ್ಟನಗ್ಗಿಯಂ ಉಗುಳಿ–ಎಲೆ, ಎಲವೊ! ಗಬ್ಬದುಬ್ಬರದ ಬೀರ! ಕೆಮ್ಮನೆ ಅಂತಃಪುರದೊಳ್ ಇರದೆ ಇಂತೇಂ ರಣದಗ್ಗಿಯಂ ಪೊಕ್ಕು ಜವ ಹುರವುಂ ಚಲದಿಂ ಮುಟ್ಟುವ ಕಜ್ಜಮುಂ ಕೈಗೊಂಡೆಯ್ಯ? ಬಲ್ಪಿನ ಬಿಲ್ಲಾಳ್ತನದೊಳ್ ನಿನ್ನವರ್ಗೆ ನೀನೆ ಗಂಡನೆನೆ ಎಲ್ಲರಂ ಪಿಂತಿಕ್ಕಿ ಮುನ್ನುಗ್ಗಲೇಂ ಕತಂ? ಸಿನ್ನ ಪೆಂಬೇಡಿ ಪಿರಿಯರ್ ಬೀಡೊಳಿರ್ದು ಕೂಳುಂಬುವರೇಂ ಡೊಳ್ಳು ಬಿರಿಯೆ? ೩೫೦

ಅಭಿಮನ್ಯು ರೋಷದಿಂ ಕೆರಳ್ದು ಬೈಗಿನ ಪೊನ್ನೇಸರಂ ಪೋಲ್ದು ಕೆಂಗಲಿಸಿ ವೈರಿಯ ಸೊಲ್ಲಂ ಪುಲ್ಲಿಂಕಡೆಗಣ್ಚಿ ಪಲ್ಲಮುರಿಯೊಂದಾಯತಿಯಿಂ ನೆಟ್ಟ ನಿಟ್ಟೋಟದಿಂ ನಿಟ್ಟಿಸಿ ಧೈರ್ಯ ಸ್ಥೈರ್ಯದಿಂ ಮೂಡಿಗೆಯಿಂ ಕಣೆಯನೆತ್ತಿಕೊಳೆ ಕರ್ಣಂ ಮುಳಿದು ಕೈಯ ಬಿಲ್ಲಂ ಜೇವಡೆಸಿ ಮತ್ತಂ ಹೀಯಾಳಿಸಿದಂ–ಓ! ಓ! ಬಲ್ಪಿನ ಬಿಲ್ಲೋಜೆಯ ಬಲ್ಗಡಸುಗಾರ! ನುಡಿದಂತೆ ಪಡಿನುಡಿಯದುಸಿಕನೆ! ಈವೊಂದು ಪೆರ್ಮೆಯ ಪಾಳ್ಕೆಯಿಂ ಜುದ್ದಮುಂ ನಡೆಸಿದೊಡಂ ನುಡಿದರ್ಗೆ ಪಡಿನುಡಿಗುಡವೇಡಾ? ಎಲೆ ದಕ್ಕಡಿಗ! ತೋಳ್ಬಲ ಮುಳ್ಳೊಡೆ ಬಲ್ಪುಳ್ಳೊಡೆನ್ನವರೊಳ್ ತೋರ್ಪುದಲ್ಲದೆ ಸಲ್ಲದ ಪೊಲ್ಲದ ಅರದ ಬಾರದ ಒಣವು ಬಡಗುಗಳ ಕೊಂದೆನೆಂದೊಡೊಂದು ಬೀರತನಮೇ ರಣಕ್ಕೆ ಎರ್ದೆಯಾಂತು ನಿಂದೆನ್ನಂ ನೋಡು! ಎನ್ನ ಬಲ್ಪೇಂ? ಗಂಡುತನಮೇಂ? ಬಿಜ್ಜೆಯ ಪುರುಡೇಂ? ಇಂತಿದಂ ಕಂ ೩೬೦

ಡೊಡಂ ಕಾಣದಂತಿರ್ಪ ಬಡಿವಾರಕ್ಕೇನೆನಲಕ್ಕು? ನಿನ್ನ ಗರುವಿಕೆಗೆ ನಾಡೇವುದು? ತೋಡೇವುದು? ಎಲಿಲೆ ಬಣಗುಗಾರ! ಘೋರ ಬವರದೊಳ್ ಎರ್ದೆಯೊಡ್ಡಿ ಗಂಡುಗಲಿಗಳ್ಗೆ ಸೊಲ್ಲಂ ಬಿಲ್ಲಪ್ಪಿನ ನಿನ್ನನೀಗಳ್ ತಾಗಿ ಬೀಗಿ ನುಡಿವೊಡೆಂದೆ ಎದುರ್ಗೆಯ್ದಿದೆಂ!

ಅಭಿಮನ್ಯು ಕಟ್ಟೆಚ್ಚರಿಯಿಂ ಬೆರಗುವಟ್ಟಂತೆ ಬಿರುನುಡಿಯಂ ಕೇಳ್ದು ಇಂತೆಂಗುಂ—ಅಹ, ಇಂತೀ ಚೋದ್ಯಮಂ ನಿನ್ನೊಳಲ್ಲದೇ ಬೇರೆಲ್ಲಿ ಕಾಣಲಕ್ಕುಂ? ನುಡಿಯು ಗೊಂದಣದಿಂ ಪೊಣರ್ಕೆಯಂ ಪಿಂತಿಕ್ಕುವ ಸಂಚಿದಲ್ತೆ? ತೆಗೆ, ತೆಗೆ! ಆನೆಂದುಂ ಮಣಿಯೆ ಸಂಚಿನ ಹೊಂಚಿನ ಕೀಳ್ಕಜ್ಜಕೆ! ನೀಂ ತಿಳಿದಿರ್!! ೩೭೦

ಎನುವನಿತರೊಳ್ ಅಭಿಮನ್ಯು ಕೈಯಂಬಿಸ ಕೂರ್ಬಾಣಮಂ ಸೆಳೆದುವಿಟ್ಟಂ! ಬೀರದ ಬಿಜ್ಜೆಯ ಕಜ್ಜದುಜ್ಜುಗಮಂ ತಳ್ವದೆ ತರಿದುದು ಕರ್ಣನ ಕಿರೀಟಮಂ! ಕರ್ಣ ಹಾ ಎನುತುಂ ಕೆಚ್ಚಿನಿಂ ಪುರ್ಚಿನಿಂ ಬಲದಿಂ ಚಲದಿಂ ಪಡಿಸರಳಂ ತೊಟ್ಟು ಸೆಳೆದು ವಿಟ್ಟಂ ಕನಲ್ದು ಕಿಡಿಕಿಡಿಯಾಗಿ! ರಣದಗ್ಗಿಯುಂ ಮತ್ತಂ ಧಗ ಧಗಿಸಿದುದು ಇಬ್ಬಣದೊಳ್. ಬಲವಂದು ಕಟ್ಟುರದ ಮುಳ್ಳುಂ ಗೊಳ್ಕೆಯಿಂದೆಳೆದೆಸೆದವೊಲ್ ಕುಡಿಗಳಚಿ ಬಿಳ್ದ ಕುರುಕುಲದ ಬಿಂಕದ ಕೊಂಕುಂ ಮಣ್ಣುವುಡಿಯೊಳ್ ಪೊರಳ್ದುದು ಪುಡಿಪುಡಿ ಯೆಯ್ದಿ! ಕುಳಿಗಾಳಿಯೊಳ್ ಗಗನಮನಡರ್ದ ಧೂಳುಂ ಮತ್ತಂ ಕೆಳಬಿಳ್ದು ನೆಲಂಗಚ್ಚಿ ಧೂಳೊಳ್ ಧೂಳಾಗಿ ಬೆರೆತು ಹೋಹಂತೆ! ಇಂತಪ್ಪುದುಮಾಗಳುರ್ಕಿದ ವೀರಾಳ್ತನದ ತರುವಲಿಯಿಂ ಕರ್ಣಂ ಕೈಸೋತು ಬಾಯ್ಸೋತು ಎರ್ದೆಯಳ್ಕಿ ಮನಮಳ್ಕಿ ಮೈಘಾಸಿ ವಟ್ಟು ರಥದೊಳ್ ಕುಸಿದು ಬಿಳ್ದು ಮುಚ್ಚೆವೋಗಲ್ ಸಾರಥಿ ರಥಮಂ ತಿರುಪಿದಂ ಆಗಳ್ ದುರ್ಯೋಧನಂ ಎದುರ್ಗೆಯ್ದು ಕಕ್ಕಸ ನುಡಿಯಿಂ ಜರ್ವಿದಂ—ಎಲಿಲೆ, ಮಾಯದ ಮಾಟಗಾರ! ಇನ್ನೆಬರಂ ಇದಿರ್ಚಿದೊಂದು ಗಂಡಸುತನಮಲ್ತು, ಇದೆಗೊ, ಎನ್ನ ಬಲ್ಲಾಳಿಲಂ ಎದಿರ್ಚಿ ಬರ್ದುಂಕೆಲೈ! ೩೮೦ ೩೯೦

ಒಡನೊಡನೆ ಬಡಿಗೋಲೆಂಟಂ ಒಟ್ಟೊಟ್ಟಿಗೆ ಸೆಳೆದುವಿಟ್ಟಂ ಕುರುರಾಯಂ ! ಆಗಳಭಿಮನ್ಯು ದಿಟ್ಟತನದಿಂ ವಿಶಿಖಂಗಳಂ ಪೂಡಿ ಮಂತ್ರದಿಂ ತಂತ್ರದಿಂ ಬಿಗಿಸೆಳೆದುವಿಟ್ಟು ತರಿದು ಜಡಿಕುಟ್ಟಿ ಕಡಿ ಕಂಡಮಪ್ಪಂತು ಪೊಯ್ದುಂ ತೆಕ್ಕನೆ ಬಿಲ್ಲನಾರಿಯಂ ಕತ್ತರಿಸಿ ನಿರಾಯುಧನಂಗೆಯ್ದು ಕೇಳಿಸಿದನಿಂತು–ಕೇಳ್ಳೈ ಕುರುವೀರ! ನಿರಾಯುಧನಂ ಪೊಯ್ದು ಕೊಲ್ವಕೂಳನ ಮತಿಗತಿಯೆನಗಿಲ್ಲಂ. ಬೇರೆ ಬಿಲ್ಲಂ ಕೈಕೊಳ್ವನಕಂ ಆಂ ಬಾಣಮಂ ತೊಡೆಸೆಂದು ಪೂಣ್ದು ಪೇಳ್ವೆಂ. ಮನಂಗೆಡದೆ ಪೊಸಬಿಲ್ಲಂ ಕೈಕೊಳ್ಳೈ.

ದುರ್ಯೋಧನಂ–ಅಂತಿಪ್ಪೊಡೆ ಗಳಿಗೆಯೊಂದು ತಾಳ್ವುದೈ. ೪೦೦

ಆಯೊಂದು ಗಳಿಗೆಯೊಳ್ ಬೇರೊಂದು ಬಿಲ್ಲಂ ಕೈಕೊಂಡು ಕೋಯಂಡಮೆನೆ ಬಿಗಿವಿಡಿದು ಬಾಣಮಂ ಪೂಡಿ ಇಂತೆಂದಂ–ಕ್ಷಾತ್ರಧರ್ಮಮನರಿತು ಪನ್ನತಿಕೆಯಂ ತೋರ್ವುದೊಂದು ಪೆರ್ಮೆಯೆಂಬೆಂ. ಇದೆಕೊ, ಈಗಳಾಂ ಅಣಿಗೊಂಡಿರ್ಪೆಂ, ತಳ್ವದೆ ನೀಂ ಪುರುಡಂ ತೋರ್ದು ಪೊಯ್ದು ಜಡಿದಾರ್ದೆನ್ನಂ ಗೆಲ್ಲಲಕ್ಕುಂ!

ಅಭಿಮನ್ಯು ನಗುತುಂ–ಅಯ್ಯಾ, ಎದುರ್ವೆತ್ತೆನ್ನಂ ಬಡಿವಾರದಿಂ ಲೆಕ್ಕಿಸದಿರ್ದೊಡೆ ನೀಂ ಜವನರಮನೆಯ ಜಂಗುಳಿಯಾಗಿ ರಣರಂಗದಗಲಂ ಮರುಳ್ಪಡೆಯೊಲ್ ಅಲೆಯಲಕ್ಕುಂ ಜೋಕೆ !

ದುರ್ಯೋಧನಂ–ಅಹಹ, ನೋಯದೆ ಸಾಯದೆ ಮರುಳ್ಪಡೆಯ ಗೊತ್ತುಗುರಿಯನರಿಯದೆ ಬರಿದೆ ಬೆಸಗೊಳ್ವ ಬೆಸಗಾರ! ಈಗಳ್ ಎರ್ದೆಗೊಟ್ಟು ನಿಲ್ಲೈ ! ಎನ್ನೀ ಮೊದಲ ಬಾಣದೊಳ್ ನಿನ್ನ ಶಿರಮಂ ಕಡಿ ಖಂಡಿಸಿ ಸುಂಟಗೆ ಪಂಟಗೆಯೆನೆ ಗಮ್ಮನೆ ಬಾಣಸುಗೆಯ್ವೆಂ ! ೪೧೦

ಅಭಿಮನ್ಯು ಮೂಂಕರಿಸುತುಂ- ಬವರಿಗರೊಳ್ ಬಲ್ಪುಳ್ಳರ್ ಪೆಂಬೇಡಿಯೆಂತಂತು ಖೋಡಿಯೆಂತಂತು ಜರ್ವಿ ಕೊರ್ವಿ ತರುವ

ಲಿಯಂ ತರುಂಬಿದೊಡೊಂದು ಪೊಲ್ಲಮೆಯಲ್ಲದೆ ಗೆಲ್ಲಮೆಯಲ್ತು. ನಿಜಮಪ್ಪ ಗೆಲ್ಮೆ ಸರಿಸಮಾನಸ್ಕಂದರೊಡನಲ್ತೆ ? ಮತ್ತೇಂ ಇವರೊಳ್ ಪೆರ್ಚು ? ನಂನಮ್ಮ ಸ್ಥಿತ್ಯಂತರಮಂ ಇನ್ನೇನೀಗಳ್ ತಿಳಿಯಲಕ್ಕುಂ. ಆಂ ಎಳಯಂ. ನೀಂ ತೋಳ್ವಲಮುಳ್ಳ ಪಿರಿಯಂ ! ಇಂತಿದಂ ಮನದೊಳಿಟ್ಟಿನ್ನ ಸಜ್ಜನೆರೆಗೋಲ ಸವಿಯೂಟಮಂ ಇನಿಸಿನಿಸು ಕಂಡುಂಡು ಪೇಳ್ಳೈ ! ೪೨೦

ಅಭಿಮನ್ಯು ಬಿಲ್ಲ ಕಿರುವಾಯ್ಗೆ ಬಲ್ಗೋಲಂ ಚಣದೊಳ್ ಸಂದಿಸುತೆಚ್ಚಂ. ಆಗಳ್ ದುರ್ಯೋಧನಂ ಬೆರ್ಚಿದೊಡಂ ಚಣದೊಳ್ ಪುರುಡುಗೊಂಡು ಉರಿಗಿಡಿಯುಗುಳುತೆ ಪುಂಖಾನುಪುಂಖದಿಂ ನುಗ್ಗಿ ಬರ್ಪ ಶರಗತಿಯಂ ಪಡಿಯಂಬಿನಿಂ ಮುರಿದೊಟ್ಟೆ, ಪೂಣಾಂಬುವಂ ಪೂಡಿ ಸೆಳೆದಾರ್ದೆಸಾಡಿದಂ. ಅಭಿಮನ್ಯು ತನ್ನೆಡೆಗೆ ಅಂತೆಸಾಡಿ ಮಾರಾಂತು ಬರ್ಪ ಪೂಣಂಬುಗಳಂ ಮಾರ್ಕಣೆಯಿಂ ನಡುವಟ್ಟೆಯೊಳ್ ಕೊಚ್ಚಿ ಕಂಡರಿಸಿ ಮುಕ್ಕಡಿಗೆಯ್ದು ಬೊಬ್ಬಿರಿದು ಪೊಸಮಸೆಯ ವಿಶಿಖಂಗಳಿಂ ತೇರ ಕೀಲಂ ತುಂಡಿಸಿ ವಾರುವದ ಕಾಲ್ಗಳಂ ಮುರಿದಿಕ್ಕಿದಂ. ೪೩೦

ದುರ್ಯೋಧನಂ–ಕೂಳ ! ವಾರುವದ ಕಾಲ್ಗಳಂ ಮುರಿದೊಡೇಂ ? ತೇರಕೀಲಂ ತುಂಡರಿಸಿ ಕೆಡಗಿದರೇಂ ? ಪೊಂದೇರುರುಳಿ ಬೀಳ್ದೊಡೇಂ ? ಪಳತು ಅಳಿದೊಡೆ ಪೊಸತು ಕೈಗೂಡಿ ಬರ್ಪುದು ಕಾಣ್ !

ಅಭಿಮನ್ಯು–ಅಯ್ತು, ಪೊಸತೇರಂ ಪಡೆವನ್ನೆಗಂ ತಾಳ್ವುದೆನ್ನ ಕ್ಷಾತ್ರಧರ್ಮಂ. ಚೆಚ್ಚರದಿಂ ಪಡೆಕೊಳ್ಳೈ !

ದುರ್ಯೋಧನಂ–ಓ, ಸಾಲ್ಗುಮೀ ಉದಾತ್ತತೆಯ ಪರಿವೇಷಂ !

ಒಡನೆ ಬೇರೊಂದು ಬಿನ್ನಣದ ತೇರನಡರ್ದು ಬಾಣಮಂ

ತೊಟ್ಟು ಅಣಿಯಾಗುತಿಂತೆಂಗುಂ—ಎಲೆ ಅಭಿಮನ್ಯು, ಇನ್ನುಮಿನ್ನು ೪೪೦
ತಡೆಬಡೆಯೇನಿಲ್ಲಂ. ತೋರ್ಗೆ ನಿನ್ನ ಬಲ್ಪಿನ ಬೀರದ ಬಿನ್ನಣದ
ಉರುಟಣೆಯಂ.

ಆಗಲ್ ಪೊಣ್ಮಿದ ಪೊಯ್ಕುಯ್ ಕಾಳೆಗಮಂ ಏನೆಂಬೆನೊ!
ಬರಸಿಡಿಲ್ ಎರಗಿದಂತೆರಂಗುವ ವಿಶಿಖಾವಲಿಯ ಸಬುದಂ ದೆಸೆ
ಮೂಲೆಗಳ್ ಮಾರ್ದನಿಗೊಡುವಂತು, ಮುಗಿಲ್ವೆಟ್ಟುಗಳ್ ಕಳಚಿ
ಬೀಳ್ವಂತು, ಕಾಡುಮೇಡುಗಳ್ ಮರುದನಿಗುಡುವಂತು ಮೊಳಗಿ
ಅಳ್ಳಿರ್ದೆಯಂ ಅಳ್ಕಿಸಿ ದಳ್ಳಿಸಿ ಗಾರುಗೆಡಿಸಿದುದು ಗಳಿಗೆಯೊಳ್.
ಇಂತೆಣೆಯಿಲ್ಲದೊಲ್ ಜುದ್ದಮಡಸಿದೊಡಂ ಅಭಿಮನ್ಯು ಸೋಲದೆ
ನೋಯದೆ ಬೇಯದೆ ಜತ್ತದೆ ಬಾಡದೆ ದಂಡಂ ಕಂಡಿಸುವಂತು
ಬಾಣಂಗಳಂ ಕಡಿಖಂಡಂಗೆಯ್ಯುತುಂ ವೈರಿಯ ಚಾಪಮಂ ೪೫೦
ಮುರಿದು ಕಿರೀಟಮಂ ಗಾಳಿವಟ್ಟೆಯೊಳ್ ತೂರಿದಂ.

ದುರ್ಯೋಧನಂ ನೊಂದು ಬೆಂದು ಪಲ್ಮಸೆಯುತುಂ—ತರಳ!
ಎನ್ನ ಚಾಪಮಂ ಮುರಿದೊಡೇನಕ್ಕುಂ? ಕಡಿಖಂಡ ಚಾಪಮೆ
ಸಾಲ್ಗುಂ; ನಿನ್ನಂ ಪೊಯ್ದು ಜವಹುರಮಂ ಮುಟ್ಟಿಸಲ್!

ಅಭಿಮನ್ಯು ಆಯ್ತಾಯ್ತೆನುತುಂ ಸಾರಥಿಯಂ ಸದೆದು
ಮೋಣೆರಡಂಬಿನಿಂ ಮುಂಬಿಗನಂ ಪೊಯ್ದು ಗೆಯ್ದು ನಿಶ್ಚೇಷ್ಟಿತನ
ಪ್ಪಂತು ಬಾರಿಸಿ ನೋಯಿಸಿ ಸೋಲಿಸಿ ರಥದೊಳ್ ಕೆಡವಿದಂ
ಕುರುರಾಯನಂ!

# ತ್ರಯೋದಶಾಶ್ವಾಸಂ

ಕಾಲಾನುಕಾಲದಿಂ ಭೂರಮೆಯ ಒಡ್ಯಾಣವೆಂಬಿನಂ ನಿಚ್ಚಂ
ತಳತ್ತಳಿಸಿ ಪೊನಲ್ವರಿವ ಯಮುನೆಯ ಕೂಲದೊಳೆಂದುಂ ಮುನಿರಿಸಿ
ಗಳ್ ಅಗ್ಗಿವೊಗರ್ಗೆಂದು ಗಮ್ಮನೆ ನೆಯ್ವೆರಸಿ ನಲ್ ಬಾಣಸವೀಯೆ
ನಿಚ್ಚಮುಯ್ವ ಜನ್ನದುರಿಯುಂ, ಮುಗಿಲ್ಮುಟ್ಟುವಂತೇರ್ದ ಜನ್ನ
ಗೊಂಡದ ಕರ್ವೊಗೆಯಿಂ ಮತ್ತಂ ಜನ್ನಗೊಂಡದೊಳ್ ನಿಚ್ಚಂ
ಪೊತ್ತುರಿವ ನೆಯ್ಯನರುಗಂಪಿನ ನೆಲ್ಲರಳ ಬಲಿಗೂಳ, ಸಿರಿಕಂಡ
ಸೆಕ್ಕೆಯ, ಸವಿತ್ತಿನ ಕೌಷೇಯ ವಸ್ತ್ರದ ಕಮುರಿಂ ನಲ್ವೊರೆದೆಲ್ಲೆಡೆ
ಯೊಳೆತ್ತಂ ಮನಮಂ ಮುಟ್ಟುವ ಪಳಂಚಲೆವೆಲರಿಂ; ತೋರದೋರ
ಮರಂಗಳ ಪಾರುಗೊಂಬೆಗಳನೇರಿ ರಮ್ಯವಾಗಿ ತರತರ ದನಿಯುಂ
ಮೊಳಗಿ ಕುಕಿಲ್ದು ಹಾಡಿ ಪಾಡಿ ಸಂತಸದಿಂ ಅತ್ತಮಿತ್ತಂ ಪಾರುವ    ೧೦
ಬಾಸೆವಕ್ಕಿಗಳಿಂ; ನಿರ್ವೈರದಿಂ ಬಾಳ್ವ ಮೃಗಪಕ್ಷಿಗಳ ಗಜಬಜದಿಂ;
ವನವನಾಂತರದೊಳ್ ಸ್ವೇಚ್ಛೆಯಿಂದಂಡಲೆದು ಪಸುರುಂಡು ಕಾಲಿಂ
ದಿಯ ಕೂಲದೊಳ್ ನೀರ್ಕುಡಿದು ಮುನಿರಿಸಿಗಳ್ಗೆ ನೊರೆವಾಲನಿತ್ತು
ಸಗ್ಗಸೊಗಮಂ ಇಳೆಗುಯ್ದ ಗೋವಳಿಗಳಿಂ ಬಾಳು ಬರ್ದುಂಕು
ಹಸನಾಗಿ ಸುಖಶಾಂತಿಯಿಂದಿರ್ದ ಭಾರತವರ್ಷಂ ದಾಯಾದಿ ಮಚ್ಚರ
ದಗ್ಗಿಯಿಂದುರಿದುರಿದು ನಾಡಿನೇಳ್ಗೆಯ ಕಾಲ್ಕುಸಿದು ಕುರುಕ್ಷೇತ್ರ
ದೊಳ್ ತಾಗಿ ಕಾದಿ ಮೋದಿ ಕೆನ್ನೆತ್ತರಂ ಬಸಿದು ಚೆಲ್ಲಿ ಸೂಸಾಡಿ
ಜವಹುರವಂ ಮುಟ್ಟಿಸೆ, ಎಣೆಯಿಲ್ಲದ ಕಾಯ್ಪು ಗಳಿಗೆಗಳಿಗೆ
ಗೇಳ್ಗೆವೆತ್ತು ರಣಜನ್ನಗೊಂಡದೊಳ್ ಪೆಣಂಗಳ ಬಣಂಬೆಯೊಟ್ಟನಿಂ
ಸವುಡುಕ್ಕಿ ನಾರ್ದು ಅಳ್ಕೆರ್ದೆಯುಂ ಅಳ್ಕಿಸಿ ಬಳ್ಕಿಸಿ ನಲ್ವೆಂಡಿರ್    ೨೦

ಮಕ್ಕಳ್ಗೆ ಕುತ್ತಾದುದು ದಿನನಿಚ್ಚಂ ದುಕ್ಕದ ಕಣ್ಣೀರ್ ಕೋಡಿ ಯಂ ಪರಿಸಿ !

ಅಭಿಮನ್ಯು ತೋಳ್ವಲದಿಂ ಜಾಣಬಲದಿಂ ಧೈರ್ಯಸ್ಥೈರ್ಯ ದಿಂ ಅರಿಕುಲಮಂ ತಾಗಿ ಕೊಚ್ಚಿ ಕಂಡರಿಸಿ ಕರ್ವಿನ ನಿಡುದೋಂಟ ದೊಳ್ ನುಗ್ಗಿದ ಮರಿಯಾನೆಯಂತೆ ಜುದ್ದಮಂ ಕೈಕೊಂಡಿರಲಿತ್ತಲ್, ಅತ್ತಲ್ ಭೀಮ ನಕುಲ ಧೃಷ್ಟದುಮ್ನ ಸಾತ್ಯಕಿಯರೊಂದೊಂದು ದೆಸೆಯೊಳ್ ನುಗ್ಗಿ, ದಳವನೊಡ್ಡಿ ಪೊಣರ್ದರ್ ಬಾಲಕನಿರವಂ ಅರಿತು ಸಾರ್ದ್ ಬಲಂಗೂಡಲ್ ಗೆಯ್ದು ಮಾರೊಡ್ಡು ಗಾಳಿಯೊಡ್ಡಿನ ಮುಗಿಲೊಡ್ಡಾಯ್ತು, ಅರಿಕುಲದಿದಿರೊಳ್. ಇಂತೊಂದು ಅಡ್ಡ ಗಟ್ಟಿಯಿಂ ಪದ್ಮವ್ಯೂಹದೊಳ್ ಪುಗಲಾಸಲ್ಲದೆ ಭೀಮಾದಿಗಳ್ ದೂರ ಮುಳಿಯೆ ಅರಿಕುಲಂ ಬಲದಿಂ ಚಲದಿಂ ಕೆಚ್ಚಿನಿಂ ಪುರ್ಚಿನಿಂ ಸಾಸದಿಂ ಮೋಸದಿಂ ವೈರಿಯ ಕಾಲ್ಮುರಿದು ಸೆರೆವಿಡಿಯಲ್ಕೆಂದು ಬಿರುಸರಳಂ ಪೂಡಿಯುಂ ಕೆಲಬಲವಸರಂ ಮುಂದೈಸಿಯುಂ, ಕಟುಮನದ ಕೈಚಳಕಿಗರ್ ಒಗ್ಗೂಡಿದರ್. ದ್ರೋಣ, ಕರ್ಣ, ಕೃಪ. ದುಶ್ಯಾಸನ, ಸೌಬಲ, ಮಾದ್ರೇಶ, ಶಕುನಿ, ಶಲ್ಯ, ಕುರುಪತಿ, ಸೈಂಧವ ಮುಂತಪ್ಪ ಪಟುಬಟರೊಗ್ಗಿನೊಳ್ ಸಿಂಗಸಿಸುವಿನ ಬೇಂಟೆಯ ಸಂಚು ಹೊಂಚಿ ಮುತ್ತಿದರ್ ಮೂದೆಸೆಯಿಂ. ಇಂತಿಂತು ಬಂಡೆಳ್ದ ಪಟುಭಟರ್ ತಂತಮ್ಮ ಬಿಗಿಮುಷ್ಟಿಯಿಂ ಮುಮ್ಮೊನೆಯ ಜೋಳೆಯ ಕೆಂಗೋಲ್ಗಳಂ ಕಿವಿಮುಟ್ಟೆ ಸೆಳೆದೆಚ್ಚರ್ ಎಡೆವಿಡದೆ. ೩೦

ಆಗಳ್ ವೀರ ಅಭಿಮನ್ಯು ತನ್ನೊರ್ವನಂ ಎಲ್ಲೆಡೆಯಿಂ ಪಿಡಿ ದೌಂಕಿದರೆಂದು ಅಳ್ಕಿದನೆ ? ಕೊಂಕಿದನೆ ? ಜೆಚ್ಚಿದನೆ ? ಬೆದರಿ ದನೆ ? ಬೆಂಗೊಟ್ಟನೆ ? ತನ್ನೊಂದು ಕೈಯಂಬಿನಿಂ ಪಲವರಂ ಸದೆದು ಪಿಂತಿಕ್ಕಿ ಕರ್ಣನ ಧನುವಂ ಕತ್ತರಿಸಿ, ಕೃಪನ ರಥಮಂ ಮುರಿದು, ದ್ರೋಣ ಕುರುರಾಯರಂ ಮನಂಗಿಡಿಸಿ, ಅತಿರಥರಂ ಸೀಳಿ ಲೋಕದೊಳ್ ಜವನ ಪಡಿವರಿಜೆನೆ ದಿಟ್ಟತನದಿಂ ನಿಂದು ಕಡಿಗತ್ತಿಯ, ಕಕ್ಕಡೆಯ, ಬಟ್ಟಿಗೈದಿನ, ಮುಸುಂಡಿಯ, ಸುರಿಗೆಯ ಇಟ್ಟಿಯ, ಬಡಿಗೋಲ್ಗಳ, ಬಿಡಿಸರಳ ಬಗೆಬಗೆಯ ಅಸ್ತ್ರಶಸ್ತ್ರಂಗಳ

ದಿಟ್ಟ ಕೈಮಾಗಾರರನೊಟ್ಟಗೆದುರ್ಚಿದಂ ! ಸಮರಂ ಸಾಟಿಯಿಂ
ಸೂಟಿಯಿಂ ಗಡಣಿಸಿದುದು ಕಾಡದೆವ್ವಂಗಳ್ಗೆ ಬಲಿಯೀವ ಮಾಳ್ಕೆ
ಯಿಂ ! ೫೦

ಕರ್ಣಂ ಕನಲ್ದು ರೊಚ್ಚಿನಿಂ ಕಿಚ್ಚಿನಿಂ ಉದಿದುರಿದು ಕಕ್ಕಸ
ವಗೆಯಿಂ ಮುಂದೆಯ್ದಿ ಮಿಳ್ತುವಿಂಗೆ ತುತ್ತಾದ ತನ್ನ ಬಳಗಮಂ
ಕಂಡು ಕಾಣದ ಮಾಳ್ಕೆಯೊಳ್ ಇಂತೆಂಗುಂ-ಎಲವೊ ಧೂರ್ತ !
ಸಿಸುತನದ ಸೊರ್ಕಿನ್ನು ಸಾಲ್ಗುಂ ಮರಳು ಮರಳೀಗಳೆ ರಣಕೆ
ಬೆಂಗೊಟ್ಟು! ಅಲ್ಲದೊಡೆ ನಿನ್ನ ಕರುಳಂ ಬಗೆದು ದಸದಿಸೆಗೋಡೆ
ಯರ್ಗೆ ಬಿರ್ದಿಕ್ಕುವೆಂ. ಇನ್ನೆಬರಂ ತಾಳ್ದಿದಂ ಕಡೆಗಣ್ಚಿದೊಡೆ
ಸಾವು ದಿಟಂ !

ಅನಿತರೊಳ್ ರೊಚ್ಚು ಮೆಯ್ಯೊಡೆದಂತೆಯುಂ ಪುರ್ಚು
ಕೆರಳ್ದಂತೆಯುಂ ಬೀರರ್ ಪಟುಭಟರ್ ಸುಭಟರ್ ಒಗ್ಗೂಡಿ, ಪಡೆ
ಗೂಡಿ ಕಟ್ಕುರದಿಂದೈತಂದರ್ ; ತಮ್ಮವರ ಪರಿಭವದಿಂ ಕಂಗೆಟ್ಟು ೬೦
ಮನದೊಳ್ ಮರುಗಿಯುಂ ಏಳ್ಗೆವೆತ್ತ ತರಳನ ಬಲ್ಪಿನ ಬೀರತನಕೆ
ಬೆರಗಾಗಿಯುಂ ಎಂತಿವನಂ ಕೊಲ್ವುದೆಂಬೊಂದು ಚಿಂತೆಯಿಂ ಚಣಂ
ತಳ್ವದೆ ಸುತ್ತಮುತ್ತಂ ಎತ್ತಲಿತ್ತಂ ಮುಂದೈಸಿ ಕಾಡನತ್ತಿತ್ತಂ ಕವಿ
ದೊತ್ತಿ ಬರ್ಪ ಬೇಂಟೆಗಾರರ ಮಾಳ್ಕೆಯಿಂ ಮುಂಬರ್ಪ ಅರಿಕುಲ
ಮಂ ಕಣ್ತುಂಬ ನೋಡಿದಭಿಮನ್ಯು ಕಟ್ಟಚ್ಚರಿಯಿಂ-ಓಹೋ !
ಎಂತಪ್ಪ ಸಂದಣಿ ಓರ್ವನಂ ಎದುರ್ಚೆ? ಸಾಲ್ಗುಮೆ ಬಲಂ ಚಲಂ?
ನಿಮಗೆಂದಾದೊಡಸುಗೆ ಕೈಗೂಡಿದುದೇಂ? ಈಗಳಿಂತೊಗ್ಗಟ್ಟಿಲ್ಲ
ದಿರ್ದೊಡೆಂತು ಗೆಯ್ಮೆ? ಜಾಣ್ಮೆಯೆಂದೊಡಿಂತಿರ್ಕುಂ !

ಕರ್ಣಂ ಗುಡುಗುಡಿಸಿ ದಿಟ್ಟತನದ ಪುರುಪಿನಿಂ ಸೋಲ್ತು
ರೊಚ್ಚಿನಿಂ ಕೇಳಿಸಿದನಿಂತು-ಎಲೆ, ಕೂಳ! ಕೈಯೊರ್ವರ್ ಸೋಲ್ತೊ ೭೦
ಡೆಂದೆಂದುಂ ಸೋಲು ಕಟ್ಟಿಟ್ಟ ಬುತ್ತಿಯೇಂ? ಒರ್ವರ್ ಸೋಲ್ತೊಡೆ
ಇನ್ನೊರ್ವರ್ ಗೆಲ್ಮೆ ಕೈಗೂಡಲಕ್ಕುಂ! ಇದೆಕೊ, ಸೈರಿಸೆನ್ನ ಬಾಣ

ಮಂ ಎನ್ನೀ ಬಡಿಗೋಲ್ಗಳಂ ಕೀಳೆನ್ನದಿರ್. ಸಿಸುವಧೆಯುಪ ವಾದದಿಂದುಳಿವುದು ಲೇಸೆನಿಪ್ಪೊಂದು ಧೈರ್ಯದಿಂ ಬಾಳ್ವುದು ನಿನ್ನ ಕೊರ್ವಿಗೆ ಬಿತ್ತಾಯ್ತು. ಮತ್ತೇಂ ನಿನ್ನೊಳ್ ವಿಶೇಷಂ? ಹೂಂ ಸೈರಿಸು !

ಆಕ್ಷಣಂ ಅಭಿಮನ್ಯು ಪೊಂಗರಿಯ ನಿಡುಗೋಲ್ಗಳಿಂಟಂ ಒಟ್ಟಿಗೆ ತೊಟ್ಟು ಸೆಳೆದುವಿಡಲೊಡಂ ಪುಂಖಾನುಪುಂಖಂಬೆತ್ತು ಅರಿ ಯೊಗ್ಗರಮಂ ವಾಯುವೇಗದಿಂ ಪೊಕ್ಕು ಕರ್ಣನ ಭುಜಮಂ ಕೋರೈಸಿ, ಕೆಲಬರಂ ಇರಿದುಂ, ಕೆಲಬರಂ, ತರಿದುಂ, ರಥ ತುರ ೭೦ ಗಂಗಳಂ ಮುರಿದಿಕ್ಕಿಯುಂ; ಆನೆತಟ್ಟುಗಳಂ ಕತ್ತರಿಸಿಯುಂ ಸಾಧನ ಸಮಗ್ರರಂ ಕಂಗೆಡಿಸಿದಂ. ಮಿಕ್ಕುಳಿದರಿಕುಲಜರ್ ಮುಂಬಟ್ಟೆ ದೋರದೆ ಚಿಂತೆಗೊಳಗಾಗೆ ಅತಿರಥರ್ ಮಹಾರಥರ್ ಷಡುರಥರ್ ಒಗ್ಗಟ್ಟಿನಿಂ ಎದುರ್ಗೆಯ್ದು ನಿಡುಗೋಲ್ಗಳ ಸೂಳ್ಸರಿಯಂ ಕರೆದುಂ ಬೊಬ್ಬಿರಿಯೆ, ಸೆಳೆದ ಬಿಲ್ಲಿನ ಕೈದುಕಾರರ್ ಬಂದು ಕೂಡಿದರ್ ರವಿಸುತಾದಿಗಳಂ; ಮತ್ತಂ ಸಂದಣಿಸಿದುದು ಅರಿಕೋಂಟೆ ಎತ್ತೆತ್ತ ಲುಂ! ದೀಪದ ಕುಡಿಗೆರಗಿ ನೊಣಗಳ್ ಸುಟ್ಟು ಕರಿಮುರಿವೋಪ ವೋಲ್ ರಣದಗ್ಗಿಯಂ ಪೊಕ್ಕು ಸಿಡಿದು ಸುಟ್ಟುರಿದು ಹೋಹ ತಮ್ಮವರ್ ಮರುಳ್ಪಡೆಯಾಗಿ ಸಗ್ಗವೇರುತಿರ್ಪುದಂ ಕಣ್ಣಾರೆ ಕಂಡು ತಮ್ಮೊಳ್ ಇಂತೊಂದು ಬಲ್ಪಿರ್ದೊಡಂ ಮೊನೆಯೊಳ್ ಜೇವಡೆಯ ೮೦ ಲಾಗದ ದುಕ್ಕದಿಂ ಸಂಕಟದಿಂ ಕುರುರಾಯಂ ತನ್ನವರಂ ಕುರಿತಿಂತ ಬ್ಬರಿಸಿದಂ-ಎಲೆಲೆ, ಕವಿರ್ಗಸೆಯ ಪೆಂಬೇಡಿಗಳಿರಾ ! ಇಂತಿಂತೋ ರೊಂದೊಗ್ಗರದಿಂ ಕಿರಿಯನ ಕೈಯ್ಯಂ ಕತ್ತರಿಸಲಾಗದಿರ್ದೊಡೇ ನೆನಲಕ್ಕುಂ! ಚೀ! ಚಿಣ್ಣರ ಮೊನೆಯಾಟವೇಂ ಇಂತು ಪುಸಿಯಾಟ ವಾಡಲ್ಕೆ ?

ಆ ಮಾತಿಂ ಕೆರಳ್ದ ದ್ರೋಣಾಚಾರ್ಯಂ ಮುಂದೆಯ್ದಿ–ಭಲೆ,
ಭಲೆ! ಬಿಲ್ಲಾಳ್ತನಮೆಂದೊಡಿದು! ನೀನಹುದು ಅರ್ಜುನ ಸೂನು!
ಒಪ್ಪಿದೆಂ! ಒಪ್ಪಿದೆಂ! ಈಗಳ್ ಹಿಮ್ಮೆಟ್ಟು ನಿಜದಿಂ! ನಿನ್ನಂ ಗೆಲ್ದೊ
ಡಂ ಜಯಮಿಲ್ಲೆಮಗಂ, ಮೃಗಶಾಬಕಮಂ ಪೊಯ್ದೊಡೆ ಜಯಮೇಂ
ಮಗನೆ ? ಇಂ ಪೋಗು ಪೋಗೆಲವೊ ಬೀರರ ಬೀರ ! ೧೦೦

ಅರ್ಜುನ ಸೂನು ರೋಸ ತಾಪಂಗಳಿಂ ಕನಲ್ದು ಪಲ್ಮಸಗಿ–
ಓಮೊ, ಏಂ ಮಾತೋ ಆಚಾರ್ಯ ? ಇಂತೊಂದು ಧ್ಯೇಯಮ
ನೊಡ್ಡಿ ಪೊಳ್ಳು ಬಿಜ್ಜೆಯುಜ್ಜುಗಕೆ ಪಿರಿಯ ಪೆಸರಿಕ್ಕದಿರ್ದೊಡೆಂತು
ಕೀರ್ತಿಕಳಸಂ? ಕುರುರಾಯನುಪ್ಪುಂಡರ್ಗೆ ಕೊಳುಗುಳದ ಕಜ್ಜ
ಮೆಂತು ಪಿಡಿಗುಂ? ಮೋಸಗೇಸದ ಕವಡುಮಾಯೆಯ ಬಿಜ್ಜೆಯಲ್ತೆ
ನಿನಗಕ್ಕುಂ? ಸ್ವಾರ್ಥಮೆ ಪರಮಾರ್ಥಮಿರ್ಕೆ ಇನ್ನೆಲ್ಲಿಯ ಬಲ್ಪಂ !
ಮತ್ತೇಂ ರಣವಿಜ್ಜೆಯ ಚಿಂತೆ? ಎಂತಾದೊಡಂ ಗೆಲ್ದೊಡಾಯ್ತು,
ಧರ್ಮಕರ್ಮಂಗಳೇಕೆ ? ನೀತಿನ್ಯಾಯಂಗಳೇಕೆ? ಛಿಃ ! ತೆಗೆ, ತೆಗೆ,
ಇಂತಿದರೊಳ್ ಆಚಾರ್ಯನೇಕೆ ? ಧರಣಿಪನೇಕೆ ?

ಆಕ್ಷಣಂ ಬಿಲ್ಲಕೊಪ್ಪಿಂಗೆ ಕೂರ್ಗೋಲ್ಗಳನಳವಡಿಸುತುಂ– ೧೧೦
ಇಗೋ, ಸಮರ್ಥರೆಲ್ಲರುಂ ಎನ್ನೀ ಬಾಣಧಾರಾಜಲದೊಳಾಡಿರೆಂದಂ
ಕಲಿಪಾರ್ಥಸೂನು. ಆಗಳಾ ದ್ರೋಣಾಚಾರ್ಯಂ ಮುನಿದು–
ಎಲೆ, ಬಲ್ಪಿನ ಬೀರ! ನಿನ್ನ ಕೆಚ್ಚುಂ ರೊಚ್ಚುಂ ಲೇಸುಲೇಸೈ.
ನೀನಹುದು ಎಳೆನಾಗಂ! ಕುಲಕ್ಕೆ ವೈರಿಯಲ್ತೆ ನಾಗನಂ
ಹೊಡೆದು ಬಡಿದು ಅರೆಜೀವಗೊಳಿಸಿದೊಡೆ? ಇದೋ, ಇಂ
ನಿನ್ನಂ ಮೆಚ್ಚುಗುಂ ಮುಮ್ಮೊನೆಯ ಬಡಿ ಸರಳಿಂ ! ಪೊಂಗರಿಯ
ಕೆಂಗೋಲಿಂ! ಇಕೊ ಸಹಿಸು. ಇಂದೀಗಳ್ ನಿನ್ನ ತೋಳ್ವಲಮಂ
ಪೊಳ್ಳಕ್ಕದಿರ್ದೊಡೆ ಕೇಳ್ ! ನಿನ್ನೊಡಲಂ ಬಗೆದು ಪರ್ದುಕಾಗೆ
ಗಳ್ಗೆ ಬಿರ್ದಿನ ಬಾಣಸುಗೆಯ್ವೆಂ ಮೇಣ್ ನಿನ್ನುಸಿರ್ ಜವಹುರದ
ಪುಳುಗಳ್ಗೆ ಸಯ್ಯಾಡಲಕ್ಕುಂ ! ಜೀವವಕ್ಕುಂ! ಕೇಳ್, ಇದೀಗಂ ೧೨೦

ಒಂದೆ ಪೊಯ್ಲಿಂ ನಿನ್ನ ರುಂಡಮಂ ಕಂಡಿಸಿ ರಣಮಾರಿಯ ಕೈಗಿಕ್ಕಿ
ಸೆಂಡಾಡಿಸುವೆಂ! ನಿನ್ನ ಕಣ್ಣಾಲಿಗಳಂ ಕಟ್ಟಿರುವೆಗಳ್ಗೆ ಕಟ್ಟಿಚ್ಚಿನ
ಕಲ್ಲು ಸಕ್ಕರೆಗೆಯ್ವೆಂ! ಪೊಳ್ಳಲ್ತಿದು ತಿಳಿದಿರೆಲೆ ಬಾಲ !

ಆಚಾರ್ಯಂ ಕೂರ್ನುಡಿಗಳ್ಗೆ ತಕ್ಕಿನ ಕೆಂಗಿಡಿಗಳಂ ಕಾರ್ವ
ಕಣ್ಗಳಿಂ ಕೆಕ್ಕರಿಸಿ ನೋಡುತುಂ ಕೋಯಂಡಮಂ ಪೋಲ್ವ ಪೆರ್
ಬಿಲ್ಲಂ ಕೈಕೊಂಡು ಪ್ರಳಯ ರುದ್ರನೆನೆ ಜರ್ವಿ ಬಲ್ಪಿನಾಳ್ಗಳ ಬೆಂಬಲ
ದಿಂ ಜಾನಬಲದಿಂ ಮೈವೆರ್ಚಿ ಮನವೆರ್ಚಿ ಬಿಲ್ಲ ನಾರಿಯಂ ಜೇವ
ಡೆಸಿ ಕಿವಿ ಮುಟ್ಟೆ ಸೆಳೆದುವಿಡಲ್ ಮುಂಗಾರಿಲ್ಲದೆ ಸಿಡಿಲ್ ತಾಗಿದು
ದೊ ಎನೆ ಸಬುದಂ ಮೊಳಗಿದುದು ರಣರಂಗಂ ನಡುಗಿ ಹೋಹಂದ
ದಲಿ. ಅನಿತರೊಳ್ ಅಭಿಮನ್ಯು ಪಡಿಯಂಬುವಂ ಪೂಡಿ ಪೊಡೆದು ೧೩೦
ರುಳ್ಚಿ–ನಿನ್ನ ಭುಜಬಲವಂ ಬಲ್ಲೆನಾಚಾರ್ಯ! ಆದೊಡಂ ನೀನೆನ್ನಂ
ಜಯಿಸಿದೊಡೆ ಮತ್ತೆ ಪಿಡಿಯೆ ಧನುವಂ ! ದೊಂಬತನದ ನುಡಿ
ಗಟ್ಟಿಂ ಮೊನೆಗಣೆಯು ಸಾಸಂ ಲೇಸು ? ಎನುವನಿತರೊಳ್ ಎಡ
ದೊಳೌಂಕುವ ಕೃಪ–ಶಕುನಿಯರ್, ಬಲದೊಳೌಂಕುವ ಸೌಬಲ–
ದುಶ್ಯಾಸನರ್ ಅತಿರಥ ಮಹಾರಥರ ಬೆಂಬಲದಿಂ ಕೂರ್ಗೋಲ್ಗಳ
ನೇಸಾಡಿದರ್. ಮದ್ದಾನೆಗಳ್ ಪಲ್ಮಸಗಿ ಮರಿಶಾರ್ದೂಲವಂ
ಮುತ್ತುವೊಲ್ ಮುಂದೊತ್ತಿ ಕವಿದು ಜಡಿಸರಳನೇಸಾಡಿದರ್.
ಅಭಿಮನ್ಯು ಇಂತು ದಂಡೈಸಿ ಮುಂದೈಸಿ ಬಂದೊದವಿದ ಮಿಳ್ತುವಿನ
ಜಂಗುಳಿಯೆನೆ ಕಣ್ಗೆತ್ತ ಕಟುಮನದ ಕೂರಾಳ್ಗಳಂ ಪಡಿ ಸರಳಂ
ಪೂಡಿ ಪುಂಖಾನುಪುಂಖಂಗೊಳಿಸಿ ಎಲ್ಲರನೊಟ್ಟೆಗೆ ಎದಿರ್ಚಿದಂ ! ೧೪೦
ಕೃಪನರಥಂ ಮುರಿದು ಬಿಳ್ದುದು. ಗುರುಸುತನ ಕೈಯ್ಯ ಕುಮಾರ್ಗಳ್
ಪೆಂರಿದು ತುಂಡರಿದು ತಿರೆಗೆ ಕೆಡೆದುದು ಚೂರುಚೂರಾಗಿ. ಕರ್ಣನ
ಬಿಲ್ಲು ಮುರಿದು ದೂರ ಹಾರಿ ಬಿಳ್ದುದು. ಕುರುರಾಯನ ರಥ
ಚಕ್ರದ ಕೀಲ್ಮುರಿದು ಧ್ವಜಮಂ ಕತ್ತರಿಸಿ, ದ್ರೋಣಾಚಾರ್ಯನಂ
ಜಾಡಿಸಿ ನೋಯಿಸಿ ಸೌಬಲನಂ ಘಾತಿಸಿ ಭೀತಿಸಿ ಎದೆಗಿಡಿಸಿದಂ.
ಪಟುಭಟರ ಅತಿರಥರ ಮಹಾರಥರ ಷಡುರಥರ ಮಹಾ ಒಗ್ಗರ

ಹೊಡೆಹೊಯ್ದು ಕಾಲ್ಮುರಿದು ಕೈಮುರಿದು ಕೀಲ್ಮುರಿದು ಹೀಯ್ಯಾಳಿ
ಗಳಂ ಪಿಂತಿಕ್ಕಿ ಮತ್ತುರವಣಿಸಿದಂ ಬಗೆವಗೆಯು ಸಿಡುಗೋಲ್ಗಳಂ!

ರಥಿಕರುಂ ಗುರಿಗಟ್ಟಿ ಹುರಿಬಿಡದೆ ಬಿಗುಹಿನೊಳ್ ಪೂಣ್ದು
ಮತ್ತಂ ಮತ್ತಂ ಬಿಡಿಸರಳಂ ಸೂಸಿದರ್, ಎಡೆವಿಡದೆ ಪಗೆಯುಂ ೧೫೦
ಜಡಿಕುಟ್ಟಿ ಅರುಣ ಜಲದೊಳ್ ನಾದಿದರ್. ಕೂರ್ಗಣೆಗಳಂ
ನಟ್ಟೊತ್ತಿ ಎಳಮೆಯ್ಯುಂ ಕೋರೈಸಿ ಕಾಡಿದರ್. ಅಭಿಮನ್ಯು
ಮನದೊಳ್ ತನಗಿನ್ನು ಉಳಿಗಾಲವಿಲ್ಲೆಂದು ಬಗೆದೊಡಂ ಕುಗ್ಗದೆ
ತಗ್ಗದೆ ಅವರವರ ಅಸ್ತ್ರಶಸ್ತ್ರಂಗಳಂ ಧೈರ್ಯಸ್ಥೈರ್ಯದಿಂ ಎದಿರ್ಚಿ
ತನಗೆಣೆಯಿಲ್ಲದೊಲ್ ಪೊಣರ್ದು ಕೊಚ್ಚಿ ಬೀರದೇಳ್ಗಿಯಸಣಂ
ಕುಂದಿಸದೆ ಘೋರರೂವಿನ ಅರಿಕುಲಜರೊಡಂ ಕೆಚ್ಚಿನಿಂದೆಚ್ಚಾ
ಡಿದಂ. ತನಗಣಮುಂ ಬೆಂಬಲಿಗರಿಲ್ಲಮೆಂದು ಕೋಡಿದನಿಲ್ಲಂ;
ಮೈಕೈಗಾಯಮುಂ ಲೆಕ್ಕಿಸಿದಸಿಲ್ಲಂ! ತನ್ನೊರ್ವನೆದುರ್ ಬಲ್ಪಿನ
ಬೀರರ್ ಪಲವರೆಂದು ಬೆಂಗೊಟ್ಟೋಡಿದನಿಲ್ಲಂ. ಮೆಚ್ಚಿದಂಬಿ
ನೊಳ್ ಕೆಚ್ಚಿಕ್ಕಿ ಅರಿತು ನುರಿತುಂ ಸರಳ ಸೋನೆಯುಂ ಸುರಿ ೧೬೦
ಯುತುಂ ಜಾಣಮುಂ ಬೀರಬಲಮುಂ ಒಗ್ಗೂಡಿಸಿ ತಾಗಿದಂ!

ಭಾಪುರೇ! ಭಾಪು! ಎಂದುದುಮರಗಣಂ.

ಪೂತುರೇ ಪಾಯಿಕು! ಎಂದರ್ ದೆಸೆಗೊಡೆಯರ್.

ದ್ರೋಣಾಚಾರ್ಯಂ ಕಂದನಿರವಂ ಮೆಚ್ಚಿ ವೈವೆರ್ಚಿ ಸಂತ
ಸಂಬಟ್ಟು ಇನ್ನೆಬರಂ ಇಂತಪ್ಪ ಬಿಲ್‌ವಿಜ್ಜೆಯಂ ಕಂಡೆಸಿಲ್ಲಮೆಂದು
ಮನದೊಳ್ ಭಾವಿಸಿಯುಂ ಯೋಚಿಸಿಯುಂ ತನ್ನೊಳ್ ಕಟ್ಟಚ್ಚರಿ
ವಡುತಂ ಕಣೆಯೆತ್ತಿ ಬಿಲ್ಲಂ ಜೇವಡೆಸಿ ತನ್ನವರನೀತು ಪುರಿದುಂಬಿ
ಸಿದಂ- ಏನಿಂತು ಹಿಮ್ಮೆಟ್ಟು? ಬಾಲನೇಂ ಹಾಲಾಹಲನೆ? ಓರ್ವ
ನುಂ ಎದುರ್ಚಲಾಗದೆ ಇಂತಪ್ಪ ಬೀರರ್ ಪಿಂಜರಿದೊಡೆ ನಾಣ್ಗೇಡ
ಲ್ತೆ? ಚಿಃ! ವೈರಿ ಭಟರ್ಗೆ ಪೆಂಡಿರಾಗುವಿರೇಂ? ಆರುಂ ಬೆಚ್ಚದೆ

ಚೆದರದೆ ಮುಂದೆಯ್ದಿ ಪೊಡರ್ಪಿನ ಪರ್ಪರಿಕೆಯ ರೋಸದ ಸಾಸದ
ಬೀರದ ಜವನ ಜೂದುಗಾರರಂ ಮೀರ್ದು ಸಮಯಂ ಸಾಧಿಸಲಕ್ಕುಂ!

ಆ ಮಾತಿಂಗೆ ನಾಣ್ಚಿದ ಬೀರರ್ ಪುರುಡುವೆತ್ತು ಮುಂದೆಯ್ದಿ
ತಂತಮ್ಮ ಅಸ್ತ್ರಶಸ್ತ್ರಂಗಳಂ ಕಳಕ್ಕನೆ ಕೈಕೊಂಡರ್. ಇಟ್ಟಿಯುಂ
ಕರಗಸಮುಂ ಕವೆಗೋಲುಂ ಕೊಡಲಿಯುಂ ಇರ್ಕುಳಿಯುಂ ತ್ರಿಶೂಲ
ಮುಂ ದಂಡಮುಂ ಗಂಡುಗತ್ತರಿಯುಂ ಮತ್ತಂ ಕೂರ್ವಾಳ್ ಮುಂತ
ಪ್ಪ ಅಸ್ತ್ರಂಗಳುರಟಣೆಯು ಸಡಗರದ ಬಡಿವಾರದ ಕೆಚ್ಚಿನ ಪುರ್ಚಿನ
ದಳವುಳಂ ಮುತ್ತಿ ಅರಗುಲಿಯ ನೇಣಿಂ ಬಿಗಿಯೆ ಬೀಗಿ ತಾಗಿ
ದತ್ತು. ಮತ್ತಾಗಳ್ ಪೊಣರ್ಕೆಯ ಬಿಗುಪು ಸಾರ್ದತ್ತು ಇಬ್ಬಣ
ದೊಳ್ ರೋಷದಿಂ. ಎಲ್ಲೆಡೆಯಿಂ ಎಡೆವಿಡದೆ ನುಗ್ಗಿ ಪರ್ಪ ಕೂರಂಕು ೧೮೦
ಸದಿರಿತಕ್ಕಂ ಜಡಿಕುಟ್ಟಿ ನಟ್ಟೊತ್ತಿ ನಾಂಟುವ ಕೂರ್ಬಾಣಂಗಳಿಂದೊಂ
ದು ಬೇನೆಯುಂ. ಸೆತ್ತರ್ ಸೂಸಿದ ಮೆಯ್ಯುಂ ಸೋಲ್ತು, ಜೀವಂ
ಪಿಂಡಿ ಪಣ್ಗೆಯ್ದೊಡಂ ಬಾಲಕಂ ನೆಚ್ಚುಗೆಡದೆ ಮತ್ತಂ ಕೂರ್ಬಾಣಂ
ಗಳನೇಸಾಡಿ ಪಗೆಗಳ ಪಗೆಗೆಚ್ಚಂ ಮಾರ್ಪುಲೆದು ಮಾರ್ದು
ಸುರುಳ್ದುರುಳ್ವಂತೆ ದಿಂಡುರುಳ್ಚಿದಂ, ಹಾ, ಹಾ! ಎಂದೊರಲುತಿರೆ
ಕುರು ಬಲಂ!

ವಿರಥನಾದ ಕೃಪಂ ಮನಂಗೆಟ್ಟೊಡಂ ತಡುಕಿ ಪುಡುಕಿ
ಬೇರೊಂದು ರಥವನೇರ್ದು ದ್ರೋಣನ ಬಳಿಸಂದು ಎಲ್ಲರೊಟ್ಟಿಸಿಂ
ಮರುವಕ್ಕದೆಳಯನ ಬಿಲ್ಲಂ ಮುರಿದೊಗೆಯಲಕ್ಕುಮೆಂದು ಸಂಚಿನ
ಹೊಂಚಿನ ರಣವಿಜ್ಜೆಯ ಉಜ್ಜುಗಮುಂ ಕೈಕೊಂಡಿರ್ದುದಂ ಕಂಡ ೧೯೦
ಅಶ್ವತ್ಥಾಮನುರ್ಬಿ ಕೆಳೆಕೊಂಡನಾಗಳಿಗೆಯೊಳ್. ಇಂತಿವರ ಕಾಳೆ
ಗವರೆಗಳ್ ಸೂಳಯಿಸುತಿರ್ದುದಂ ಕಂಡ ಅಭಿಮನ್ಯು ದಿಟ್ಟತನದಿಂ
ಕೋಲ್ಮಳೆಗರೆದು ಕಂಗೆಟ್ಟು ತಹತಹಿಪ ತನ್ನ ವಾರುವಂ ಸಾರಥಿ
ಯುಂ ತಳ್ಕೈಸಿ. ಸೂಟಿಯಿಂ ಪಾಟಿಯಿಂ ಪಗೆಯುಂ ತಾಗಿ ಕೈಚಳಕಿ
ಗರಂ ಧೈರ್ಯಸ್ಥೈರ್ಯದಿಂ ಇದಿರ್ಚಿ ಒರ್ ಬಾಣದೊಳ್ ತಿಕ್ಕಿತಿಕ್ಕಿ

ಯಾಡಿದಂ. ಗನ್ನಂ ನಮೆದು ಬಲ್ಪುಂಮುಡುಗೆ ಆಚಾರ್ಯಂ ಮಿಣ್ಣನೆ ಜಾರಿದನಲ್ಲಿಂದಂ. ಕೃಪಂ ಬಾಣಂ ತಾಗುವ ಮುನ್ನಂ ಪಿಂಜರಿದಂ. ಅತಿರಥ ಮಹಾರಥರ್ ಬೆಂಗೊಟ್ಟೋಡಿದರ್. ಭುಜಮುಂ ಬಗೆಯೆ ಮುಮ್ಮೊನೆಯ ವಿಶಿಖಂ ಶಲ್ಯಂ ಹಾಹಾಕರಿಸುತೆ ಬಿಳ್ದಿದ್ದು ಆಚಾರ್ಯನನರಸುತೆ ನಡೆದಂ, ವೈರಿಯ ದಿಟ್ಟಿಗೆ ಬೀಳದ ವೊಲ್. ಕುರುರಾಯಂ ಶಲ್ಯನಂ ಮುಸುಂಕಿದ ದಿಟ್ಟ ವೊನೆಗಾರನ ಬೀರಸಿರಿಯ ಸೂಳ್ಸರಿಯಂ ಕಂಡು ಎರ್ದೆಯಳ್ಕಿ ಮುಸವಳ್ಕಿ ತಳಮಳಿಸಿ ನೋಡುತಿರೆಯಿರೆ ಸಾರಥಿ ರಥಮಂ ತಿರುಪಿದಂ. ೨೦೦

ಕರ್ಣಂ ಬಲ್ಪಿನ ಬೀರತನದ ತರುವಲಿಯ ಕೈಚಳಕದಿಂ ಸೋತು ಬೆಂಡಾಗಿ ಮೊಗದ ಬಣ್ಣವಿಳಿದು ತನ್ನೊಳೆ ಚಿಂತೆವೆತ್ತು ಗೋಣ್ಮುರಿದು ಕೈಕೈ ಮುಸಗಿ ವಾಚಿಸಿದನಿಂತು–ಕುರುಪತಿ ಸೇವೆಯ ಪಾತಕಂ ಪಣ್ತು ಬಾಳುಂ ಬರ್ದುಂಕುಂ ಕೆಟ್ಟು ಕೋಳುವೋಯ್ತು. ಇನ್ನುಮಿನ್ನುಂ ಅಳಿವುಉಳಿವು ಮಾದೇವ ನಿನ್ನಡಿಗೆಂದು ಮುಡುಪಿಡುವೆಂ!

ಆಗಳಲ್ಲಿಗೈತಂದ ಕುರುಪತಿ ಸಿಟ್ಟಿನಗ್ಗಿಯುಂ ಕಾರ್ದು ರೋಸದುಸಿರಂ ಬರಿಸಿ ಕೆಂಗಣ್ಣ ಕುಡಿನೋಟದಿಂ ನೋಡುತುಂ–ನಿಲ್, ತರಳ! ನೀನೆನಿತು ಕಾದಿವೋದಿ ಸಾಸಂಬಟ್ಟೊಡಂ, ಇಂದು ಮೆಯ್ಯುಸಿಲ್ಲಿ ಒಗೆವುದೇ ದಿಟಂ! ದಿಟಂ!! ಇಂತಿದರೊಳ್ ನಿನ್ನ ಸಾಸಂ ವ್ಯರ್ಥಂ! ನೀಂ ಬಾಳ್ವೊಡೆ ರಣಕೆ ಬೆಂಗೊಟ್ಟು ಪೋಗೆಲೆ! ೨೧೦

ಅಭಿಮನ್ಯು–ಅಹ, ಇಂತೀ ಜಾವಳಮೇಕೆ? ಎನ್ನೊಡಂ ಸೆಣಸಿ ಗೆಲ್ವೊಡೆ ನಿನ್ನ ಬಲ್ಪಿನ ಬಿಲ್ಲಾಳ್ತನಮುಂ ಬಯಲಕ್ಕುಂ! ಡೊಂಬಿನ ಬಡಿವಾರದ ಬಿರುನುಡಿಯಿಂ, ಬಲ್ಪಿನ ಕೂರ್ಗಣೆಯೊಳ್ ಕನುಡಿವುದೆ ಲೇಸೈ ಎಂಬನಿತರೊಳ್ ಮಿಕ್ಕಿನ ತಕ್ಕಿನ ಅರಿರಾಯರ್ ಕನಲ್ದು ಕಿಡಿ ಕಿಡಿವೋಗಿ, ತೆಕ್ಕನೆ ಮುಳ್ಳಂ ಬೆಟ್ಟಿದಂತೆಯುಂ ಬೇವಿನೆಣ್ಣೆಯನುಂಡಂತೆಯುಂ ಕೂರ್ಗಲ್ಲೆಡವಿದಂತೆಯುಂ, ಮರದಿಂ

ಬಿಲ್ದಂತೆಯುಂ ಜೇವುಂಡು ನೋವುಂಡು ನಲುಗಿ ಕಟ್ಟುರದ ಸೇಡಿನ ೨೨೦
ಪೋಡಿಯ ಮಸಕದಿಂ ಕಲಂಕುವಗೆಯೊಳ್ ಎಲ್ಲರುಂ ಹುರಿ
ಗೊಂಡ ಮಿಸೆಯಂ ತಿರ್ದಿ ತೋಳ್ಚಪ್ಪರಿಸಿ ತೊಡೆಯಂ ಚಪ್ಪರಿಸಿ
ಮಾರಾಂತು ಎಲ್ಲೆಡೆಯುಂ ಮುತ್ತಿದರ್ ಕೌರವಾನುಜರ್ ಮೇಣ್
ಅಶ್ವತ್ಥಾಮ ಕೃಪ ಕರ್ಣ ದ್ರೋಣ ಮುಂತಪ್ಪ ವೀರಾದಿವೀರರ್–
ಹೋಯೆಂದುಂ, ಭೋಯೆಂದುಂ ಕಟುತರದ ಬಗೆವಗೆಯ ಬಾಣಾ
ವಲಿಯಂ ಪರಿಸಿದರ್. ಆಗಳೇಂವೇಳ್ವೆನೊ ? ಬ್ರಹ್ಮಾಂಡಂ
ನಡುಗುವಂತು ಗಗನಂ ಬಿರಿವಂತು ದಸಮೂಲೆಗಳ್ ಪಳಂಚುವಂತು
ಸಬುದಂ ಮೊಳಗಿದುದು ಲೋಕದೊಳ್ ! ಅಭಿಮನ್ಯು ತೆಕ್ಕನೆ
ಎದುರುವಕ್ಕದೊಳ್ ಜಂಕಣಿಸಿದೆಲ್ಲರಂ ಕಂಡು ಚೆಚ್ಚರದಿಂ ತನ್ನ
ಕೈಯಂಬಿನೊಳ್ ಬಡಿಗೋಲ್ಗಳನಳಪಡಿಸಿ ಕಿವಿಮುಟ್ಟೆ ಸೆಳೆದುವಿಡೆ ೨೩೦
ಪುಂಖಾನುಪುಂಖವಾಗಿ ಭೋಂಕನೆ ಮುಸುಂಕಿದುದು ಅರಿಯೊಗ್ಗರಂ!

ದುಶ್ಶಾಸನಂ–ಎಲೆ ಚಲದಂಕ! ಲೋಕದೊಳ್ ನೀನೊರ್ವನೆ
ಬೀರಂ ಗಡ ! ಪೂಣ್ಕೆ ಗಡ ! ಮಿಕ್ಕುಳಿದ ರಾಯರ್ ಪಂದೆಗಳ್
ಗಡ ! ತನ್ನಾಳ್ತನದ ಪೆರ್ಮೆಳಕೆಯಂ ಕೈವಿಟ್ಟು ಈಗಳೆನ್ನೊಳ್ ಸೆಣಸಿ
ಗೆಲ್ದನಂತರಂ ನಿನ್ನ ಬೀರತನದ ನಿರ್ಣಯಂ ಗಡ !

ಎನುತುಂ ಬೆಚ್ಚರದಿಂ ಪೊಣರ್ಕೆಗಿಳಿದಂ ಎಲ್ಲರೊಟ್ಟನಿಂ.
ಇಂತಪ್ಪ ಬೀರರ್ ಶಕ್ತಿಯಿಂ ಯುಕ್ತಿಯಿಂ ಮಂತ್ರದಿಂ ತಂತ್ರದಿಂ
ಕೆಚ್ಚಿನಿಂ ಪುರ್ಚಿನಿಂ ಮೇಲ್ವಾಯ್ದು ನುಗ್ಗಿ ಮಾರಾಂತು ಪೊಯ್ಯು
ಲೊಡಂ ಮಾರಕಾಸ್ತ್ರದಿಂ ನಡುವಟ್ಟೆಯೊಳ್ ಕೊಚ್ಚಿ ಕಂಡರಿಸಿ
ಶಲ್ಯನ ರಥಮಂ ಮುರಿದು ರವಿಸುತನ ಕೈಯ್ಯಂಬುಮಂ ತುಂಡರಿಸಿ, ೨೪೦
ಕುರುರಾಯನ ರಥಮಂ ಗಾವುದ ದೂರಂ ನೂಂಕಿ ಸಿಂತಿಕ್ಕಿ,
ದ್ರೋಣನಂ ನೋಯಿಸಿ ಬಗೆಗಿಡಿಸಿ ಷಡುರಥರ ರಥಮಂ ಕೀಲ್ಮು
ರಿದು ಕೆಡವಿದಂ. ಮತ್ತಂ ಮುಮ್ಮೊನೆಯಬಾಣಂಗಳ ಜಲ್ಸೋನೆ
ಯಂ ಕರೆದು ಕಾಲ್ದಳವನೊರೆಸಿ ರಾವುತರಂ ಮಾವುತರಂ ಬಡಿ

ದೋಡಿಸಿ ಪೊಯ್ದುರುಳಿಸಿದನಾನೆಗಳಂ; ಸೀೞಿದಂ ತೇಜಿಗಳೊಡಲಂ
ಚಣಚಣಂ ಕಂಟಕವಾಗುತ್ತಿರೆ ರೊಚ್ಚೆಗೆಳ್ದ ರಿಪುದಳಂ ಕೆಚ್ಚಿನಿಂ
ಕಿಚ್ಚಿನಿಂ ಎಡಬಲದೊಳೌಂಕಿ ಬಿರುಸರಳಂ ಸೂಸಿ ನಿಶಿತಾಸ್ತ್ರಮಂ
ಪೂಡಿ ಕುಟ್ಟಿದರ್; ತಟ್ಟಿದರ್; ಕಿಟ್ಟಿದರ್; ಆದೊಡಂ ಫಲ್ಗುಣ
ನಂದನಂ ಅಳ್ಕದೆ ಬಳ್ಕದೆ ತೋಳ್ವಲದ ಸಾಸದಿಂ ಬಲ್ಪಿನ ಬಿಲ್
ವಿಜ್ಜೆಯಿಂ ಪುಲ್ಲಂ ಸದೆವಂತೆ ಅರಿಕುಲಮಂ ಸದೆದಂ ಭೂರಮೆಯ ೨೫೦
ಮೆಯ್ಯಭಾರಮಂ ಕಳೆವೊಂದು ದೂಸರಿಂ.

ಅನಂತರಮಾ ಕಟ್ಟಂಕೆಯ ಬಲ್ಪಿನ ಸಾಸಿಗಳ್ ತಂತಮ್ಮ
ಸೇನೆವೆರಸಿ ಪಗೆಯ ತೇರಂ ಸುತ್ತಲುಂ ಮುತ್ತಿ ಕೋಲ್ಮಳೆ ಕರೆವ
ಕೋಲಾಹಲಂ ಪೆರ್ಚಲೊಡಂ ಅಭಿಮನ್ಯು ಕೆರಳ್ದು ದಿಗಧೀಶರ್
ತೆಕ್ಕನೆ ಬೆರ್ಚುವಿನಂ ದಿಗ್ಭಿತ್ತಿಗಳೊಡೆದು ಬಿರಿವಿನಂ ಪೇರಾನೆಗಳಳ್ಕಿ
ಘೀಳಿಡುವಿನಂ ಬೊಬ್ಬಿರಿದು ಬೊಮ್ಮನ ನೆನವರಿಕೆಯೊಳ್ ಕೂರಂ
ಬುಮಂ ತೊಡರ್ಚಿ ಬಿಡಲೊಡನೆ ಸಾಯಿರ ರಿಪುಶಿರಂಗಳ್ ದಿಂಡುರು
ಳ್ದುವು ತೆಂಗಾಯ್ಗಳ್ ಬಿಳ್ದು ಉರುಳ್ದು ಪೋಪಂತೆ! ಕೆಲರ್ ಗಾಯ
ವಟ್ಟು ಘಾಸಿವಟ್ಟು ಕೆನ್ನೀರಂ ಚೆಲ್ಲಾಡಿ ಮುಚ್ಚೆವೋದರ್. ಗುರು
ತನೂಜಂ ಶಲ್ಯ ಕೃಪರುಂ ಗೆಲ್ವಾಸೆಯುಂ ಬಿಟ್ಟು ಬಗೆಗೆಟ್ಟು ಮುಂಗೆ ೨೬೦
ಟ್ಟು ಸುರಗಿ ಕೂರ್ವಾಳ್ಗಳಂ ಬಿಸುಟು ಬೆಮರ್ ಬಸಿದು ಪಡಿವೊಗ
ದಿಂ ನಿಂದಿರೆ ಗುರು ಕೃಪರ್ ಕುಗ್ಗಿ ನೆಗ್ಗಿ ಮುಗ್ಗಿ ಚಿಂತೆವೆತ್ತರ್.
ಕೌರವಾನುಜರ್ ಮತ್ತಂ ಮತ್ತಂ ಬೆಂಗೊಟ್ಟೋಡುತ್ತಿರ್ದರ್.
ಮತ್ತಮಾ ಕೌರವರಾಯಂ ಚಿಂತೆಯಿಂ ಭಯದಿಂ ಮೊಗಂ ಬಾಡಿ
ಬಣ್ಣಂಗೆಟ್ಟು ಅನುಜರೊಡಂ ಗನ್ನದಂಕದೊಳ್ ಕಣ್ಮರೆ ನಿಂತು,
ಎಂತಾದೊಡಂ ಅರಿಯಂ ಕೊಂದು ಗೆಲ್ಮೆಯಂ ಗಳಿಪೊಂದು ಬೆಸನ
ದೊಳ್ ಮುಂಬಟ್ಟೆಯಂ ಅರಸುತುಂ ನುಡಿದ ನನುಜಂಗೆ–ಎಲೆ
ದುಶ್ಯಾಸನ! ಇಂ ವೈರಿಯು ಎದುರ್ನಿಂತು ಗೆಲ್ವಾಸೆ ವ್ಯರ್ಥಂ. ಅಂತು
ಮಲ್ಲದೆಯುಂ ಸಮಸಪ್ತಕರೊಡಂ ಪೊಣರ್ಕೆಯಂ ಮುಗಿಸಿ

ಕೃಷ್ಣಾರ್ಜುನರಿತ್ತ ಬಂದು ಕೂಡಿದೊಡೆ ಪದ್ಮವ್ಯೂಹದ ಗತಿಯುಂ ೨೩೦
ಕೆಟ್ಟುಪೋಪುದು ಸಾಜಂ. ಅನಿತರೊಳ್ ಇವನಂ ಕೊಟ್ಟಿ ಜವ
ಹುರಮಂ ಮುಟ್ಟಯಿಸದಿರ್ದೊಡೆಮಗೆ ಗತಿಯಿಲ್ಲಂ.

ದುಶ್ಶಾಸನಂ–ಅಪ್ಪುದಪ್ಪುದು ಎಂತಾದೊಡೀಗಳೆ ಗನ್ನ
ದಂಕದೊಳ್ ಕೊಟ್ಟಿ ಕೆಡವಲಕ್ಕುಂ. ಇಂ ಚಿಂತೆಗಿನಿತುಂ
ಪೊಳ್ತಿಲ್ಲಂ. ಏಂ ಗೆಯ್ವುದು ಪೇಳ್ ?

ದುರ್ಯೋಧನಂ–ನಿಶ್ಶಸ್ತ್ರಗೊಳಿಪುದೊಂದೆ ಮಾರ್ಗಂ !

ದುಶ್ಶಾಸನಂ–ಕೇಳ್ ಅಗ್ರಜ ! ಎದುರ್ವೆತ್ತು ಬಿಲ್ಲಂ ಕತ್ತರಿ
ಪುದಸಾಧ್ಯಂ ! ಇವಂ ಅಸಮಾನ್ಯಂ !

ದುರ್ಯೋಧನಂ–ಈ ಪೊಣರ್ಕೆಯುಜ್ಜುಗದಿಂದಾದ ಬಳಲ್ಕೆ
ಮುಡಿವನ್ನಂ, ರಣವಿಜ್ಜೆಯಿಂ ಪುನಂ ದಣಿದು ಗಾರಾಗುವನ್ನಂ, ೨೮೦
ಕೀರ್ತಿಯ ಪುರುಳಿಂ ಕೊಡಂಕೆ ತುಂಬಿ ಕೋಡಿವರಿಯುವನ್ನ ರಣ
ರಂಗದೊಳ್ ಪೋರ್ವುದು, ಗೆಲ್ವುದು ಮೊಲ್ವುದು ಸಾಜಂ. ಅನಂ
ತರಂ ಶರನ್ಯಾಸವೇಳ್ಕುಂ ಮನುಜರ್ಗೆ. ಇಂ ತಾಳ್ಮೆ ಅಸಾಧ್ಯಂ !
ನೀಂ ಪೋಗಿ ಪಿಂಗಡೆಯಿಂ ಬಿಲ್ಲನಾರಿಯುಂ ಕತ್ತರಿಸಿ ಕೊಂದು
ಜುದ್ದಕ್ಕೆ ತೆರೆಯೆಳೆಯೈ !

ದುಶ್ಶಾಸನಂ–ಆಯ್ತಾಯ್ತು. ಅಂತಲ್ಲದೆ ಮುಗಿಬಗಿಯಾ
ಗದು.

ದುರ್ಯೋಧನಂ–ಈಗಲೆ ಪೊ, ತಳ್ವದಿರ್.

ದುಶ್ಶಾಸನಂ ಅಗ್ರಜನಾಜ್ಞೆಯಂ ಶಿರದೊಳ್ ಪೊತ್ತು ಚೆಚ್ಚರ
ದಿಂ ಸಾರ್ದು ಕಟ್ಟುರದ ನಿಟ್ಟುರದ ರಣವಿಜ್ಜೆಗಿಳಿದಂ. ಬಾಳ್ತೆಯ ೨೯೦
ಪಾಪಪಂಕಿಲದಬೆಂಚೆಯೊಳ್ ಪೊರಳ್ದು ಕೋಲ್ಕೆಸರ ಲಿಪ್ಪದೊಳ್

ನರಳ್ವೆಗ್ಗಿನ ರಾಯಂಗೆ ಇಂತೊಂದು ಜುದ್ದವೆಸರ ಕಟ್ಟಂಕದ ಜನ್ನ ಗೊಂಡಂಗೆಯ್ದು ಕಟುಮನಮಂ ಬೆಸೆದು ಕಟು ಹೃದಯಂ ಕೋದ ಬೊಮ್ಮಂ ಈ ವೀರಗಾಥೆಯಂ ಪೊಚ್ಚರದಿಂ ಪೊಣ್ಮಿಸಿದಂ. ಮೂಜಗದ ಲೋಗರಾರಾದೊಡಂ ಭಾರತ ಕಥಾಮಂಜರಿಯನೊರ್ವ ಓದಿ ತಿಳಿದೊಡೆ ಪಾವನಂ! ಮುಟ್ಟಿ ಕಣ್ಮುಗಿದೊಡೆ ಅಮರಂ! ಅರಿತು ಧರ್ಮವಾಚರಿಸಿದೊಡೆ ಪುಣ್ಯಾತ್ಮರುಂ! ಪಾಪಮುಕ್ತರುಂ! ಇಂತಿರವೊಂದು ಜೀವನ ಪುಣ್ಯವಾಹಿನಿಯೊಳಿರ್ಪ ಸುಕದುಕ್ಕದ ಪರಮ ಪದದ ಕಲ್ಲು ಕಲ್ಲುಂ ಸಾಲಿಗ್ರಾಮಗಳೆವಲಂ! ಇಂತಪ್ಪ ಭಾವ ರಸಜ್ಞತೆಯಿಂ ಪೊದಳ್ದುದೀ ಚೆಂಕೃತಿ, ಬಾಗಮನೆ ಚನ್ನೇಗೌಡಾರ್ಯ ಮತ್ತಂ ಸಹಧರ್ಮಿಣಿ ಪಾರ್ವತಿಯವರ ಗರ್ಭಾಂಬುಧಿಯಲಿ ಚತುರ್ಥ ಕುಡಿಯೆನೆ ಸಂಜನಿಸಿದ ಕವಯಿತ್ರಿ ಮಲ್ಲಿಕಾ ಕಾವ್ಯ ಕಾನನದೊಳ್ ಅರಳ್ದ ಮಿಡಿವೊಗ್ಗು ಕಣಾ! ಭಾವುಕರ್ಗೆ ರಸಾನ್ನಮುಪ್ಪಂತೆವೊಲ್ ವಿರಚಿತ ಕೃತಿಯಿದು ಸ್ವರಚಿತಂ.

ಏವಂ ಒಡಲ್ಗಿಚ್ಚು ಸೋರ್ದು ಮಣ್ಣಾಗೆ ಕಾಲವಹಿಲಂ ತಿಳಿಪಲಕ್ಕುಮೆಂದು ಚಳಕ್ಕನೆ ಜಾರಿದಂ ಕೋಲ್ಗುರು. ಚಂಡ ಪ್ರಚಂಡ ರಣದಗ್ಗಿಯಂ ಪಾಯಲಾರದೆ ರಣಕೆ ಬೆನ್ನಂ ತೋರ್ದರೆನಿತೊ ಪಡೆವಳರ್. ಮಿಕ್ಕುಳಿದ ರಾವುತರ್ ಮಾವುತರ್ ಬಗೆಗೆಟ್ಟು ಹಿಂದು ಮುಂದು ಕೊರಚಾಡಿ ತೇಂಕಾಡಿದರ್. ಕೆಲರ್ ಬೆದರಿ ಬೆಂಡಾಗಿ ಮುಂಬಟ್ಟೆಯಿಲ್ಲೆಂದು ಕಂಗೆಟ್ಟು ನಿಟ್ಟುಸಿರ್ಗರೆದರ್.

ದುಶ್ಶಾಸನನಿಂದೆ ಕುರುಪತಿಯಪ್ಪಣೆಯಂ ಅರಿತು ಚಣಂ ಯೋಚಿಸಿದ ಆಚಾರ್ಯರ್ಗಂ ನಿಟ್ಟುಸಿರ್ವಿಟ್ಟು–ಕೇಳ್, ದುಶ್ಶಾಸನ! ನಾಮುಂ ಹಂಗಿಗರಾದೆವಾಳ್ವಂಗೆ. ಎಮ್ಮ ಪೌರುಷಮಿಂದು ಹಿಮ ವಾಯ್ತು. ವಿಧಿಯಿಲ್ಲಂ. ಇನ್ನುಮಿಂತು ತಾಳಲಾಸಲ್ಲಂ. ಇದಿರ್ವೆತ್ತಾನಿರ್ಪೆಂ; ಶಲ್ಯನಂ ಎಡವಂಕದೊಳಿಟ್ಟು ಬಲವಂಕದೊಳ್ ಕೃಪ ಶಕುನಿಯರಂ ಕಾಪಿಕ್ಕುವೆಂ. ನೀಂ ಕುರುರಾಯರಂ ಬೆಂಬಲಿಸು ಅಶ್ವತ್ಥಾಮನೊಡಂ. ಸೂತಪುತ್ರನಂ ಜೆಂಗಪೆಯಿಂ ಅಭಿಮನ್ಯುವಿನ ಕೈಯ್ಯ ಕಾರ್ಮುಕಮಂ ಕತ್ತರಿಸಿ ಕೆಡಗೆ ಕಳಿಪು! ೩೧೧

ದುಶ್ಶಾಸನಂ–ಅಕ್ಕೆ ಗುರುವರ್ಯ. ಕರ್ಣನಂ ಕರೆತರ್ಪೆಂ. ನೀನಿದನವಂಗೆ ಬೆಸಸಲಕ್ಕು.

ಆಗಳಲ್ಲಿಗೆಯ್ತಂದ ಕೌರವರಾಯನಾಯೋಜನೆಗೊಪ್ಪಿ ಸಂಕೆ ವಿಟ್ಟು ಕರ್ಣನ ನೀರೀಕ್ಷೆಯೊಳಿರ್ದಂ. ಮತ್ತಾಗಳಿಗೆಯೊಳ್ ಕರ್ಣಂ ಎದುರ್ಗೆತ್ತ ಬಳಿಕ್ಕಂ ಬಳಿಗೆ ಬಾರೆಂದು ಕೈವೀಸಿ ಕರೆದು ಮೆಲ್ಲನುಸಿ ೩೩೦ ರ್ದಂ–ಎಲೈ ಕರ್ಣ! ನೀನರಿತಿರ್ಪೆಂ, ಇನ್ನಿವನಂ ಇದಿರ್ಚಿ ಗೆಲ್ವುದ ಸಾಧ್ಯಮೆಂಬುದಂ. ನೀಂ ಸದ್ದಿಲ್ಲದೆ ಪಿಂಗಡೆಗೆಯ್ದು ವೈರಿಯ ಕಾರ್ಮುಕಮಂ ಕತ್ತರಿಸಿ ಕೆಡಗೈ !

ಕರ್ಣಂ–ಏಂ ಏಂ ಕುರುರಾಯ? ಬೆಂಗಡೆಯಿಂದಾಂ ಬಿಲ್ಲಂ ಕತ್ತರಿಪುದೆಂದೊಡೇಂ ? ಈ ಪೊಲ್ಲದ ಸಲ್ಲದ ಕಜ್ಜಮನೆಂತಾಂಗೆ ಯ್ವೆಂ ? ಅನೀತಿ ಅಧರ್ಮವನೆಂದುಂ ಮಾಣ್ !

ರೋಸದಿಂ ಕಟ್ಟುರದಿಂ ಬುಸುಗುಡುತುಂ ನುಡಿದ ಕರ್ಣಂಗೆ ದ್ರೋಣಾಚಾರ್ಯಂ ತಳ್ಕೈಸುತಿಂತೆಂಗುಂ–ಸೈರಿಸು ಕರ್ಣ ! ಈ ಯೊಂದು ಬೆಸನಂ ನಾಡಿನೇಳ್ಗಿಗಲ್ತೆ ? ಮತ್ತಮಾ ಸಾಯಿರ ಸಾಯಿರ ಸಾಸಿಗರ ಉದ್ಧರಣಕಲ್ತೆ ? ೩೩೦

ಕರ್ಣಂ–ಹಾ, ಇದೆನ್ನಿಂದ ಅಸಾಧ್ಯಂ ಆಚಾರ್ಯ !

ದ್ರೋಣಾಚಾರ್ಯ–ಅಂತೆಂದೊಡೆಂತೈ ಕರ್ಣ ? ಕುರುಕುಲದ ಸೊಮ್ಮುಗಿಡಿಸಿ ಪದ್ಮವ್ಯೂಹಮಂ ಬಗ್ಗುಬಡಿಯುತಿರ್ಪ ವೈರಿಯಂ ನೀನಿನ್ನೆಬರಂ ಬದ್ಧಕಂಕಣದಿಂ ಎದಿರ್ಚಿ ಸಾಸಂಬಟ್ಟುದೆ ಸಾಲ್ಗುಂ. ಇಂ ರಣವಿಜ್ಜೆಯಂ ಸೂಕ್ಷ್ಮದೊಳೆಸಗದಿರ್ದೊಡೆಮಗೆ ಉಳಿಗಾಲಮಿಲ್ಲಂ ; ಚಣಂ ಮಿಂಚಿದೊಡಂ ದುರ್ಗತಿಯುಂ ಕಾದಿರ್ಕುಂ. ಈಗಳೆ ಚೆಚ್ಚರದಿಂ ಕಜ್ಜಮನಡರ್ಚಿ ರಣಶಾಂತಿಯಂ ಪಾಲಿಕುಂ.

ದುಶ್ಶಾಸನಂ ಬಳಿಸಂದು ಅವಸರದಿಂ ಏರುದನಿಯೊಳ್ ಕೇಳಿಸಿದಂ ಕರ್ಣ–ನೀಂ ಬಿಲ್ಲಂ ಕತ್ತರಿಸವೇಳ್ಕುಂ. ಈಗಳಿಂತಪ್ಪ ಅಂಕೆ ೩೪೦

ಸಂಕೆಯುಂ ವ್ಯರ್ಥಂ, ಪೊ ಪೊ ! ಪಿಂತಿರ್ದು ವೈರಿಗರಿಯುದವೊಲ್
ಈ ಕಜ್ಜಮನಡರ್ಚು.

ಇಂತಸವಸದಪ್ಪಣೆಗಂ ಪಡಿನುಡಿಯಲ್ಕೆ ಬಾಯುಂ ಬಾರದೆ
ಮನದೊಳ್ ಚಿಂತೆವಟ್ಟು ನಿಮಿರ್ನವಿರ್ ಗುಡಿಗಟ್ಟಿ ನೊಂದೆದೆಯುಂ
ಡವಡವಿಸೆ ಬಡಿಗೋಲ್ಗಳಂ ಕೂರ್ಗೋಲ್ಗಳಂ ಮಾಡಿಗೆಯೊಳಿಕ್ಕಿ
ಬೇರೆ ಗತಿಗಾಣದೆ ತಕ್ಕಿನ ಸರಳಂ ಪೂಡಿ ಪಿಂಗಡೆಗೈದಂ. ದ್ರೋಣಂ
ಎದುರ್ವೆತ್ತು ಮಾರಾಂತು ನಿಂದು ನೋಳ್ಪ ಕಣ್ ಜಿಕ್ಕಸಬಡುವಂತು
ಕಕ್ಕಸದನಿಯಿಂ–ಎಲೆಲೆ, ಮಟ್ಟು ಮೀರಿದ ಮುಮ್ಮಡಿ ಮಾಯ
ತನದ ಕೂಳ ! ನೀನಹುದು ದಿಟ್ಟತನದ ಧೀರಂ ! ಕಲಿತನದ ಕಲ್ಕಿ!
ಕೇಳ್ ನೀನಿಂದು ಬರ್ದುಂಕುಳಿದೊಡೆ ಮುಂದೆಂದಾದೊಡಂ ನಿನ ೩೫೦
ಗಕ್ಕುಂ ಶುಭಂ! ಆವೊಂದು ಶುಭದರಿಕೆಯೊಳ್ ಶರಣೆಂದು ಕೈಮು
ಗಿದು ಕಣ್ಮುಗಿದು ತಲೆ ಮಣಿದು ರಣಕಂ ಚಲಕಂ ಬೆಂಗೊಟ್ಟು
ಪೋಗೈ ! ಪಸುಳೆಗೇಕೆಲೈ ರಣರಂಗದ ರಣಗೋಳು ?

ಆಗಳಾ ಮಾತಿಂಗೆ ಅಭಿಮನ್ಯು ತೆಕ್ಕನೆ ಕನಲ್ದು ಬಡಿ
ಗೋಲ್ಗಳಿಂದಾತನ ಬಡಿಗೋಲಂ ಪೊಯ್ದು ಪುಡಿಪುಡಿಗೆಯ್ದು–
ಆಚಾರ್ಯ! ನೀಂ ಗುರುವಿರ್ದು ಪಿರಿಯನಿರ್ದು ಇಂತೆನಲಕ್ಕುಮೆ?
ಹೂನ್ಯರ್ ಮಾನ್ಯರ್ ಹದ್ದು ಮೀರವೆ ಬದ್ಗೊಳಿಕರ್ಚ್ಚಂ ! ಇದೇಂ
ಎನ್ನ ದಿಟ್ಟ ಪ್ರಜ್ಞೆಯ ಪಡಿಸಣವೊ ? ಮೋಣಿನ್ನಾವ ಅಂತ್ರತಂತ್ರ
ಮೊ ? ಆವ ಕುಮ್ಮಕ್ಕಿರ್ಕುಂ ನಿನ್ನೊಳ್ ? ಇದೊ ಕಂಡು ಕಾಣ
ದಂತು ಗುರಿಗೊಂಡು ಮೂಡಿವರ್ಪ ಎನ್ನ ಪಡಿಸರಳ್ಗೆ ಎರ್ದೆಗೊಟ್ಟು ೩೬೦
ಉತ್ತರಿಸೈ. ಸಲ್ಲದ ಪೊಲ್ಲದ ನುಡಿಯಿಂ ತಿಕ್ಕೆತೆಕ್ಕೆಯಾಡುವ ಮಾಟಂ
ಸಾಲ್ಗುಂ.

ದ್ರೋಣಾಚಾರ್ಯಂ– ಎಲ್ಲಂ ಬಿದಿಯ ಕಟ್ಟುರದ ಮಾಯ
ದಾಟಂ ಕಣ !

ಈ ನುಡಿಗಟ್ಟಿಗೆ ಮಣಿಯದೆ ಅಭಿಮನ್ಯು ಬಿಲ್ಲನಾರಿಯಂ
ಬಿಗಿವಿಡಿದು ಬಿಡಿಸರಳಂ ಪೂಡಿ ಆಕರ್ಣಾಂತಂ ಸೆಳೆದುವಿಟ್ಟಂ.
ಒಡನೊಡನೆ ಸರಳ್ಗಳುಂ ಘೋರರಾಕ್ಷಸನ ಪೊದರ್ದಲೆಯಂತೆ ರಣ
ರಂಗಮಂ ಮುಸುಂಕಿ ಕತ್ತಲೆಗವಿಯೆ ಗಜ ತುರಗಂಗಳ್ ಬೆರ್ಚಿ
ಮಿಡುಕಿದುವು. ಸಾರಥಿಗಳ್ ಅಳ್ಕಿದರ್. ಅತಿರಥರ್ ಕಂಗಾಲಾ
ದರ್. ಎದುರುವಕ್ಕದ ಮರಿಯಾನೆಯ ಬಲ್ಪಿನ ವೈಪರೀತ್ಯದಿಂ. ೩೭೦

ಅನ್ನೆಗಮತ್ತಲ್ ಕರ್ಣಂ ಮನಮಂ ಕಟ್ಟಂಕೆಯೊಳಿಟ್ಟು
ಪಿಂಗಡೆಯಿಂ ಅಭಿಮನ್ಯುವಿನ ಚಾಪಮಂ ಕಂಡರಿಸಲ್ ಗುರಿಯಿಟ್ಟು
ಕಾದಿರಲ್, ಅಶ್ವತ್ಥಾಮ ಕೃಪ ಶಲ್ಯರಂ ವಾಮಾಂಗದೊಳಿಕ್ಕಿ
ದ್ರೋಣಾಚಾರ್ಯಂ ಸೆಳೆವಂಬುಮಂ ಸೆಳೆದುವಿಟ್ಟಂ. ಅತಿರಥ
ರೆನಿಪರ್ ಕೋಲ್ಗುರುಳೆಗನಿಪರ್ ದಮ್ಮ ಸಂಕೆಯಿಲ್ಲದೆ ಭೀತಿನೀತಿ
ಯಣಮಿಲ್ಲದೆ ಮುಂದಿರ್ದು ಮುತ್ತಿ ಏಕಾಂಗಿಯಂ ರೋಷದಿಂ
ಗಂಡಗರ್ವದಿಂ ತಾಗಿ ಚೂಣಿಯ ಕೇಣಿಯ ಸೊರ್ಕುಂಜೆರ್ಕಾಗಿ
ನವಿರ್ ನಿಮಿರ್ದು ಕಣ್ ಕೆಕ್ಕರಿಸಿ ಕನಲ್ದು ಕೆಂಪಡರ್ದು ಬೆವರ್ನೀರ್
ಬಸಿಯುತುಂ ಮತ್ತಂ ಕೆಣಕಿದರ್ ಪೊಣರ್ಕೆಯಂ; ಕಾರ್ಮುಗಿಲ್ಗಳ್
ಬೆಳ್ಮುಗಿಲ್ಗಳಂ ತಾಗಿ ಸಿಡಿಲ್ಗರ್ಜನೆಯುಮಂ ಪೊಣ್ಮಿದವೊಲ್. ಇಬ್ಬಣಂ ೩೮೦
ಚೆಚ್ಚರದಿಂ ಭೋಂಕನೆ ಕೆರಳ್ದು ಮೊರೆದಬ್ಬರಿಸಿದಬ್ಬರಂ ಗಗನಂ
ಬೆತ್ತುದು ಏರ್ದನಿಯಾಗಿ. ಆಗಳಿರ್ಕಡೆಯೊಳ್ ಕೈಚಳಕಂವೆರ್ಚಿ
ಬೋಳೆಯಂಬಿನ ಸೂಳ್ಸರಿಯಂ ಬಡಿಗೋಲ ಜಡಿಯಂ, ಬಿಡಿ ಸರಳ
ದಿಟ್ಟ ಸೋನೆಯಂ ಕರೆದೇಸಾಡಿದರ್. ಅಭಿಮನ್ಯು ತನಗಂ ಬೆಂಬಲ
ಮಿಲ್ಲದಿರ್ದೊಡಂ ಅಳ್ಕದೆ ಬಳ್ಕದೆ ಮಿಂಡೆಳ್ದು ತಾಗಿ ಕಾದಿ ಪಟು
ಭಟರಂ ಜವನಗರಿಯ ಪಡಿವಳರಾಗಿಸಿದಂ. ಅನಿತರೊಳ್ ಪಿನ್ನಿಲೆ
ಯಿಂ ರವಿಸುತಂ ಕಳ್ಳನೊಳ್ ಕಳ್ದು ಕೂರ್ಬಾಣಮಂ ತೊಟ್ಟು
ಪಾರ್ಥಸೂನುವಿನ ಕೈಯ ಚಾಪಮಂ ಕತ್ತರಿಸಿದಂ! ಆಗಳ್
ಘೋರ ಸಬುದಂಗೆಯ್ದು ಪೆರ್ಬಿಲ್ಲುಂ ಮುರಿದು ಮುಕ್ಕಡಿಯಾಗಿ
ಕೈಬಿಡಲ್ ಸೌಭದ್ರೇಯಂ ಅಚ್ಚರಿಯಿಂ ಬೆಕ್ಕಸಂಬಟ್ಟು ಮೊಗಂದಿ ೩೯೦

ರುವಿ ಕಣ್ಣಾಲಿಯಂ ಕರ್ಣನೆಡೆಗೆ ನೆಟ್ಟು ಮೊಗದೊಳ್ ಕಿರುನಗೆಯಂ
ಕೇವಣಿಸಿ ತೋರ್ಸ್ವರಳನೊಲಿದಿಂತು ಕೇಳಿಸಿದಂ–ಅಹಃ ಪೆಂಬೇಡಿ!
ಆವ ಕೋಲ್ಗುರುವಿಂ ಕಲ್ತೈ ಇಂತಪ್ಪ ನಾಣ್ಗೆಟ್ಟ ಬಿಲ್ ವಿಜ್ಜೆಯಂ?
ಸೊರ್ಕಿನ ಜವ್ವನಿಗರ್ ಮುಂದೆಯ್ದು ತಿಕ್ಕಿ ತೆಕ್ಕೆಯಾಡುತಿರಲ್
ನೀನೇಂ ಸಲ್ಲದ ಪೊಲ್ಲದ ಕಜ್ಜಮಂ ಕೈಕೊಂಡೆಯ್ಯೆ? ಚೀಃ! ಚೀಃ!
ನರಿನಾಯ್ಗಳಂತೆಸಗುವೀ ವಿಗಡತನಂ ಸಲ್ವುದು ನಿನಗಂ ಗಡ!

ಅದರ್ಕಾ ಕರ್ಣಂ ನಾಣ್ಚಿಕೆಯಿಂ ನಲುಂಗಿ ಅಳ್ಕಿಬಳ್ಕಿ ತೆಕ್ಕನೆ ಮೊಗಂಬಾಡಿ ಬಣ್ಣಂಗೆಟ್ಟು ಮೊಗದಿರುವಿ ಚೆಚ್ಚರದಿಂ ಪಿಂಜರಿದಂ. ಒಡನೊಡನೆ ದ್ರೋಣಾದಿ ಆಕೆವಾಳರ್ ಒಕ್ಕೊಡಿ ಕಡುಗಿ ಜರ್ವಿ ಬಡಿದು ಅರ್ಜುನ ಸುತನಂ ತಾಗಿದರ್ ಅಟ್ಟಹಾಸದಿಂ! ತುಡುಕು (೪೦೦) ವೆನೆ ಚಾಪವಿಲ್ಲಂ, ಕೂರ್ವಾಳಿಲ್ಲಂ. ಏಂಗೆಯ್ವುದೆಂದು ಯೋಚಿಸುವನಿತರೊಳ್ ದ್ರೋಣಾಚಾರ್ಯಂ ಪೊಂದೇರಂ ಕಸಿದಂ. ಅಶ್ವತ್ಥಾಮಂ ಸಾರಥಿಯಂ ಸೆಳೆದು ತಲೆಹೊಯ್ದು ಬಿಸುಟಂ. ಕೃಪಂ ತುರಗಮಂ, ಶಲ್ಯಂ ತೆಕ್ಕೆಯವನಂ ಪೊಯ್ದು ಬೊಬ್ಬಿರಿದರ್. ಹಾ ಹಾ! ಎಂದುದಮರಗಣಂ. ಹೋಯೆಂದುದು ಕುರುಬಲಂ. ಅಭಿಮನ್ಯು ಮುಂತೇನೆಂದು ಅತ್ತಮಿತ್ತಂ ಕೆಂಗಣ್ಣಿಂ ನಿಟ್ಟಿಸಿದಂ. ಮುಂದಡಿಯಿಡುವೆನೆನೆ ರಥತುರಗಮಿಲ್ಲಂ. ಸಾರಥಿಯಿಲ್ಲಂ, ತೆಕ್ಕೆಯವನಿಲ್ಲಂ, ಅಸ್ತ್ರಶಸ್ತ್ರಂಗಳಿಲ್ಲಂ. ಮುಂಗಡೆಯೊಳ್ ಕುರುಪಡೆ ಬೊಬ್ಬಿರಿದು ಮೇಲ್ವಾಯ್ದು ನುಗ್ಗಿ ಬರುತಿರೆ ಬೇರೆ ದಾರಿ ಕಾಣದೆ ತೆಕ್ಕನೆ ಬರಿಗೈಯೊಳ್ ತಾಗಿ ಕಾದಿ ಸೋದಿ ಎದುರಾಳಿಯಂ ಒದ್ದು (೪೧೦) ಕೆಡವಿ ಕೈಯ ಕೂರ್ವಾಳಂ ಮಿಂಚಿನ ವೇಗದಿಂ ಕಸಿದು ಕೈಕೊಂಡು ಮೂಗಡೆಯುಂ ತಿರ್ರನೆ ತಿರುವುತುಂ ಅರಿಕುಲಮಂ ಕೊಚ್ಚಿ ಕಂಡರಿಸಿ ದಿಂಡುರುಳ್ಚಿ, ಕೂರ್ವಾಳಂ ಜಳಪಿಸುತುಂ ಮುಂಬರಿದಂ ಘೋರ ರೂಪಿನ ರಣ ಕಣದೊಳ್.

ಹಾ, ಈತನಿರೆ ಕಲ್ಪಾಂತಕಂ ಅಕಾಂಡತಾಂಡವ ರುದ್ರನ

ಪೆಸರಿಸುವುದರಿಂದೇಂ? ಎಂದೆಂದು ತಂತಮ್ಮೊಳ್ ನಡುನಡುಗಿ
ತತ್ತರಿಸಿ ಪಿಂಜರಿಯೆ ಅಭಿಮನ್ಯು ಪೆಜ್ಜೆಪಜ್ಜೆಗೆ ನೆಗಳ್ತೆವಡೆದು
ಮುಂಕೊಂಡು ಕೂರ್ಗಳಂ ಬೀಸಿವೀಸಿ ಸಿಕ್ಕಿದೆಡೆಕೊಚ್ಚಿ ಪೆಣಗಳಂ
ಚೆಲ್ಲಾಡಿದಂ ! ಪೊಳೆಪೊಳೆವ ಕೂರ್ಗಳದಲುಗು ತಣಿದು ದಣಿ
ವನ್ನೆಗಂ ! ದಸದಿಸೆಗೊಡೆಯರುಂ ಬೆರ್ಚುವಂತು ; ರಣಕಾಳಿ ತೇಂಕಿ ೪೨೦
ಡುವಂತು; ಕುರುಭೂಮಿ ಕೆನ್ನೆತ್ತರಿಂ ಕೆಂಗಲಿಸುವಂತು ನಡೆದತ್ತು
ಬಲ್ಪಿನೇಳ್ಗೆಯ ಬೀರತನದ ಸಾಸಂ !

ಕುರುರಾಯಂ ಬಗೆಗೆಟ್ಟು ಮನಂ ಬೇವಾಗಿ ಗಾರಾಗಿ ಕುಲ
ದೈವವಂ ಧ್ಯಾನಿಸುತುಂ–ಹೇ ಮಾದೇವ ! ನಿನ್ನ ನಿಚ್ಚಟದ ಭುಕುತಿ
ಯೊಳೆ ನೆಮ್ಮಿ ನಿನ್ನ ಮುಂಕು ಮಾಯೆಗೊಳಗಾಗಿ ಇಂತೊಂದು
ಪೊಲ್ಲ ಕಜ್ಜಮಂ ಕೈಕೊಂಡೆಂ. ಎನ್ನ ಸೋಲುಗೆಲುವು ನಿನ್ನದೈ.
ನೀನೇ ಎನ್ನೊಡೆಯಂ. ಪಗಲ್ ಇರುಳ್ ಕಾವದೇವಂ ! ಇಂದಿನ
ಪೊಣರ್ಕೆಯೊಳ್ ನೀನೆ ಕಾಯಲಕ್ಕುಂ. ಎನ್ನ ಕುಮಾರರಂ ನಿನ್ನರ
ನೆಮಯ ಕಾಪಿಗೆಂದುಯ್ದೆಯಲ್ತೆ? ಹಾ, ಇಂ ಸಾಲದೆ ? ನೀಂ
ಕೈವಿಟ್ಟೊಡೆ ಇನ್ನಾರ್ ಕಾವರ್ ? ಇನಿತೊಂದು ಕಷ್ಟನಷ್ಟಂಗಳಂ ೪೩೦
ಸೈಸಿಯುಂ ಗೆಲ್ಮೆಯುಂ ಕೈಗೂಡದಿರೆ ಬಾಳ್ವುದೆಂತೆನ್ನೊಡೆಯಾ !
ಸಂಕಟಂ ಸಾಲ್ಗುಂ; ಸಂಕಷ್ಟಂ ಸಾಲ್ಗುಂ ; ನೀನೆ ಕಾಯಲಕ್ಕುಂ !
ಎಂದು ತನ್ನೊಳ್ ತಾಂ ಭಕುತಿಯಿಂ ಪ್ರಾರ್ಥಿಸಿದಂ. ಬಳಿಕ್ಕಂ
ವೈರಿಯ ಕೈಚಳಕಮಂ ಕಣ್ಣೊಳ್ ಕಣ್ಣಿಟ್ಟು ನೋಡುತುಂ ಅಚ್ಚ
ರಿಯ ಕಟ್ಟುಬ್ಬಸದಿಂ ಮತ್ತಿಂತೆಂದಂ ಹಾ, ಮಾದೇವ ! ಇಂತು
ಕೈಯ ಚಾಪಮಂ ಕಳ್ದು ಕತ್ತರಿಸಿಯುಂ ಸೋತನೆನಲಕ್ಕುಮೆ
ಕಲಿಯ ಕಲಿಯುಂ ? ಎಂತಿವನ ಕೈಯ ಕೂರ್ಗಳಿಂ ಪಾರಾಗ
ಲಕ್ಕುಮೊ ಕಾಣೆಂ. ನೀನೆ ಕಾಯ್ವೈ ಮಾದೇವ ! ಎಂದುಮೆಂದು
ಭಕುತಿಯಿಂ ತಲೆಮಣಿದಂ. ಮತ್ತಾಗಳ್, ಎಡಬಲದೊಳಿರ್ದ
ಪಟುಭಟರ್ ಅತಿರಥರ್ ಮಹಾರಥರ್ ಸಾಮಂತರ್ ಮುಂತಪ್ಪ ೪೪೦

ಬೀರರಂ ಪುರಿದುಂಬಿಸುತಿಂತೆಂದಂ—ಈಗಳ್ ನೀವೆಲ್ಲರ್ ಒಗ್ಗೂಡಿ ಮುಂಕೊಂಡು ನಿಲ್ಲಲಕ್ಕುಂ! ಇಂತೇಂ ವಿಳಂಬಂ? ಬೆದರದೆ ಮುನ್ನುಗ್ಗಿ ಅರಿಯುಂ ಕೊಚ್ಚಿ ದೆಸೆ ಮೂಲೆಗಳ್ಗೆ ಬಿರ್ದಿಕ್ಕಿಂ! ಚೀ, ಇಂತಿದೇಂ ಭಯಂ? ನರಂ ಪುಟ್ಟುಗುಂ ಸಾಯಲಲ್ತೆ? ಮತ್ತೇಂ ಜೀವದಾಸೆ? ಪೋ ಪೋಗಿರೆ!

ಆ ನುಡಿಯಂ ಕೇಳ್ದು ಆಕೆವಾಳರ್ ತಂತಮ್ಮ ಅಸ್ತ್ರಶಸ್ತ್ರಂಗಳಂ ಕೈಕೊಂಡುಂ ಹೋಯೆಂದುಂ ಘೇಯೆಂದುಂ ನುಗ್ಗಿದರ್ ಅಭಿಮನ್ಯುವಿರ್ದೆಡೆಗೆ. ಇಂತಿಂತು ಮುಂದೆಯ್ದು ಮುಂದೆಯ್ದು ಎಡಬಲದೊಳೌಂಕಿ ಮುಸಗುತಿರಲ್ ರಿಪುಬಲವಾರ್ಧಿ ಬಡಬಾನಲನಪ್ಪಂತೆ ಪಾರ್ಥಸೂನು ದಿಟ್ಟತನದಿಂ ರೋಷದಿಂ ತಾಪದಿಂ ಗಳಿಗೆಗಳಿಗೇಳ್ಗೆ ವೆತ್ತು ಕೂರ್ವಾಳಿಂ ಅಟ್ಟಟ್ಟಿ ಪೊಯ್ದು ವಾಜಿಗಳ ಕೈದುಗಾರರ ದಂತಿಗಳ ಮಾವುತರ ಸಾವಂತರ ಪಡೆವಳರ ಸಂದಣಿಯನೊರೆಸಿದಂ ನೆಲಗಚ್ಚುವಿನಂ! ಗುಳಿಕ ಚೌಡಿ ಮುಂತಪ್ಪ ಕಾಡ ದೆವ್ವ ದೇವರ್ಗೆ ಬಲಿಯೀವ ಮಾಳ್ಕೆಯಿಂ! ಬಳಿಕ್ಕಮಾ, ಕುರುಬಲಂ ಸುತ್ತಮೆಲ್ಲೆಡೆಯುಂ ನಿಡುಗೋಂಟೆಯುಂ ಕಟ್ಟೆ ಕೊರ್ವಿನಿಂ ರೊಚ್ಚಿನಿಂ ಜರ್ವಿ ನುಗ್ಗಿ ಬರೆ ದಿಗ್ದಿಗಂತಿಗಳಂ ಎಚ್ಚರಿಪಂತೆ ದಂತಿಗಳ್ ಘೀಳಿಡೆ ಬವರಂ ಗಜಬಜಿಸಿದುದು. ಕೇರಳ ನೃಪಾಲರಂ, ಅಂಗ ವಂಗ ಕೌಶಲ ನೇಪಾಳ ಸಾವಂತರಂ, ಕಳಿಂಗ ಕಾಶ್ಮೀರ ದೇಶಿಗರಂ ಪೊಯ್ದುವ್ವಳಿಸಿದನಮಮ ಕಲ್ಪಾಂತ ರುದ್ರನೋಲ್! ಇದೇಂ ಜವನಗರಿಯಿಂ ಯಮಧರ್ಮಂ ಬಂದಿಳಿದನೊ ಎಂದಚ್ಚರಿಬಡುವಂತು! ಅಭಿಮನ್ಯು ಕುಗ್ಗದೆ ತಗ್ಗದೆ ಮನಃಪ್ರಾಣ ದಣಿವನ್ನಂ ಕೂರ್ವಾಳ್ ತಣಿವನ್ನಂ ಪೋರುತಿರೆ ಪೇಳಲೇನದಂ? ಜವನಾಡು ತಿರ್ರನೆ ತಿರೆಗಿಳಿತಂದ ಗತಿಯೊಳ್ ಕೆಮ್ಮನೆ ದಿಂಡುರುಳ್ದು ನರಳ್ದು ಪೊರಳ್ದು ಅಸುವಂ ತೆತ್ತವರೆನಿತೊ ಪೇಳ್ವವರಾರ್? ಮತ್ತಂ ನಡೆವಾಡನಡರ್ದು ಪೋಪವರದೊಳ್ ತನತನಗೆ ಅಯ್ಯೊಯೆಂದು ಒರಲ್ದು ಚೀರ್ದು ಬೇನೆಬಡು

೪೫೦

೪೬೦

ತೊದೆದಾಡುವ, ಕಟ್ಟುಬ್ಬಸದಿಂ ಬೇವ, ಮರುಮರುಗಿ ಕುದಿವ,
ಸೀದು ಸೀಕರಿವೋದ, ಕೊಳೆತು ನಾರುವ, ನೆತ್ತರ್ ಕಾರುವ, ಕೆನ್ನೀರ್
ಸೋರುವ, ನೊಂದು ನವೆವ, ತಲೆ ಬಿರಿದ, ಕೀಲ್ ಮುರಿದ,
ಸೂಲದಿರಿತಕೆ ಕಣ್ಣಳಿದ, ಬಾಯ್ ಪರಿದ, ಕೀವಿನ ಕೊಚ್ಚೆಯೊಳ್
ಬಿಳ್ದು ಪೇಸಿಕೆಯ ರೋಡೆಗರ ಹೀನಾತ್ಮರ ಎಣೆಯಿಲ್ಲದೊಗ್ಗರಮಂ
ದಾಂಟಿ ಮುಂಕೊಂಡು ಕಕ್ಕಸವಗೆಯಿಂ ಐದಿವರ್ಪ ಅರಿವಳಗದಿಂ
ಎರ್ದೆನಡುಗುವಂತಿರೆ ಅಭಿಮನ್ಯು ಲೆಕ್ಕಿಸದಿನಿತುಂ ಮುಂಕೊಳೆ ೪೭೦
ತುಡುಕಲಮ್ಮುವರಿಲ್ಲಂ ; ಬಲವಂಕದೊಳ್ ನುಗ್ಗಲ್ತಡೆವರಿಲ್ಲಂ ;
ಎಡವಂಕದೊಳ್ ಮುಸಕುವರಿಲ್ಲಂ; ಬೆಚ್ಚಿ ನೆತ್ತರ್ಗಡಲೊಳ್ ಚೆಂಡು
ತೇಲಿದಂತಾಯ್ತುಲಾ ರಿಪುದಳಂ ! ಇಂತೆಲ್ಲಂ ! ಕಣ್ಣಾರೆ ಕಂಡ ಕುರು
ಪತಿ ತನ್ನೊಳ್ ತಳಮಳಿಸುತುಂ ದುಶ್ಶಾಸನಂ ಕುರಿತಿಂತೆಂಗುಂ–
ತಮ್ಮಾ ! ಧನು ಮುರಿದ ಬಿಳಿಕ್ಕಂ ಇಮ್ಮಡಿಸಿತಿವನ ಬಲ್ಪಂ ! ಇಂ
ತಳ್ವಿದೊಡೆ ಅನರ್ಥಂ ಇಂತಪ್ಪ ಧೂರ್ತನಂ ಎಂತಾದೊಡೀಗಳೆ ಮು
ಗಿಸದಿರ್ದೊಡೆಮಗೆ ಉಳಿಗಾಲಮಿಲ್ಲಂ. ತೊಡು ಈಗಳೆ ಕೂರ್ಬಾಣ
ಗಳಂ !

ಆ ಮಾತಿಂಗೆ ದುಶ್ಶಾಸನಂ ತಲೆಯಂ ತೊನೆದು ಸಿಡಿದೆಳ್ದ
ವೊಲ್ ಅಡ್ಡೈಸುತಂ ಬಡಿಸರಳಂ ಸೆಳೆದುವಿಡೆ ಅಭಿಮನ್ಯು ಕೈಯ ೪೮೦
ಕೂರ್ವಾಳೊಳ್ ವಿಶಿಖಂಗಳಂ ಸದೆದೊಡಂ ಸರ್ವಾಂಗಂ ಶರಮಯ
ಮಾಯ್ತು ಸರಳಂ ನೆಡಲಿನ್ನಿಸಿತುಂ ಇಂಬಿಲ್ಲಮೆನೆ. ರವಿರಶ್ಮಿಯುಂ
ಕನ್ನೈದಿಲೆಯೊಳ್ ಪೊಳೆವಂತೆ ಹೊನ್ನರೆಯ ಹಿಳುಕುಂ ಮೆಯ್ಯೊಳ್
ಪೊಳೆದುದು ಹೊನ್ನಿನ ಸಿಂಗರದಂತೆ ! ಅಭಿಮನ್ಯು ನೆತ್ತರಿಳಿವ
ಮೆಯ್ಯಂ ಒದರಿ ಬಾಣಂಗಳಂ ಕೊಡವಿ ಅಬ್ಬರಿಸಿದಂ–ಇದೇಂ
ಅನ್ನೆಯದ ಅನೀತಿಯು ಪೊಣರ್ಕೆ? ನೀಮೇಂ ಕ್ಷಾತ್ರಕುಲಜರೊ ?
ದಾನವ ಕುಲಜರೊ ? ಕೂರ್ವಾಳಂ ಕರ್ವಾಳಿಂದಲ್ತೆ ಇದಿರ್ಚ

ಲಕ್ಕುಂ ? ಎಲ್ಲರೊಟ್ಟಗೆ ದೂರದಿಂ ಬಾಣಂಗಳ ಸೂಳ್ಸರಿಯು
ಲಕ್ಕುಮೆ ? ಸರಿಯುಲ್ಮಿದುಂ. ಕೂರ್ವಾಳಂ ಕೂರ್ವಾಳಿಂದಿದಿರ್ಚ
ಲಕ್ಕುಂ. ಆರಾದೊಡಂ ಕೂರ್ವಾಳಿಂದಿದಿರ್ಚುವ ಧೈರ್ಯ ೪೯೦
ಸ್ಥೈರ್ಯವಿರ್ದೊಡೆ ಎದುರ್ಗೆಯ್ತನ್ನಿ !

ಆ ಮಾತಿಂಗಾರುಂ ಪಡಿನುಡಿಯದಿರೆ ಅಭಿಮನ್ಯು ಅಳ್ಕದೆ
ಬಳ್ಕದೆ ಮೆಯ್ಯನೋವಂ ಲೆಕ್ಕಿಸದೆ ನೆಲ್ಪಲ್ಲಂ ಕೊಯ್ವವೋಲ್
ಕೂರ್ವಾಳಿಂದರಿಪಡೆಯನವ್ವಳಿಸಿ ಮರಳುವ ಲಾಗಿನೊಳ್ ಖಂಡೆ
ಯುವಂ ಕೆಯ್ಯಕೂರ್ವಾಳಂ ಪೊಯ್ದು ಕಂಡರಿಸಲ್ ಹಾಯೆಂದು
ಜಿಗಿದುಂ ಗತಾಸುವಿನ ಕೆಯ್ಯ ಗದೆಯಂ ಕೈಕೊಂಡಬ್ಬರಿಸಿ ರಿಪು
ವನಧಿಯನಪ್ಪಳಿಸಿ ಕರ್ಣನಂ ಹಿಮ್ಮೆಟ್ಟಿಸಿ ಸೌಬಲನಂ ಚೆರ್ಚಿ
ಪಜ್ಜೆಪಜ್ಜೆಗೆ ಮುಂಕೊಂಡು ಎದುರ್ಗೆಯ್ದು ಸಿಕ್ಕವರಂ ಜಡಿಕುಟ್ಟಿ
ದಿಂಡುರುಳ್ಚಿ ಗಂಡಗರ್ವದಿಂ ಬಲ್ಪಿನ ಬೀರತನದಿಂ ಕೂರ ಸಿಂಗನೆಂ
ತಂತು ಕೊಣಕಿ ಕೆಣಕಿ ಬೊಬ್ಬಿರಿದು ಪೊಯ್ದು ಕಡುರೋಷದಿಂ ೫೦೦
ಪರಿತಾಪದಿಂ ಜವ್ವನದ ಪುರುಡಿಂ ಬಡಿದಪ್ಪಳಿಸಿ ಒದ್ದು ನೂಂಕಿ
ನುಚ್ಚುನುರಿಗೆಯ್ದಂ !

ಗಂಡುಗಲಿಯನಿದಿರ್ಚಿ ಗನ್ನದಂಕಿಗಂ ಗೆಲ್ಲಲಕ್ಕುಮೆ ?
ಕಾಳ್ಕಿರ್ಚಂ ಪಾಯ್ದು ಪಾವು ಉಳಿಯಲಕ್ಕುಮೆ ? ಎಂದೆನುತುಂ
ಬೆಕ್ಕಸಂಬಡುವಂತಿರ್ದುದು ಅಮರಗಣಂ ನೆಟ್ಟನೋಟಮಂ ಕೀಲಿ
ಸದೆ ಬಾಯಮೇಲ್ಬೆರಳಿಟ್ಟು !

ಸಾವ ಭಟರ ಪ್ರಾಣಸಂಕಟದ ಗಾವರಂ, ಘೋರನೋವಿಂ
ಚೀರ್ವರ ಚೀರ್ದನಿಯುಂ, ಕಳೆದುಳಿದ ಕುರುಬಲದ ಹಾಹಾಕಾರಂ
ಒಕ್ಕೂಡಿ ಕಕ್ಕಸದಿಂ ಕರ್ಣಂಬೊಕ್ಕು ಅರಿಗಳೆರ್ದೆಯಂ ಜಂಕಿಸಿ
ದುದು ಜವಹುರಕ್ಕೆಣೆಯಾಗಿ. ಮತ್ತಂ ಪದುರ್ಶಾಗೆಗಳೊಟ್ಟಗೆ ೫೧೦
ಶಾಕಿನಿಡಾಕಿನಿಯರ ಮಂಡಲಿ ಅತ್ತಮಿತ್ತಂ ಸುಳಿದಾಡಿ, ಕಿರಿಯೊಳ್

ಸೂಸಿದ ಕಡಿಕಣ್ಣದಿಂ ಸುರಿದ ನೆತ್ತರಿಂ, ಜೆಲ್ಲಿದ ಕರುಳ್ಗೊಂಚಲಿಂ,
ಮುರಿದ ಮೂಳೆಯಿಂ, ಕಡಿದ ತೋಳ್ಗಳಿಂ, ಬೆರಳ ಕಳಕೆಯಿಂ,
ತಲೆಯ ಮೆದುಳಿಂ ಉಗುವ ಸವಡಿನುಣಿಸಿಂಗೆ ಬಾಯ್ದೆರೆದು
ಜೊಲ್ಲಂ ಸುರಿಸುತಿರ್ದುವು ಪಲ್ಮಸೆದು ಮಸೆದು.

ಕೌರವರಾಯಂ ಮನದೊಳಚ್ಚರಿಬಡುತುಂ—ಅಹ, ಏಂ
ಧೈರ್ಯಸ್ಥೈರ್ಯಂ? ಏಂ ಬಲ್ಪಂ? ಎಲ್ಲಿಯುಂ ಕಂಡು ಕೇಳ್ದರಿ
ಯದ ಬಲ್ಪು ಇವನೊಳ್ ಅಳವಟ್ಟುದೆಂತು? ಕನಲ್ದು ರೊಚ್ಚಿಗೆಳ್ದ
ಜವಂ ರೋಷದಿಂ ಪಾಶವನೆಳೆದಂತು ರೊಯ್ಯನೊಗೆದು ಕೊರಳ್ಗೆ
ತೊಡರ್ಚಿ ರಣಕಾಳಗೆ ರುಂಡಮಾಲೆಯಿಕ್ಕಿದನೊ ಎನೆ ಏಂ ಚಂಡ ೫೨೦
ಭಂಡತನಂ ? ಇನ್ನೇಂ ಗತಿ ? ಇನ್ನೇಂ ಬಟ್ಟೆ ? ಪಜ್ಜೆಪಜ್ಜೆಗುಂ
ಬಲ್ಪೇ ಬಲ್ಪು ! ಕೆಟ್ಟೆಂ, ಕೆಟ್ಟೆಂ ! ಎಂದೆನುತುಂ ಕೈಮಸೆದು ಮತಿ
ಮಸೆದು ಅವುಡುಗಚ್ಚಿ ನೋಡುತುಂ ಕರ್ಣನಂ ಕುರಿತು ಒಡಲ್ಗಿ
ಚ್ಚಿನಿಂ ಜವಿ ಕೇಳಿಸಿದಂ—ನೀನೆಂತಹ ಷಂಡನೊ ಇಂತೊರ್ವನಂ
ಎದುರ್ಚಲಾರದಂ ! ಛೀ! ಲೋಕದ ಲೋಗರ್ಗೆ ಕಾದಲೆಯಾಗ
ತಕ್ಕಂ! ಪೋ, ಪೋಗೆಲವೊ ಭಂಡ !

ಮತ್ತಾಗಳ್, ಕರ್ಣಂ ಕುರುಪತಿಯ ಕಕ್ಕಸದನಿಯ ಹೀಯಾ
ಳಿಕೆಯಿಂ ಕನಲ್ದು ರೊಚ್ಚಿನಿಂ ಮುಂಕೊಳೆ ಅಭಿಮನ್ಯು ಪಸಿದ
ಕೇಸರಿಯಂತೆ ಮೊರೆದು ಮೇಲೆಳ್ದು ರಥ ತುರಗಮಂ ಚಚ್ಚಿ
ಮುರಿದಿಕ್ಕಿ, ಮರಳ್ಚುವನಿತರೊಳ್ ದುಶ್ಶಾಸನಂ ಮೇಲ್ವಾಯ್ದು ೫೩೦
ಅಬ್ಬರಿಸಿ ಬರೆ ಅಭಿಮನ್ಯು ಗದೆಯಂ ತಿರುವುತೆ ಮುನ್ನುಗ್ಗಲೊಡಂ
ಪಿಂಜರಿದು ಕೆಕ್ಕರಿಸಿ ನೋಡುತುಂ ಬಿಲ್ಲಂ ಹೆದೆಯೇರಿಸಲಾ ದುಶ್ಶಾ
ಸನಂ, ಅಭಿಮನ್ಯು ಸಿಡಿದೆಳ್ದು ಚಂಗನೆ ಎಗರಿ ಗದೆಯಂ ರೊಯ್ಯನೆ
ತಿರುವುತುಂ ಎದುರ್ಚಿ ನಿಂದು—ನೀಂ ಬಿಲ್ಲಂ ಕೈವಿಟ್ಟು ಗದೆಯೊಡನೆ
ಸುಮ್ಮುಖನಾಗೈ! ಎಂದೆನುತಲವ್ವಳಿಸಲಾಗದೆಯು ಪೊಯ್ಲಿಂಗೆ ಸಿಲು
ಕದೆ ಪಾರಾದ ದುಶ್ಶಾಸನಂ ಸೈಗೆಟ್ಟು ಕೆಂಗಣ್ಣ ಕಿಡಿನೋಟದಿಂದಿ

ರಿಯುತುಂ ಸರ್ರನೆ ಪಿಂಜರಿದು ಬಿಲ್ಲಕೊಪ್ಪಿಂಗೆ ಪೊಸಮಸೆಯ ಕೂರ್ಗಣೆಯಿಕ್ಕಿ ತೆಗೆದೆಚ್ಚಂ. ಕರ್ಣ, ಕೃಪ, ಶಲ್ಯ, ದ್ರೋಣರೊಂದುಗೊಡಿ ಬಲ್ಪಿನ ಬಿಲ್ಗಳಂ ಕೈಕೊಂಡು ಬಡಿಗೋಲ್ಗಳಂ ತೆಕ್ಕನಳವಡಿಸಿ ಕಿವಿಮುಟ್ಟೆ ಸೆಳೆದುವಿಟ್ಟರ್ ! ೫೪೦

ಹಾ ! ಹಾ ! ಎಂದೊರಲ್ದುದು ಅಮರಗಣಂ.

ಹೋ ! ಎಂದು ದಸದೆಸೆಗೊಡೆಯರ್ ಮನಮರುಂಗಿ ತಹತಹಿಸಿದರ್.

ಸೌಭದ್ರೇಯಂಗೆ ತೆರೆವಿಡಿವೆನೆನೆ ಗುರಾಣಿಯಿಲ್ಲಂ. ಪೊಯ್ವೆನೆನೆ ಕೂರ್ವಾಳಿಲ್ಲಂ. ಚಣದೊಳ್ ಕೂರ್ಗಣೆಗಳ್ ಪೊಕ್ಕ ಎಳಮೈಕೆನ್ನೆತ್ತರ್ ಚೆಲ್ಲಿ ಸೂಸಿದುದು ಧಾರೆಧಾರೆಯಾಗಿ. ಆದೊಡಂ ಗದೆಯಂ ಅತ್ತಮಿತ್ತಂ ಬೀಸಿವೀಸಿ ತಡೆಗಟ್ಟೆ ಸಿಕ್ಕವರಂ ಸೆಂಡಾಡಿ ದಿಂಡುರುಳ್ಚಿದಂ !

ಕರ್ಣಂ—ಭಾಪುರೆ ! ಬಾಪು ! ನೀನಹುದು ಬೀರರೊಳ್ ಬೀರ! ಕಲಿಗಳೊಳ್ ಕಲಿ ! ೫೫೦

ದುಶ್ಶಾಸನಂ—ಭಲೆ ! ಭಲೆ !

ದ್ರೋಣಾಚಾರ್ಯಂ—ಪೂತುರೇ ಪಾಯಿಕು ! ನೀಂ ತಕ್ಕಂ ಅರ್ಜುನಸೂನು ಎನಿಸಲ್ಕೆ !

ಅಭಿಮನ್ಯು ಮೆಯ್ಯಂ ಪೊಕ್ಕ ಕೂರ್ಗಣೆಗಳಂ ಕಿತ್ತೊಗೆದು ಸುರಿವ ನೆತ್ತರಂ ಲೆಕ್ಕಿಸದೆ ಗದೆಯಂ ಅತ್ತಲಿತ್ತಲ್ ಬೀಸುತುಂ ತಾಗುತುಂ ಅರಿಗಳನೆಚ್ಚಂ. ಕುರುರಾಯಂ ತಲೆಯಂ ತೂಗಿ ಮನದೊಳ್ ಮೆಚ್ಚಿ ಕರ್ಣನಂ ಕುರಿತಿಂತೆಂಗುಂ—ಎಲೆ, ಕರ್ಣ! ಇನ್ನು ಮೀತನಂ ಚಣಂ ಉಳಿಸದಿರ್. ಅವನಿತ್ತಲ್ ಪೊಣರ್ಕೆಯೊಳರೆ

ಪಿಂತಿರ್ದು ಕೈಗಳೆರಡಂ ಕತ್ತರಿಸಿ ಕೆಡವಲಕ್ಕುಂ ! ಬಳಿಕ್ಕಂ ನಿರ್ಣ
ಯಂ ಸುಲಭಂ ! ೫೬೦

ಕರ್ಣನದಂ ಕೇಳ್ದು ಮನದೊಳ್ ನವೆದು ನೊಂದು ತನ್ನೊಳ್ ತಾಂ–ಎನಗೀಯೊಂದುಪದೇಶಂಗೆಯ್ದು ಎನ್ನ ಧರ್ಮ ನೀತಿಯಣಮಂ ಕುಗ್ಗಿಸಿ ಘೋರ ನರಕದ ಪಡಿವಳನಾಗಿಪುದುಂ ನಿನ್ನುಪ್ಪಲ್ತೆ? ಎಂದುಮೆಂದು ನಲುಂಗಿ ನೋವಾಗಿ ಬೇವಾಗಿ ಪಡಿನುಡಿಯಲ್ಕೆ ಮಾತು ಬಾರದೆ ಮರವಟ್ಟಂತೆ ಚಣಂ ಮಿಣ್ಣನಿರ್ದು ತಲೆವಾಗಿ ಕುರುಪತಿಯಪ್ಪಣೆಯಂ ಮನದೆ ತುಂಬಿ ಇಂ ತಳ್ವಿದೊಡೆ ಉಳಿಗಾಲಮಿಲ್ಲೆಂಬುದಂ ಬಗೆಯೊಳಿಟ್ಟು ಕೆಯ್ಯ ಕೂರಂಬು ಸಹಿತಂ ಅಭಿಮನ್ಯುವಿನ ಪಿಂಗಡೆಗೆಯ್ದು ಕೂರಂಬುವಂ ಭೋಂಕನೆ ಸೆಳೆದು ವಿಟ್ಟು ನಿಶ್ಶಂಕೆಯಿಂ ಪಾಂಡವಕುಲ ಪ್ರದೀಪನ ಕೈಗಳೆರಡಂ ಕತ್ತರಿಸಿ ಕೆಡವಿದಂ ! ಕುರುಪತಿಯ ಉಪ್ಪಿಂಗೆ ಬದ್ಧಋಣಿಯಾಗಿ.

ಅಭಿಮನ್ಯು ಕಟ್ಟಚ್ಚರಿಯಿಂ ತೆಕ್ಕನೆ ಪಿಂತಿರುಗಿ ನೋಡಿ ಕರ್ಣನಂ ಕಂಡು ಮೂಂಕರಿಸಿ–ಎಲೆ, ಮರುಳೆ! ಇಂತು ಕಳ್ಳನೊಲ್ ಕಳ್ದು ಕೈಕತ್ತರಿಸಿ ಬಾಳ್ವಾಸೆಯಂ ಸುಡು ! ಹೇಡಿ ! ಚಿಃ ! ನೀನಾವ ಮತಿವಂತನೊ ? ನೀನಾವ ಬೀರನೋ ? ಈ ನಾಣ್ಗೆಟ್ಟ ಬರ್ದುಂಕುವೇಳ್ಕುಮೆ ಚಲದಂಕಂಗೆ ? ತೆಗೆ, ತೆಗೆ ! ನೀನೆನ್ನ ಕೆಯ್ಯಂ ಕತ್ತರಿಸಿದೊಡಂ ಸಂಗರದ ಸಿರಿ ಹಿಂಗುವುದೇಂ? ನೋಡೆನುತುಂ ಸೋರುವ ನೆತ್ತರಂ ಉಟ್ಟುಬಟ್ಟೆಗುಜ್ಜಿ ರಥದಚ್ಚಂ ದಿಮ್ಮನೊದ್ದು ರದ ಗಾಲಿಯೊಳ್ ಮುಂಡುಗೆಯ್ಯಂ ತೂರ್ದು ಗರಗರ ತಿರುಗಿಸಿ ಬೀಸಿ ಒಗೆದು ಗಹಗಹಿಸಿ ನಗುತುಂ–ನೋಡೈ ! ಕಳ್ದು ಕೊಲ್ವ ಪೆಂಬೇಡಿ ! ೫೮೦

ಮರುವಕ್ಕದ ಪಟುಭಟರ್ ನೋಡುತ್ತಿರೆಯಿರೆ ಮತ್ತೊಂದು ಗಾಲಿಯೊಳ್ ಮುಂಡುಗೆಯ್ಯಂ ತೂರಿ ಗರಗರ ತಿರುಗಿಸಿ ಬೀಸಿ ಒಗೆಯಲೊಡಂ ಅರಿಬಲಂ ಮುಗ್ಗರಿಸಿ ಕೆಡೆದು ಸಾಲುಸಾಲಾಗಿ ಉರುಳ್ದು

ಪೊರಳ್ದು ನರಳ್ದುದು ಪ್ರಾಣಸಂಕಟಬಡುತುಂ. ಅರಿಯ ಚಕ್ರಂ ಬಂ
ದುರವಣಿಸಿತೊ? ಜವನ ಜಂಗುಳಿ ಇಳಿಗೆಯ್ತಂದು ಪಾಶಪ್ರೊಗೆದುರು
ಳಿಸಿತೊ? ಎಂದಚ್ಚರಿಬಡುವಂತು ನೆಲಂಗಚ್ಚಿದುದು ರಿಪುದಳಂ.
ಆಗಳ್ ದುಶ್ಶಾಸನನ ಕುಮಾರಕಂ ಕನಲ್ದು ಮಸದೆ ಖತಿಪೊಗರೇರಿ
ಮುಂಬರಿದು–ಎಲವೊ ಕೂಳ! ಗಾಲಿ ತೀರಿತು ಇನ್ನೇಂಗೆಯ್ವೆಂ?
ಬಲ್ಪುಳ್ಳೆಮ್ಮ ಸೇನೆಯೆಂತು ಕೋಳುವೋಯ್ತೆಂತಂತು ನಿನ್ನಂ
ಕೊಚ್ಚಿ ಚೂರು ಚೂರುಗೆಯ್ದು ರಣದೇವಿಗೆ ಬಲಿಗೊಟ್ಟು ಕೈ ೫೯೦
ತೊಳೆದು ಕಳೆವೆನೆನ್ನ ಪಾಪಮಂ! ಇನ್ನಾಯ್ತು ನಿನ್ನಾಟಂ! ಎಂದು
ಕೆಯ್ಯ ಕೂರ್ವಾಳಿಂ ಅಭಿಮನ್ಯುವಿನೆದೆಯಂ ತಿವಿಯೆ ಹಾ, ಶಿವ,
ಶಿವಾ ಎನುತುರುಳ್ದಂ ಧರೆಗೆ!

ಮಝರೆ! ಎಂದೊರಲ್ದುದು ಅರಿಬಲಂ, ಮನಂವೆರ್ಚಿ.
ಮೈವೆರ್ಚಿ. ಬಾಲಕಂ ಬಿಳ್ದೆಡೆಯೊಳ್ ಮುತ್ತಿ ಮುಂದೆಯ್ದು
ಕಾಲೊಳೊದ್ದು ತಂತಮ್ಮ ರೊಚ್ಚಂ ಕಿಚ್ಚಂ ತೀರಿಸಿಕೊಳ್ಳುತಿ
ರ್ದರ್ ದುರುಳ ಕುರುಕುಲಜರ್ ಮನದಣಿಯೆ.

ಹಾ! ಎಂದು ತಹತಹಿಸಿದುದಮರಗಣಂ.

ಕಾಳ್ಗಿಚ್ಚು ಧಗಧಗಿಸಿ ರುಂದ್ರಾಟವಿಯಂ ಕುಡಿನಾಲಿಗೆಯೊಳ್
ನೆಕ್ಕಿ ತಟ್ಟನೆ ನುಂಗಿದವೊಲಾಯ್ತು ಸಂಗರಂ! ೬೦೦

ಓ! ಏಂ ವೇಳ್ವೆಂ? ಎಳನೊಗದೊಳ್ ಕಿರುನಗೆಯಂ ಸೂಸಿ
ತಿರೆಗೊರಗಿರಲ್ ಕಲ್ಪವೃಕ್ಷಂ ತಿರಿಗೆಡೆದುರುಳಿದವೊಲ್; ಕಾಲ್ದೆಸೆ
ಯೊಳ್ ಸಾಲ್ಗೊಂಡು ಕೈದೋಳ್ಗಿಂಬಿನೊಳ್ ಕೆಡೆದ ಕೈದುಗಾರರ
ನಿಡುಹಾಸಿನಲಿ ಅತ್ತಮಿತ್ತಂ ದಿಂಡುರುಳ್ದ ಕುರುಕುಮಾರಕರ್
ನೂರ್ವರೊಳ್ ಮತ್ತಂ ರಥತುರಗ ದಂತಿಗಳೊಳ್ ತಾನೊಂದಾಗಿ!
ಕುರು ಸಮರಲೀಲೆಯಿಂ ಕುಣಿದು ಕುಪ್ಪಳಿಸಿ ರಣರಣಿಸಿ ಸೋಲ್ತು
ಮಿಣ್ಣನಾದನೊ ಎನಲ್ಕೆ ಬಿಗಿದ ಪುರ್ಬಿನಿಂ, ತೆರೆದ ಕಣ್ಗಳಿಂ,

ಸೈಗೆಟ್ಟ ಮೊಗದಿಂ, ಕೆದರ್ದ ಪೊದರ್ದಲೆಯಿಂ, ಮೆಯ್ಯಂ ಪೊಕ್ಕ
ಬಾಣಾವಲಿಯಿಂ, ಜಗಿದು ಜೋರಿಡುವ ಕೆನ್ನೆತ್ತರಿಂ, ಕತ್ತರಿಸಿದ
ಕೈಗಳಿಂ, ನಿಮಿರ್ದ ನವಿರಿಂ ಬಿಗಿರ್ದೆದೆಯ ಕಿಚ್ಚಿನಿಂ ಮೆರೆದ ೬೧೦
ನಭಿಮನ್ಯು ಶಸ್ತ್ರಶಯನದ ನಿಡುಹಾಸಿನೊಳ್ ಕಲಿಪಾರ್ಥನ ಬೀರ
ಸುತನೈಸಿ ಅಸುವಂ ಸಗ್ಗದರಮನೆಯ ಕಾಪಿಗಿಕ್ಕಿ !

ಕುರುರಾಯಂ ಪಗೆಗಿಚ್ಚಂ ತಣಿಸಿ ಸಮಂತು ತನ್ನ ಕುಮಾರ
ಕರ್ ನೂರ್ವರಳಿದ ಎದೆಗಿಚ್ಚಂ ತಣಿಸಿ ಶಿರೋಭಾರವಿಳಿಸಿದೊಂದಾ
ಯತಿಯಿಂ ಇಂತೆಂಗುಂ–ಇಂತೊಂದು ಚಂಡ ಭಟರಿರ್ದು ಎಮ್ಮ
ಪಡೆಯುಮಿರ್ದು ಇಂತಿವನ ಬಲ್ಪಿನೇಳ್ಗೆಗೆಡೆಗೊಟ್ಟು ಕುರುಕುಮಾ
ರಕರ್ಗೆ ಮಿಳ್ತುವಾದಿರಲ್ತೆ? ನೀಮಿನ್ನೆಂತಹ ಪಟುಭಟರೊ? ವೀರಾ
ದೀರರೊ? ಬಳೆಯಂ ತೊಟ್ಟು ಅಂತಃಪುರದೊಳಿರಲ್ ತಕ್ಕರ್ !

ಕರ್ಣಂ ತನ್ನೊಳ್ ಚಿಂತೆವೆತ್ತು ಇಂತೆನ್ನಂ ಅನೀತಿಯುಜ್ಜು
ಗಕೆ ತೊಡರ್ಚಿ ಪಾಳ್ಗೆಯ್ದುದಂ ಭಾವಿಸುತುಂ, ಯೋಚಿಸುತುಂ ೬೨೦
ಮನದೆ ನೊಂದು ನೀರಾಗಿ ಕಡು ಸಂಕಟದೊಳ್ ಪಡಿನುಡಿಯ
ಲಾರದೆ ಕುಲದೈವವಂ ಧ್ಯಾನಿಸುತುಂ–ಮಾದೇವ ! ನಿನ್ನ ಕಾಪಿ
ನೊಳಾಂಗೆಯ್ದ ತಪ್ಪೊಪ್ಪುಗಳಂ ನಿನ್ನಡಿಯೊಳೊತ್ತೆಯಿಡುವೆಂ.
ನೀನೆನ್ನ ಮನ್ನಿಸಿ, ಅಭಿಮನ್ಯುವಂ ನಿನ್ನಡಿಯೊಳ್ ಕಾಪಿಡೈ!
ಸತ್ಕೀರ್ತಿಯ ಪರಿಮಳಂ ಕುಗ್ಗದೆ ಮುಗ್ಗದೆ ಬಾಡದೆ ಪಚ್ಚಪಸು
ರಾಂತಿರ್ಪವೊಲ್ !

ಹಾ, ಮಿಳ್ತುಂಗೆ ಬಿರ್ದಪ್ಪುವ ಹರೆಯಮೆ ? ಎಂದು ಮನ
ದೊಳ್ ಮರುಮರುಗಿ ಕೊರಕೊರಗಿ ಶಾಂತಿಯ ಸಿರಿ ಕುಗ್ಗಿ ತಹ
ತಹಿಸಿದ ಶಕ್ರನ ಕಣ್ಣಾಲಿಗಳೊರತೆಯುಂ ಶತಸಹಸ್ರ ಧಾರೆಯಾಗಿ
ಕೊಡಿವರಿದುದು ಮುಮ್ಮೊಗಂ ಮಡಿದ ಶೋಕದಿಂ. ೬೩೦

ಅಃ ! ಅರಿಕುಲದ ಪೆಮ್ಮಾರಿಗಳ ಬಾಯ್ಗೆಂದೆ ಇಂತೊಂದು

ಜಾನದೋಜೆಯುಂ ಬಿಲ್ಪಿನ ಬಿಲ್ಲೋಜೆಯುಂ ಪಾಂಡು ಕುಲದ
ಕತ್ತುರಿಯುಂ ನಿನ್ನೊಳ್ ಅಳವಟ್ಟುದೆ ಕಂದ! ಎಂದೆಂದು ದಸೆಗೊಡೆ
ಯರ್ ಪಳಯಿಸಿದರ್ ಅಭಿಮನ್ಯುವಿಂಗೊದವಿದಪದೆಸೆಯಿಂ.

ಅಕ್ಕಟಾ! ಇಂತೊರ್ವನಂ ಪಲವು ಧೂರ್ತರ್ ಕೂಡಿ ದಯೆ
ಯಿಲ್ಲದೆ ಪೊಯ್ದು ಕೊಲ್ಲಲಕ್ಕುಮೆ? ಇದೆತ್ತಣ ಧರ್ಮನೀತಿಯೈ?
ಇಂ ಸತಿಗೇಂ ಬಟ್ಟೆಯೊ ? ಪೆತ್ತ ಮಾತೆಗೇಂ ಬಟ್ಟೆಯೊ ? ಕುಲ
ಕೀರ್ತಿ ಇಂತಳಿದುದೆ ? ಹಾಯ್, ಇಂತಪ್ಪ ಧರ್ಮಗೊಲೆಯುಂ
ಮನುಜರ್ಗೆ ಸಲ್ವುದೇಂ? ಇದು ಕೂರ ನಿಶಾಟರ್ಗ್ಗಕ್ಕುಂ! ಪಾಪಿಗಳ್
ಅನೀತಿಯಿಂ ಪ್ರಳಯ ಭೈರವನಂ ಕೀರ್ತಿಮಾಲಾಧರನಂ ಕೊಚ್ಚಿ ೬೪೦
ಕೊಂದು ಮಿಳ್ತುವಿನ ಕೊರಳಹಾರಂಗೆಯ್ದರಲ್ತೆ ! ಹಾ, ಸೌಭ
ದ್ರೇಯ ! ನಿನ್ನಾತ್ಮಕಕ್ಕುಂ ಶಾಂತಿ ! ಮುಕ್ತಿ ! ಎಂದುಮೆಂದು
ತಂತಮ್ಮೊಳ್ ಮರುಗಿದುದು ಅಮರತತಿ.

ಪಡುವಣ ದಿಸೆಯೊಳ್ ಪೊನ್ನೇಸರ್ ಇಂತೊಂದು ಅಪದೆಸೆ
ಯಂ ನೋಡಲಾರೆನೊ ಎನೆ ದುಕ್ಕದಿಂ ಸಂಕಟದಿಂ ಕಳೆಗುಂದಿದ
ವೊಲ್ ಇಳಿವೊಗನಾದಂ! ಮತ್ತಾಗಳ್ ನೀಲಗಗನದಂಚಿನೊಳ್
ಕಡುಗಿ ಮಸಗಿ ಮೈಯೊಡೆದಂಜನದೃಷ್ಟಿಯೊಬ್ಬುಳಿಯುಂ ಪೋಲ್ವ
ಕರ್ಮ್ಗಿಲುಂ ಕುರುಕ್ಷೇತ್ರದೊಳ್ ಧರ್ಮದೊಡ್ಡಂ ಎದುರ್ಚಿ ಮಣ್ಮಳಿ
ಪೋದ ರಕ್ಕಸವಗೆಯ ಕೂರ ಪಾಪದ ಮೊತ್ತಮೊ ಎನೆ ಪರ್ವಿ
ನಾಲ್ದೆಸೆಯುಂ ಮುಸುಂಕಿದತ್ತು ! ದಸದಿಸೆಗಳಿಂ ನರಿನಾಯ್ಗಳುಂ ೬೫೦
ಬೊಳ್ಳಿಕ್ಕಿದುವು ಒಡಲ ಸಂಕಟಮಂ ಸೂಸಿ. ಗಿಡುಮರಂಗಳ
ಕೊಂಬೆಕೊಂಬೆಯೊಳ್ ಕಲಿತ ಹಕ್ಕಿಗಳ್ ಮರುಗಿ ಕೊರಗಿ ಕಕ್ಕಸ
ದನಿಯೊಳ್ ಚೀರಿಟ್ಟುವು ಗಾರುಗೆಟ್ಟವೊಲ್! ಆಗಾಗಳುಂ ತಿರೆಯುಂ
ನಡುಗಿ ನಡುನಡುಗಿ ಒಡಲ ಸಂಕಟಮಂ ಸಾರ್ದತ್ತು ಜನದ ಕಳಸಂ
ಕಳಚಿ ಬಿಳ್ದೊಂದು ಗಾವರದಿಂ! ಸುತ್ತಲೆತ್ತತ್ತಲುಂ ಕಾಕಂ ಘೂಕಂ
ಮಾತ್ತಮೂ ಪರ್ದುಗಳ ಸಂಗರಮಾಯ್ತು ಕುರುಕ್ಷೇತ್ರದ ರಣರಂಗಕೆ
ಪಡಿರಂಗಮೆನೆ ಕೋಲಾಹಲದಿಂ !

# ಚತುರ್ದಶಾಶ್ವಾಸಂ

ಅತ್ತಲಾ ಅರ್ಜುನಂ ಶ್ರೀಕೃಷ್ಣನೊಡಂ ಸಮಸಪ್ತಕರಂ ಬೆಂಬಿ
ಡದಟ್ಟಿ ಜಡಿಕುಟ್ಟಿ ತಾಗಿ, ಕವಡುವಿಜ್ಜೆಯಿಂದೆ ನಂಜಿನುರಿಯನು
ಗುಳ್ದು ತೊಣಕಿ ಕೆಣಕಿ ಕಾಲ್ಕೆರೆದು ಕಾದುವ ಮಂತ್ರತಂತ್ರಂ
ಗಳ ಮಾಟದಾಟದ ಪೇಸಿಕೆಯು ಕುಯುಕ್ತಿಯು ರಣವಿಜ್ಜೆಯುಂ
ಪುಲ್ಲಿಂ ಕಡೆಗಣ್ಚಿ ಕಡುಕಾಯ್ಪಿನಿಂ ಕೂರಂಬುಗಳನೇಸಾಡಿ ಕರಡ
ಮಂ ಬಡಿಗೋಲಿಂ ಸದೆವಂತೆ ಸದೆದು ಊರಗಡಿಯುಂ ದಾಂಟಿಸಿದ
ಬಳಿಕ್ಕಂ, ಶ್ರೀಕೃಷ್ಣಂ ರಥಮಂ ಪೊಳಲ್ಗಭಿಮುಖಮಾಗಿ ತಿರು
ಪಿದಂ.

ಆಗಳೇನೆಂಬೆನೊ? ಪಗಲೊಳ್ ಧೂಮಕೇತುಗಳ್ ದಿಸೆದಿ
ಸೆಯಂ ಮುಸುಂಕೆ, ಆಗಳಾಗಳುಂ ಉಲ್ಕಾಪಾತಂಗಳಾಗೆ, ತಿರೆಯುಂ   ೧೦
ಒಯ್ಯನೊಯ್ಯನೆ ನಡುಗುತಿರೆ, ಹಯಂಗಳ್ ಕಣ್ಣೀರಿಟ್ಟು ಮಣ್ಣಂ
ಗೋರೆ, ತೇರ್ಗಾಲಿಗಳ್ ಪಿಂಜರಿಯುತಿರೆ, ಹಕ್ಕಿಪಕ್ಕಿಗಳ್, ಪರ್ದು
ಕಾಗೆಗಳ್, ಬೆಕ್ಕಸಬೆರಗುಗೊಂಡು ಸಂಕಟಂಬಡುವಂತು ಕರ್ಕಸ
ದನಿಯಿಂ ಎಡೆವಿಡದೆ ಚೀರೆ ಔತ್ಪಾತಕಂ ಅಧಿಕಮಾದುದು ನೋಳ್ಪ
ಕಣ್ಣೆದುರೆ. ಇಂತೆಡೆವಿಡದ ದುರ್ನಿಮಿತ್ತಂಗಳಂ ಮನಗೊಂಡು
ಫಲ್ಗುಣಂ ಕಳಕಳಿಯಿಂ ಇಂತಪ್ಪ ಸೂಚನೆಯುಂ ಏನಾನುಮೊಂದು
ದುರ್ಘಟನೆಯ ಸೂಚನೆಯಿರ್ಕುಮೆಂದು ಭಾವಿಸಿ-ಸ್ವಾಮಿ! ಶ್ರೀ
ಕೃಷ್ಣ! ಇಂದೇಮಿಂತು ದುರ್ನಿಮಿತ್ತಂಗಳ್ ಎಡೆವಿಡದೆ ತಲೆದೋರು
ತಿರ್ಕುಂ? ಇದಂ ಒಳ್ಳಿತಲ್ತು, ಬೀಡೊಳ್ ಆವ ಗಾವರಮಿರ್ಕು

ವೊ? ಮತ್ತಾವ ಭಂಗ ಭವಣೆಯೊ? ಎಂದು ಎನ್ನೊಡಲ್ ತಹತಹಿ ೨೦
ಸುತಿರ್ಕುಂ. ಏಂ ಕತಮಿರ್ಕುಂ? ಸ್ವಾಮಿಾ, ನೀನೇಂವೇಳ್ವೆಂ ?

ಶ್ರೀಕೃಷ್ಣಂ–ಕೇಳ್ ಪಾರ್ಥ ! ಧರೆಯೊಳೆಲ್ಲಾದೊಡಂ ಭಂಗ ಬವಣೆಯಿಲ್ಲದ ಬಾಳಿರ್ಕುಮೆ ? ಸುಕದುಕ್ಕಮನೆಂದುಂ ಸಮದೃಷ್ಟಿಯಿಂ ಕಾಣವೇಳ್ಕುಂ.

ಅರ್ಜುನಂ ಆ ಮಾತಿಂಗೆ ಪಡಿನುಡಿಯದೆ ನಿಡುಸುಯ್ದಂ. ಎರ್ದೆಯೊಳ್ ತುಂಬಿರ್ದ ತಳಮಳಂ ಕರ್ವಂ ಪಿಂಡುವ ಗಾಣದೊಲ್ ಪಿಂಡುತಿರಲ್ ಮನಂ ಸೈಗೆಟ್ಟುದು.

ಶ್ರೀಕೃಷ್ಣಂ ಬಲ್ಮೆಯಿಂ ನಲ್ಮೆಯಿಂ ಕೇಳಿಸಿದನಿಂತು–ಇಂತಿರ್ಪೊಂದು ನಿಮಿತ್ತಂಗಳ್ಗೆ ಸೊಮ್ಮಳಿದು ನಿಡುಸುಯ್ವರೇಂ? ರಣರಂಗಮೆಂದೊಡೆ ಸೋಲು ಗೆಲುವುಗಳಿಲ್ಲದಿರ್ಕುಮೆ? ಎಲ್ಲಂ ಅರಿತುಂ ೩೦
ನುರಿತುಂ ಏಂ ಇಂತಪ್ಪಗಾವರಂ? ಏನಿರ್ದೊಡಂ ಸೈವುದಲ್ಲದೆ ಗತಿಯಿಲ್ಲಂ.

ಅರ್ಜುನಂ–ಎರ್ದೆಯಬೇಗುದಿ ದಹಿಸುತಿರ್ಪುದೆನ್ನಂ. ಚೆಚ್ಚರದಿಂ ಬೀಡಿಗುಯ್ಯುದೆ ಲೇಸು ಶ್ರೀಕೃಷ್ಣ.

ಶ್ರೀಕೃಷ್ಣಂ–ಅವಸರಿಸದಿರ್, ತೇಜಿಗಳ್ ಬಳಲ್ದು ಬೆಂಡಾಗಿರ್ಕುಂ. ಕೊಳದೆಡೆಯೊಳ್ ಮೈಗರ್ಚಿ ನೀರ್ಕುಡಿಸಲಕ್ಕುಂ.

ಅರ್ಜುನಂ–ಅಹುದಲ್ತೆ? ಎನ್ನೊಂದು ತಳ್ಳಂಕದೊಳ್ ಅದ ನೆನೆದೆನಿಲ್ಲಂ. ಪಾಪ, ಎಮ್ಮೆಲ್ಲ ಸಂಕಷ್ಟದೊಳ್ ಪಾಲ್ಗೊಂಡು ಘಾಸಿವಟ್ಟು, ಗಾಯವಟ್ಟು ನಮೆದಿರ್ಪುಂ ಗಡ !

ಅನಂತರಮಾ ಶ್ರೀಕೃಷ್ಣಂ ತೇಜಿಗಳಂ ಬೆನ್ಚಪ್ಪರಿಸಿ ಬಲವಕ್ಕದ ೪೦
ಪಥಮಂ ಪಿಡಿಸಿದಂ. ಮುಂಬಯಣದೊಳ್ ಅಡಿಗಡಿಗೆ ಅಪಶಕುನಂ

ತಲೆದೋರುತ್ತಿರೆ ಪಾರ್ಥಂ ಬೇಸಸದಿಂ ತಳ್ಳಂಕದಿಂ ಸುತ್ತಮುತ್ತಂ
ಮಿಳ್‌ಮಿಳ್ಳನೆ ನೋಡುತುಂ ಶಿರೋಭಾರಮಂ ಕರಂಗಳಿಗಿಳಿಸೆ ದುಕ್ಕ
ದುಮ್ಮಾನಂಗಳ ಕರ್ಗಪ್ಪು ಮೊಗಮಂ ಕಾವಳಿಸಿದುದು. ಇಂತೊಂ
ದು ಅಪಶಕುನಂಗಳ್ಗೆ ಕಾರಣಮಿಲ್ಲದಿರ್ಕುಮೆ? ಎಂಬೊಂದು ಚಿಂತೆ
ಕಾಡುತಿರ್ದುದು ಮನಂ.

ಶ್ರೀಕೃಷ್ಣಂ ಬಿಂಜಮೆಟ್ಟಿಸಿಂದಿಳಿತರ್ಪೊಂದು ಪೊನಲುಂ ತಗ್ಗಿ
ನೆಡೆಯೊಳ್ ತಂಗಿ ಕರ್ಮಣ್ಣ ಕಡಾಯಮೆಂಬಂತೆ ತೋರಿಪರ್ಪ
ಕೊಳದೊಳ್ ತುಂಬಿ ಕೋಡಿವರಿವ ಜಲರಾಶಿಯ ಬಳಿಯೊಳ್
ತೇರಂ ಬಿಟ್ಟು ತೇಜಿಗಳಂ ಮೈಗರ್ಚೆದಂ. ಎತ್ತಲೆತ್ತಲುಂ ತಣ್ಪಿನ ೫೦
ತನಿರಸಮುಂಡು ಪಚ್ಚ ಪಸುರ್ಪೊತ್ತ ಬಸಂತರಾಯನುರ್ಕುಂ
ಸೊರ್ಕು ಸೋರ್ದಪ್ಪೊಲ್ ಗಿಡು ಮರ ಬಳ್ಳಿಗಳ ಬೀಡುಂ ನಾಡುಂ
ತಣ್ಣನೆಯ ಬನಗಾಳಿಯನೋಲೈಸುತಿರ್ದುದು.

ಪಾರ್ಥಂ–ಸ್ವಾಮಿ, ಬೀಡಿನ್ನುಂ ದೂರಮಿರ್ಪುದಲ್ತೆ ?

ಶ್ರೀಕೃಷ್ಣಂ–ಅಹುದು.

ಅರ್ಜುನಂ–ಆಂ, ಪಗಲಿರುಳ್ ನಿನ್ನೊಡಸಿರ್ದೊಡಂ ನಿನ್ನ
ಮೈಮೆಯಂ ಇನ್ನೆಬರಂ ಅರಿತುಕೊಂಡೆನಿಲ್ಲಂ.

ಶ್ರೀಕೃಷ್ಣಂ ನಗುನಗುತುಂ ಸಲ್ಗೆಯಿಂ–ಕೇಳ್ ಅರ್ಜುನ !
ಇಂತು ಮನಂಗೆಟ್ಟು ತಹತಹಿಸುತಿರ್ದೊಡೆ ಅರಿತುಕೊಳ್ವುದೆಂತೈ?
ಆಸೆಗೀಸೆಗಳಂ ಪುಲ್ಗೆ ಕಡೆಗಣ್ಚಿ ನಿರಾಕುಳದಿಂ ಯೋಚಿಸಲಕ್ಕುಂ. ೬೦

ಅರ್ಜುನಂ ತನ್ನ ಮನಮಂ ಮುಸುಂಕಿದ ಅಪಶಕುನಂಗಳ
ಜಂಕಣೆಯ ಮರ್ಬಿನೊಂದು ಜಾಲದಿಂ ಸೈಗೆಟ್ಟು ಗಾರುಗೆಟ್ಟು
ಚಿಂತೆಯೊಳ್ ಕೆಮ್ಮನೆ ಮುಳುಗಿರ್ದೊಡಂ ಅರೆಮುಗಿದ ಕಣ್ಗಾ

ವರೆಯೊಳ್ ಜಲರಾಶಿಯುಂ ನೋಡುತುಂ ಇಂತೆಂಗುಂ–ಸ್ವಾಮಿ,
ಏನಿಲ್ಲದಿರ್ದೊಡಂ ಮನಕಿಸಿತು ಶಾಂತಿ ಸಮಾಧಾನಗಳಿರಲಕ್ಕುಂ.
ಇದಂ ಆಸೆಗೀಸೆಗಳ ವಿಚಾರಮಲ್ತು. ಇಂತೊಂದು ಆಕುಲಂ ಆವ
ಕಾರಣಮೊ ಆನರಿಯೆಂ. ಚಣಚಣಂ ಮನಂ ಬೆಂಡಾಗುತಿರ್ಕುಂ.

ಶ್ರೀಕೃಷ್ಣಂ–ಆಕುಲ ನಿರಾಕುಲಗಳೆರಡುಂ ನಿನ್ನೊಳಗಿರ್ಕುಂ.
ನೀನಾವುದಂ ನೆನೆದಪೆಯೊ ಅದಲ್ತೆ ಕೈಗೂಡುಗುಂ ? ಆನಂದಮೆಂ ೨೦
ದೊಡೆ ಆನಂದಂ. ಆಕುಲಮೆಂದೊಡೆ ಆಕುಲಂ !

ಸುಯ್ಯಾನೆ ಸುಯ್ದು ಮರುಗುತಿಹುದೊ ಎನಲ್ಕೆ ಸುಯ್
ಸುಯ್ಯಾನೆ ಬೀಸುತಿರ್ದುದು ಪೞಂಚಲೆಲರು. ತೋರ ಮರಂಗಳ
ಪಾರುಗೊಂಬೆಗಳನೇರ್ದು ಕಿರ್ರನೆ ಚಿರ್ರನೆ ಚೀರ್ವ ಕಪಿಗಳ ದನಿ
ಯೊಳ್ ಪೊದಳ್ದ ದುಗುಡಂ ಮನಮಂ ತಟ್ಟಿ, ಮತ್ತಂ ಬಾಸೆವಕ್ಕಿ
ಗಳ ಕಡುಸಂಕಟದ ಗಜಬಜಂ ಕಿವಿಯಂ ಕಿಟ್ಟಿ ಅರ್ಜುನಂ ಒಡಲು
ರಿಯಿಂ ಬೆಂದು ತಾಳಲಾಗದ ಬೇವಸದಿಂ ಬೆಸಗೊಂಡಂ–ಸ್ವಾಮಿ!
ಆವೊಂದು ಕರ್ಮಗತಿಯುಂ ಇಂತೆಮ್ಮಂ ಕಾಡುತಿರ್ಪುದೊ ಕಾಣೆಂ.
ನಿನ್ನೊಂದು ಎಣೆಯಿಲ್ಲದ ಮೈಮೆಯಿಂ, ಇನ್ನೆಬರಂ ಇಂತಪ್ಪ ಕೂಳ
ರೊಳ್ ಪೊಣರ್ದು ಸಾಸಂಬಟ್ಟೆಂ. ಇಂ ನೀನೇ ಮುಂಗತಿಯ ೩೦
ನಾರೈದು ಕವಡುಬಿಜ್ಜೆಯ ಮಾಯಮಾಟದಾಟದ ಪೊಣರ್ಕೆಯುಂ
ಮುಗಿರ್ಚಿ ಶಾಂತಿಯಂ ಕೈಗೂಡಿಸಿ ನಾಡಿನೇಳ್ಗೆಗೆ ದಾರಿಗೆಯ್ಯಲಕ್ಕುಂ.

ಶ್ರೀಕೃಷ್ಣಂ–ಬೀರರ್ಗೆತ್ತಣ ಚಿಂತೆ ? ಪೊಣರ್ಕೆಯೊಳ್ ಸಾವು
ನೋವುಂ ಮೊಸಗೀಸಂ ಪೊಸತೇಂ ನಿನಗೆ ? ಜುದ್ಧಂ ಪುಟ್ಟುಗುಂ
ಜಿದ್ದಾಜಿದ್ದಿನಿಂದಲ್ತೆ ? ಜಿದ್ದಿರ್ದೆಡೆಯೊಳ್ ಧರ್ಮಕ್ಕೆಲ್ಲಿಯ ರಕ್ಷೆ ?

ಅರ್ಜುನಂ–ಸ್ವಾಮಿ, ಇಂತಿದರೊಳ್ ಮನಂ ಬೆಂದು ಬೇವಾ
ಗಿರ್ಕುಮೆನೆ ಏನರ್ಥಂ ?

ಶ್ರೀಕೃಷ್ಣಂ–ಇಂತೀವೊಂದು ಸಿಸು ಪ್ರಶ್ನೆಗೆ ಏವೇಳ್ವೆಂ ? ನೀಂ
ಬಲ್ಲಿದಂ, ತಿಳಿದು ನೋಡೈ ! ೪೦

ಅರ್ಜುನಂ–ಶ್ರೀಹರಿ! ಎಲ್ಲಂ ಬಲ್ಲೆನಾದೊಡಂ ಇಂದೆನ್ನ ಮನದ ಗಾವರಂ ಸಹಿಸಲಾಸಲ್ಲಂ. ಆವ ಕಾರಣಮೊ ಇಂತೊಂದು ಪೊಸವಗೆಯುಗ್ಗಿಯೊಳ್ ಸುಟ್ಟು ಬೇಯುತಿರ್ಪೆಂ.

ಶ್ರೀಕೃಷ್ಣಂ–ಸೈರಿಸು....ಸೈರಿಸು.

ಅರ್ಜುನಂ–ನಿನ್ನಾಳವಂ ಅರಿಯಲಾರ್ಗಳವು? ಆಂ ತೃಣಂ, ನೀಂ ಲೋಕೋತ್ತರಂ!

ಶ್ರೀಕೃಷ್ಣಂ–ತೃಣಂ ವ್ಯರ್ಥಮಲ್ತು. ಅಣುತೃಣಗಳೊಂದುಗೂಡೆ ಬೃಹತ್ತಲ್ತೆ?

ಅರ್ಜುನಂ–ಏಂ ವೇಳ್ವೆನೊ ಭಗವನ್? ನೀನೇ ನಿರ್ಣಾಯಕನಿರಲ್ ಎನ್ನದೇನಿರ್ಕುಂ? ೧೦೦

ಶ್ರೀಕೃಷ್ಣಂ–ಜಗದೊಳ್ ಪುಟ್ಟಿನಿಂ ಸಂಕಷ್ಟದೊಳ್ ಪಳಂಗಿದರ್ಗೆ ಮೇಣ್ ರಣರಂಗದೊಳ್ ಅರಿಗಳಂ ಕೊಚ್ಚಿ ಕಂಡರಿಸಿ ಘೋರ ಪ್ರಾಣ ಸಂಕಟಂ ಮೂಡಿಸಿದರ್ಗೆ ಇದೆತ್ತಣ ತಳ್ಳಂಕಂ ಪೇಳ್? ಅರಿಗಳ ನೋವೆಂತಂತು ನಮ್ಮಾ ನೋವುಂ ಗಡ! ಮತ್ತೇಂ ನೋವೆಂ? ಬೇವೆಂ? ಮೂರ್ಖರ ಮಾಳ್ಕೆಯೊಳ್?

ಆಗಳ್ ಅರ್ಜುನಂ ತನ್ನೊಳ್ ತಾಂ ಯೋಚಿಸುತುಂ ಭಾವಿಸುತುಂ ಕಲಂಕುವಗೆಯೊಳೊಟ್ಟಯಿಸಿದ ತಳ್ಳಂಕವಂ ಅಂಕೆಯೊಳಿಕ್ಕಿ ಭಕ್ತನೊಂದಾಯತಿಯಿಂ ಕೇಳಿಸಿದಂ–ಎಲ್ಲಂ ನಿನ್ನೊಳೊತ್ತೆಯಿರಲ್ಕೆ ನೀನೇ ಕಾಪು ಗಡ! ನೀನೇ ಶಾಂತಿ ಗಡ!

ಶ್ರೀಕೃಷ್ಣಂ–ಕೇಳ್ ಅರ್ಜುನ! ಪಿಂತೆ ಭೃಗು ಮುನಿಯುಂ ೧೧೦ ತನ್ನ ಸತಿಯೊಡಂ ಈ ಬಿಂಜವೆಟ್ಟನೊಳೊಂದು ಆಶ್ರಮವಕಟ್ಟಿಯುಂ ತಪಸ್ಸಾಚರಿಸುತಿರ್ದ ಪುಣ್ಯದಾಣಮಿದುಂ. ಅನುಗಾಲಂ ಬತ್ತದೆ ಪೊನಲ್ವರಿವೀ ಪುಣ್ಯವಾರಿಯುಂ ಮುನಿಯ ಯೋಗಬಲದಿಂ ಪುಟ್ಟಿ ಲೋಕೋಪಕಾರಂಗೆಯ್ಯುತಿರ್ಪುದು. ಇದರೊಳ್ ಮಿಂದೊಡೆ

ಸಕಲ ದುರಿತಂ ನಿವಾರಣೆಯಪ್ಪುದು ನೀಂ ಬಲ್ ಬಳಲ್ದಿರ್ಪೈ. ಈ ಪುಣ್ಯವಾರಿಯೊಳ್ ಮಿಂದು ದಣಿವಾರಿಸಿದಬಳಿಕ್ಕಂ ಮುಂಬ ಯಣಂ.

ಆಗಳ್ ಪೆರ್ಮರವೊಂದು ಬೇರುಡಿದು ದೊಪ್ಪನೆ ಬಿಳ್ದುದು ದಾರಿಗಡ್ಡಲಾಗಿ.

ಅರ್ಜುನಂ–ಇದೇನಚ್ಚರಿ ! ಮಳೆಗಾಳಿಯ ಮುಸಕಮಿಲ್ಲದೆ ಇಂತಪ್ಪ ಪೆರ್ಮರಂ ಬೇರುಡಿದು ಬೀಳಲ್ಕೇಂ ಕಾರಣಂ ? ೧೨೦

ಶ್ರೀಕೃಷ್ಣಂ–ಎಲ್ಲಂ ಕಾಲಧರ್ಮಮಲ್ತೆ ?

ಅರ್ಜುನಂ–ನಿಕ್ಕುವಂ. ಆದೊಡಮಿದು ಅಪಶಕುನಮಲ್ತೆ ? ರಣದೊಳಾವ ಅವಗಡವೊ, ಧರ್ಮಜಂ ಪದ್ಮವ್ಯೂಹಮಂ ಬೊಕ್ಕನೊ ? ಏನಿದರರ್ಥಂ ?

ಶ್ರೀಕೃಷ್ಣಂ–ಎಲ್ಲರುಂ ಪುಟ್ಟುಗುಂ ಧರ್ಮಕರ್ಮಮಂ ಮುಸ ಗಲಲ್ತೆ ?

ಅರ್ಜುನಂ–ನಿಕ್ಕುಮಂ.

ಶ್ರೀಕೃಷ್ಣಂ ಪಡಿನುಡಿಯುದೆ ತೇಜಿಗಳಂ ಬಲವಕ್ಕದ ಬಯ ಲೊಳ್ ನಡೆಸಿ ಗರಿಕೆ ಪಾಸಿನ ಪಚ್ಚವಯಲಂ ದಾಂಟಿ ಕೊಳದ ತೀರದೆಡೆಗೆ ಸಾರ್ದಂ. ಅರ್ಜುನಂ ಮುಡಿಗೆಯಂ ಕಳೆದು ಮಣಿ ಮುಕುಟಮುಂ ಉತ್ತರೀಯಮಂ ರಥದೊಳಿಕ್ಕಿ ನೀರ್ಗಿಳಿದಂ. ಶ್ರೀ ಕೃಷ್ಣಂ ಪೀತಾಂಬರ, ಮುಕುಟ, ಚಾವಟಿ ಮುಂತಪ್ಪ ಎಲ್ಲ ವಸ್ತುಗಳಂ ಒಟ್ಟಯಿಸಿಟ್ಟು ನೀರ್ಗಿಳಿದು ತನ್ನೊಳ್ ತಾಂ ಯೋಚಿ ಸುತುಂ ಜಲಮಂ ಬೊಗಸೆಯೊಳೆತ್ತಿ ಕುಡಿದಂ. ೧೩೦

ಇಕ್ಕೆಲದ ಪಚ್ಚವಾರ್ಧಿಯುಂ ವೃಕ, ಸೂಕರ, ಸರೀಸೃಪ

ಕಾಳೋರಗಮುಂತಪ್ಪ ಪ್ರಾಣಿ ಘೀಕರವಾಗಿರ್ದೊಡಂ ನಿಡು ಸರುವಿನೊಳಾವ ಸಪ್ಪುಳಮುಣವಿಲ್ಲದೆ ಮಸಣಮೌನಂ ಮುಸುಂಕಿ ಎರ್ದೆಯುಂ ಮುಟ್ಟಿ ಜಗದರಿಕೆಯೊಳ್ ಮನವಿಟ್ಟು ಬೊಗಸೆಯೊಳ್ ನೀರೆತ್ತಿ ಪೀರ್ದನಾ ಅರ್ಜುನಂ; ಒಡಲ್ ತುಂಬಿ ಮನಃಪ್ರಾಣಂ ೧೪೪ ಗಳ ದಗೆ ಮುಡಿವನ್ನಂ ಮತ್ತೆ ಮತ್ತೆ ಬೊಗಸೆಯೊಳ್ ನೀರೆತ್ತಿ ಕುಡಿದಂ.

ಈರ್ವರುಂ ನೀರೊಳ್ ಮುಳುಗೆದ್ದು ಜಳಕವಾಡುತಿರೆ ಶ್ರೀಕೃಷ್ಣಂ ಮನದೊಳ್ ಯೋಚಿಸಿದನಿಂತು–ಸೋದರಳಿಯನಳಿವಂ ಬೇರೊಂದು ಮಾಳ್ಕೆಯೊಳ್ ತಿಳಿಸಲಿದೆ ತಕ್ಕ ಸಮಯಂ.

ಅರ್ಜುನಂ ಮೆಯ್ಯ ಬಳಲ್ಕೆಯುಂ ಮುಡಿಸೆ ನೀರೊಳ್ ತಣ್ಣಗೆ ಮುಳುಂಗಿರೆ ಶ್ರೀಕೃಷ್ಣಂ ಮೆಲ್ಲನೆದ್ದು ಕೊರಳೆತ್ತಿ ದನಿಯಣಂ ಮಾರ್ಪಡಿಸಿ ಚಿತ್ತರಿಸಿದಂ–ಕೇಳೈ ಸುರೇಂದ್ರಕುಮಾರ! ನಿನ್ನ ಬಲ್ಮೆಯ ಬಿಲ್ಲೋಜೆಯ ಬೀರ ಕುಮಾರಕಂ ಪದ್ಮವ್ಯೂಹದ ರಣದಗ್ಗಿಯಂ ಬೊಕ್ಕು ರಿಪುಗಣಮಂ ಕೊಚ್ಚಿ ಕಂಡರಿಸಿ ರಣಕಣದೊಳ್ ೧೫೦ ಇಂದ್ರಚಾಪದ ಹಾಲಾಹಲಮಂ ಪರಿಸಿ, ಕೌರವ ಕುಮಾರಕರ್ ನೂರ್ವರಂ ತಲೆದರಿದು ರಣಕಾಳಿಗೆ ಬಲಿಕೊಟ್ಟು ಪೆಣಂಗಳ ಬಣಂಬೆಯೊಟ್ಟಿಲ ಣದ ಕಾಯ್ಪಿಂಗೆ ವೈವರ್ಚಿ ಸಗ್ಗಸಿರಿಗೆ ಮಾರುವೋಗಿ ಸಗ್ಗಮನಡರ್ದಂ ರಣರಂಗದೊಳ್ ಮೈವಿಟ್ಟು !!

ಘೋರ ಸುದ್ದಿಯಂ ಸಾರ್ದು ತೆಕ್ಕನೆ ತಾನಲ್ಲದೊಲ್ ಮುಳುಂಗಿದಂ ಶ್ರೀಕೃಷ್ಣಂ.

ಬೇಸಗೆಯ ಬಯಲೊಳ್ ಭಯಂಕರ ಸಬುದದಿಂ ಸಿಡಿಲ್ ಬಂದೆರಗಿದಂತೆಯುಂ ಅಂಬರಂ ಕಳಚಿ ತಲೆಯ ಮೇಲುರುಳಿದಂತೆಯುಂ ಎಣೆಯಿಲ್ಲದ ದುಕ್ಕದಿಂ ಮನಂ ಜಜ್ಜರಿವೋಗಿ, ಎರ್ದೆಗರಗಿ,

ನೀರಾಗಿ ಪ್ರಾಣಂ ತಳಮಳಿಸಿ ಮೈ ಗದಗದಿಸುತಿರೆ, ನಡುಗಿ ಕಂಬನಿ ೧೬೦
ಯಂ ಸೂಸುತುಂ ಅರ್ಜುನಂ ಗದ್ಗದ ದನಿಯಿಂ—ಶ್ರೀಕೃಷ್ಣಾ! ನೀಂ
ಕೇಳ್ದಿಯಲ್ತೆ ಅಶರೀರವಾಣಿಯಂ ?

ಶ್ರೀಕೃಷ್ಣಂ—ಅಹುದು ಪಾರ್ಥ !

ಅರ್ಜುನಂ—ಏವೇಳ್ವೆಂ........ಏವೇಳ್ವೆಂ ಸ್ವಾಮೀ ?

ಆಗಳ್ ಶ್ರೀಕೃಷ್ಣಂ ಮೈದುನನ ಕೈಯಂ ನಲ್ಮೆಯಿಂ ಬಲ್ಮೆ
ಯಿಂ ಬಿಗಿಪಿಡಿದು ಮೈದಡವಿ ಸಂತೈಸಿ ಕರುಣೆಯಿಂ ಕೇಳಿಸಿದಂ—
ಅರ್ಜುನ, ಎರ್ದೆಗೆಡದಿರ್ ಸುಖದುಃಖಂ ಸಮಭಾವದಿಂ ಸೈರಿಸ
ಲಕ್ಕುಂ. ಗಗನಂ ಗಗನಾಕಾರಂ ಗಡ ! ಬೀರಂ ಬೀರೋಚಿತಂ
ಗಡ ! ಇಂತು ಕುವರನ ಕೀರ್ತಿ ಪರಿಮಳಂ ಶಾಶ್ವತಮಿರ್ಕುಂ !
ಆಚಂದ್ರಾರ್ಕಮಿರ್ಕುಂ ! ಇದಲ್ತೆ ಪಾಂಡುಕುಲದ ವೀರ ವಿಜಯ ೧೭೦
ದರ್ಪಣಂ ! ಇಂದ್ರಧನುರೈಂದ್ರ ಕೀರ್ತಿ ಕೇತನಂ !!

ಅರ್ಜುನಂ—ಜಸಮಿರ್ದೊಡಂ ಸಂತಸದುಕ್ಕೆವಮಿಲ್ಲವಾಯ್ತು
ಶ್ರೀಕೃಷ್ಣ !

ಶ್ರೀಕೃಷ್ಣಂ—ಯೋಗಮಿರ್ಪನಿತು ಭಾಗ್ಯಂ.

ಅರ್ಜುನಂ—ಎಲ್ಲ ನಿನ್ನ ಮಾಯೆ ಕೃಷ್ಣಾ !



| ಪುಟ | ಶುದ್ಧ | ಅಶುದ್ಧ | ಪಂಕ್ತಿ |
|---|---|---|---|
| ೧೬ | ಎಚ್ಚರಿರಲಕ್ಕುಂ | ಎಚ್ಚರಲಕ್ಕುಂ | ೮ |
| ೫೦ | ಒರ್ವರ್ಡಿ | ಒರ್ದರ್ಡಿ | ೫ |
| ೫೮ | ಅರಮನೆ | ನೆರೆಮನೆ | ೧೭ |
| ೬೮ | ಬೆಳ್ಗಂಪಿನ | ಬೆಂಳ್ಗಂಪಿನ | ೫ |
| ೮೮ | ಅಟವಿಯೊಳ್ | ಅಟವಿಯೊಳ್ . | ೭ |
| ೯೩ | ಮುಳ್ಳಂಮೆಟ್ಟ | ಮಳ್ಳಮೆಟ್ಟ | ೨೪ |
| ೧೦೬ | ಅರಿಗಿರ್ಕುಂ | ಅಠಿಗಿರ್ಕುಂ | ೩ |
| ೧೦೪ | ಅಹಹ, | ಅಹ,ಹ | ೧೫ |
| ೧೦೯ | ಚೆಂದಂ | ಚೆದಂ | ೧೯ |
| ೧೧೪ | ವನಲಕ್ಷ್ಮಿಯು | ವನಲನಕ್ಷ್ಮಿಯು | ೧೨ |
| ೧೨೩ | ಕೊಳುಗುಳದ | ಕೊಳಗುಳದ | ೧ |
| ೨೩೧ | ಬಾಣಂಗಳ | ಬಾಣಂಗುಳ | ೨೪ |
| ೨೩೩ | ಕೋಳ್ಕಿಸರ | ಕೋಲ್ಕಿಸರ | ೨೨ |
| ೨೩೬ | ತಿಕ್ಕಿತೆಕ್ಕೆಯಾಡುವ | ತಿಕ್ಕೆತೆಕ್ಕೆಯಾಡುವ | ೨೧ |
| ೧೩೮ | ಎದುರ್ಚಿದರಂ | ಎದರ್ಚಿದರಂ | ೨೦ |
| ೧೪೦ | ಪೊರವೊಟ್ಟರ್ | [illegible]ರವೊಟ್ಟರ್ | ೨೨ |
| ೧೪೧ | ಲಾಗದೆಂಬೊಂದು | [illegible]ಗದೆಂಬೊಂದು | ೧೮ |
| ೧೪೪ | ಬಡುತ್ತೆ | [illegible]ಡುತ್ತೆ | ೨೪ |
| ೧೪೯ | ಮೇಲುಸಿರ್ | ಮೇಲ್ದು ಸಿರಿ | ೨ |
| ೧೮೫ | ಧರ್ಮರಾಯಂ | ಧಮುರಾಯಂ | ೩ |
| ೨೨೪ | ಕೈದುಗಾರರ | ಕೈಮುಗಾರರ | ೧ |
| ೨೫೫ | ರಣದ | ಬ ಣದ | ೧೭ |

# ಮಲ್ಲಿಕಾ ಕೃತಿಗಳು

೧) ಜೀವನಗಂಗಾ
೨) ಡಾ|| ಅಘೋರ
೩) ಡಾ|| ಕಮಲೇಶ್
೪) ವಂದೇ ಮಾತರಂ
೫) ಅನಂತಾನಂತದೆಡೆಗೆ
(ಕಥಾ ಸಂಕಲನ)
೬) ಶ್ರೀಮುಖಿ
೭) ಬಹುರತ್ನಾವಸುಂಧರಾ
೮) ರತ್ನಗರ್ಭಾವಸುಂಧರಾ
(ಕವಿತಾ ಸಂಕಲನ)
೯) ಪೂಜಾವಸಾನ ಸಮಯೇ....!
೧೦) ಧ್ಯಾನಾವಸಾನ ಸಮಯೇ....!
(ಪೌರಾಣಿಕ ನಾಟಕ)
೧೧) ಪುಣ್ಯಪಯೋನಿಧಿ
೧೨) ಪುಣ್ಯಾಭಿಸಾರ
(ಇವುಗಳ ಪ್ರತಿಗಳು ಮುಗಿದಿವೆ)
ಎರಡನೆಯ ಮುದ್ರಣಗಳು
(ಸಾನೆಟ್ಟುಗಳು)
೧೩) ತರಂಗಿಣಿ
(ಕಥಾ ಸಂಕಲನ)
೧೪) ಸುಧಾಮಣಿ
೧೫) ರಮಣೀಮಣಿ
೧೬) ಲಿಯೋನಾ
೧೭) ಶ್ರೀಹರ್ಷಲಾ
೧೮) ವೈಶಾಖೀ ಪರ್ವ
೧೯) ಫಾಲ್ಗುಣೀ ಪರ್ವ
(ಕಾದಂಬರಿಗಳು)
೨೦) ಮನೋನ್ಮಣಿ
೨೧) ಸಂತ್ರಾಸಿನಿ
೨೨) ಆಸೆಯ ಸುಳಿಯಲ್ಲಿ

# ಮಲ್ಲಿಕಾ ಕೃತಿಗಳು

(ಕವಿತಾ ಸಂಕಲನ)

೨೩) ಗಗನ ಕುಸುಮ
೨೪) ಜೀವನ ಕುಸುಮ
೨೫) ಕಸ್ತೂರಿ ಮಾಲಿಕಾ
೨೬) ಮಂದಾರ ಮಾಲಿಕಾ
೨೭) ಚಂಪಕ ರಾಜಿ
೨೮) ಬಕುಳ ರಾಜಿ
೨೯) ವಿಜಯ ಗಾಥಾ
೩೦) ಗಾನ ತೀರ್ಥ
೩೧) ನಾದ ಬಿಂದು
೩೨) ಕಲ್ಯಾಣ ಭಾರತಿ (ಅಚ್ಚಿನಲ್ಲಿ)
೩೩) ಕಾವ್ಯಾನಂದ ನಂದಿನಿ
೩೪) ಭಾವಾನಂದ ನಂದಿನಿ

(ಸಂಜೀವನ ಕಾವ್ಯ)

೩೫) ರಾಗಾನುರಾಗಿಣಿ
೩೬) ಉತ್ತರೋತ್ತರಣಿ
೩೭) ಮಂಗಳ ಭಾರತಿ

(ಗದ್ಯ ಕಾವ್ಯ)

೩೮) ಐಂದ್ರ ಕೀರ್ತಿ ಕೇತನಂ

(ಉಪನಿಷತ್ಕಥಾ)

೩೯) ಕೃತಂ ಸ್ಮರ ಕ್ರತುಂ ಸ್ಮರ

(ಶಿಶು ಸಾಹಿತ್ಯ)

೪೦) ದೂರ ದೇಶದಲ್ಲಿ
೪೧) ಬೆಳದಿಂಗಳ ರಾತ್ರಿ
೪೨) ವಿಶೇಷ ಸುದ್ದಿ
೪೩) ರಂಗನ ಸಾಹಸ
೪೪) ಓಹಿಯೋಜ ಸರೋವರ
೪೫) ಕೌಶಿಕನ ಗೊಂಬೆ

---

ಲಕ್ಷ್ಮೀ ಪ್ರಕಾಶನ
170, ಲ್ಯಾಂಗ್ ಫೋರ್ಡ್ ರೋಡ್, ಬೆಂಗಳೂರು-560 025